# ಮುನ್ನುಡಿ

—( ೧ )—

ಶ್ರೀರಾಘವೇಂದ್ರಸ್ವಾಮಿಗಳು ವೈಷ್ಣವ ಸ್ವಾಮಿಗಳಲ್ಲಿ ಅತ್ಯಂತ ಪ್ರಸಿದ್ಧರು, ಲೋಕಪ್ರಿಯರು, ಭಕ್ತರಂಜಕರು. ಮಹಾವಿಭೂತಿಗಳ ಚರಿತ್ರೆಗಳು ಗಹನವಾಗಿರುವಂತೆ ಗೂಢವೂ ಆಗಿರುತ್ತವೆ ಸಾಮಾನ್ಯ ಪುರುಷರಿಗೂ ಅದ್ವಿತೀಯರಾದ ವಿಭೂತಿಗಳಿಗೂ ಇರುವ ಭೇದವೇ ಇದು. ಸಾಮಾನ್ಯ ಜನರ ಜೀವನ ಚರಿತ್ರೆಗಳಲ್ಲಿ ನಮಗೆ ತೀರ ಸಾಮಾನ್ಯವಾದ ಸಂಗತಿಗಳೇ ಕಂಡುಬರುತ್ತವೆ. ಸಾಮಾನ್ಯವಾಗಿ ಉಂಡುಟ್ಟು ಸುಖದಿಂದಿದ್ದು, ಹೆಂಡಿರು-ಮಕ್ಕಳೊಡನೆ ಆದಷ್ಟು ಪ್ರೀತಿಯಿಂದ ಸಂಸಾರವನ್ನು ಸಾಗಿಸಿ, ಪ್ರಪಂಚದಲ್ಲಿ ಯಾವ ಮಾತಿನ ವಿಷಯವಾಗಿಯೂ ಆಳವಾದ ವಿಚಾರವನ್ನು ಮಾಡದೆ, ಒಂದು ದಿನ ಸತ್ತುಹೋಗುವದು-ಇದು ಸಾಮಾನ್ಯ ಜನರ ಸಂಸಾರದ ರೀತಿ. ಇದಕ್ಕೆ ವಿರುದ್ಧವಾಗಿ, ವಿಭೂತಿಗಳ ಅಥವಾ ಮಹಾ ಪುರುಷರ ಜೀವನವೆಂದರೆ ಧ್ಯೇಯಮಯ ಜೀವಿತ. ಹೊಟ್ಟೆತುಂಬಿಕೊಳ್ಳುವದೂ ಸಂಸಾರಸಾಗಿಸುವದೂ ಇವು ಪ್ರವಾಹಪತಿತವಾದ ಸಂಗತಿಗಳೆಂದು ಸ್ವೀಕರಿಸಿ, ಜೀವನದಲ್ಲಿ ಯಾವುದೊಂದು ಗುರಿಯನ್ನಿಟ್ಟುಕೊಂಡು, ಎಂತಹ ಎಡರುಗಳೊದಗಿದರೂ ಎದೆಗುಂದದೆ, ಅವುಗಳೆಲ್ಲವುಗಳಿಗೂ ಎದೆಗೊಟ್ಟು, ಸಂಸಾರದ ಸೆಳವಿನಲ್ಲಿ ಇದಿರು ಈಸಿಯಾದರೂ ತಮ್ಮ ಉದಾತ್ತವಾದ ಧ್ಯೇಯವನ್ನು ಸಾಧಿಸಿಕೊಳ್ಳಲು ಪ್ರಯತ್ನಮಾಡುವದು ಇದು ವಿಭೂತಿಗಳ ಜೀವನದ ಗುಟ್ಟು. ಶ್ರೀರಾಘವೇಂದ್ರಸ್ವಾಮಿಗಳವರ ಜೀವನಚರಿತ್ರೆಯಲ್ಲಿ ಈ ವಿಭೂತಿಜೀವನದ ಉಚ್ಚವಾದ ಮಾದರಿಯು ವಾಚಕರಿಗೆ ಕಂಡುಬರುವದು.

ಸಾಮಾನ್ಯ ಜನರು ಶ್ರೀರಾಘವೇಂದ್ರಸ್ವಾಮಿಗಳ ಆರಾಧನೆಯನ್ನು ಮಾಡುವುದೇನೂ ವಿಶೇಷವಲ್ಲ. ಏಕೆಂದರೆ, ಸಾಮಾನ್ಯ ಜನರಲ್ಲಿ ಅನೇಕರು ಕೇವಲ ಯಾವುದೊಂದು ಕಾಮನೆಯನ್ನು ಮನಸ್ಸಿನಲ್ಲಿ ಇಟ್ಟುಕೊಂಡು, ಅವರನ್ನಾರಾಧಿಸುವವರೇ ಬಹಳ ಜನ. ಇಂತಹ ಜಡ ಜೀವನವು ಸಹ, ಶ್ರೀಸ್ವಾಮಿಗಳವರ ಮೇಲಿನ ಭಕ್ತಿಯಿಂದ ಎಷ್ಟೋ ಮಟ್ಟಿಗೆ ಪುನೀತವಾಗುತ್ತದೆಂಬುದಕ್ಕೇನೂ ಸಂದೇಹವಿಲ್ಲ; ಆದರೆ ಶ್ರೀರಾಘವೇಂದ್ರ

ಸ್ವಾಮಿಗಳ ಮಹತ್ವಕ್ಕೆ ಸಾಮಾನ್ಯ ಜನರ ಗುರುಭಕ್ತಿಯು ನಿಜವಾದ ಒರೆಗಲ್ಲು ಅಲ್ಲ. ಅವರ ಮಹತ್ವದ ನಿಜವಾದ ಒರೆಗಲ್ಲೆಂದರೆ ಅಪರೋಕ್ಷಜ್ಞಾನಿಗಳೆಂದು ಖ್ಯಾತಿಗೊಂಡಿರುವ ಅನೇಕ ದಾಸರುಗಳು ಕೂಡ ಶ್ರೀರಾಘವೇಂದ್ರಸ್ವಾಮಿಗಳವರನ್ನು ಅತ್ಯಂತ ಪೂಜ್ಯಭಾವದಿಂದ ನೋಡುವದು. ಈ ಅಪರೋಕ್ಷಜ್ಞಾನಿಗಳ ಮಾತಿಗೆ ಬಹಳ ಬೆಲೆ ಇರುತ್ತದೆ; ಮತ್ತು ಶ್ರೀರಾಘವೇಂದ್ರರಾಯರ ಪುಣ್ಯವು ಅತ್ಯಂತ ಪ್ರಬಲವಾಗಿರುವುದರಿಂದಲೇ ಅವರು ಸಮಾಧಿಸ್ಥರಾಗಿ ಅನೇಕ ವರುಷಗಳಾಗಿದ್ದರೂ ಅವರ ಆರಾಧನೆಯು ಯಥಾಪ್ರಕಾರವಾಗಿ ನಡೆದಿರುತ್ತದೆ. ಇಂತಹ ಪುಣ್ಯವುಳ್ಳ ಮಹಾಪುರುಷರು ತೀರ ಅಪರೂಪ. ಶ್ರೀರಾಘವೇಂದ್ರರಾಯರ ಈ ಮಹತ್ವಕ್ಕೆ ಹೊಟ್ಟೆಕಿಚ್ಚುಪಟ್ಟು ಕೆಲವು ಪಂಡಿತಮನ್ಯರು ಅವರ ಗೌರವವನ್ನು ಕಡಿಮೆಮಾಡುವದಕ್ಕೆ ಪ್ರಯತ್ನಿಸುತ್ತಿರುವರು. ಇಂತಹ ಜನರ ಪ್ರಯತ್ನಗಳು ಸರ್ವಥಾ ವಿಫಲವಾಗುವವೆಂಬುದಕ್ಕೆ ಸಂದೇಹವಿಲ್ಲ. ಅಲ್ಲದೆ, ಶ್ರೀರಾಘವೇಂದ್ರರಾಯರಿಗಿಂತಲೂ ತಾವು ಶ್ರೇಷ್ಠರೆಂದೆನಿಸಿಕೊಳ್ಳಲು ಹವಣಿಸುವ ಇವರನ್ನು ಇವರ ಮರಣದ ನಂತರ ಯಾರೂ ಒಂದು ದಿವಸವೂ ಕೂಡ ಮಾತಾಡಿಸುವದಿಲ್ಲವೆಂಬದನ್ನು ಮರೆಯಬಾರದು.

ಸಾಧು ಸಜ್ಜನರ ಜೀವನ ಚರಿತ್ರೆಯಲ್ಲಿ ಅಸ್ವಾಭಾವಿಕವಾಗಿ ತೋರುವ ಅದ್ಭುತ ಚಮತ್ಕಾರಗಳ ಭಾಗವು ಇರುತ್ತದೆ. ಆ ಪ್ರಕಾರ ಶ್ರೀರಾಘವೇಂದ್ರರಾಯರ ಜೀವನ ಚರಿತ್ರೆಯಲ್ಲಿ ನಮಗೆ ಅನೇಕ ಅದ್ಭುತ ಕಥೆಗಳು ಕಂಡುಬರುತ್ತವೆ. ಅವು ನಿಜವೋ ಸುಳ್ಳೋ ಎಂಬ ಪ್ರಶ್ನೆಯು ಈಗಿನ ಕಾಲದಲ್ಲಿ ಜನರ ಮನಸ್ಸಿನಲ್ಲಿ ಬರುವದು ಸಹಜವಿದೆ; ಮತ್ತು ಈಗಿನ ದಿವಸಗಳಲ್ಲಿ ಇಂತಹ ಅದ್ಭುತ ಕಥೆಗಳಮೇಲೆ ವಿಶ್ವಾಸವಿಡುವ ಪ್ರವೃತ್ತಿಯು ಕಡಿಮೆಯಾಗಹತ್ತಿದೆಂಬದು ನಿರ್ವಿವಾದವು; ಆದರೆ, ಈಗ ಕೂಡ, ಇಂತಹ ಅದ್ಭುತ ಚಮತ್ಕಾರಗಳಮೇಲೆ ವಿಶ್ವಾಶವನ್ನಿಡುವ ಜನರು ತೀರ ಇಲ್ಲವೆಂದಿಲ್ಲ. ಇದ್ದೇ ಇರುವರು. ಉತ್ಕಟವಾದ ಭಕ್ತಿಯುಮೂಲಕ ಅವರಿಗೆ ಆ ಅದ್ಭುತ ಕಥೆಗಳಲ್ಲಿ ವಿಶ್ವಾಸಹುಟ್ಟುತ್ತದೆ. ವಿಚಾರಮಾಡಿ ನೋಡಿದರೆ, ಆ ಅದ್ಭುತ ಕಥೆಗಳಲ್ಲಿ ಕೆಲವು ಕಥೆಗಳು ಸಹಜವಾಗಿ ಅರ್ಥವಾಗುವಂಥವಿರುತ್ತವೆ ಮತ್ತೆ ಕೆಲವುಗಳಮೇಲೆ ಎಲ್ಲರೂ ವಿಶ್ವಾಶವಿಡುವುದಕ್ಕೆ ಕಠಿಣವಾಗುತ್ತದೆ ಅದು ಏನೇ ಇರಲಿ, ಮಹಾಪುರುಷರ ಜೀವನದ ಮಹತ್ವವು ಕೇವಲ ಈ ಅದ್ಭುತ ಕಥೆಗಳ ಮೇಲೆ ಇರದೆ,

ಅವರ ನಿಜ ಜೀವನ ಸಂಗತಿಗಳ ಮೇಲೆ ಅವಲಂಬಿಸಿರುತ್ತದೆಂದು ನಮ್ಮ ಅಭಿಪ್ರಾಯ.

ಶ್ರೀರಾಘವೇಂದ್ರರಾಯರ ಜೀವನ ಚರಿತ್ರೆಯಲ್ಲಿಯೂ, ಈ ಅದ್ಭುತ ಕಥೆಗಳನ್ನು ಬಿಟ್ಟರೆ ಕೂಡ, ಶ್ರೀರಾಘವೇಂದ್ರರಾಯರ ಅಗಾಧವಾದ ವಿದ್ವತ್ತೆ, ಅದ್ವಿತೀಯವಾದ ವೈರಾಗ್ಯ, ಅತುಲವಾದ ಈಶನಿಷ್ಠೆ, ಅಸಾಮಾನ್ಯವಾದ ತಪೋಬಲ-ಇವೇ ಮುಂತಾದವುಗಳೇ ಇವರನ್ನು ಮಹಾ ವಿಭೂತಿಗಳಲ್ಲಿ ಗಣನೆ ಮಾಡುವದಕ್ಕೆ ಸಾಕಾಗಿವೆ. ಆದಕಾರಣ, ಪ್ರತಿಯೊಬ್ಬನು ಸಕಾಮನೆಯಿಂದಾಗಲಿ, ಅಕಾಮನೆಯಿಂದಾಗಲಿ ಅವರನ್ನು ಆರಾಧಿಸಿದರೆ, ಆತನಲ್ಲಿ ಸದ್ಭಾವನೆಗಳು ಬೆಳೆದು, ಆ ಭಾವನೆಗಳಿಗೆ ತಕ್ಕಂತೆ ಇಹಪರದಲ್ಲಿ ಆತನಿಗೆ ಫಲದೊರೆಯುವದೆಂಬದು ನಿಃಸಂದೇಹವಾದ ಮಾತು. ಹಾಗೆ ಪ್ರತಿಯೊಬ್ಬರೂ ಶ್ರೀಗಳವರನ್ನು ಆರಾಧಿಸಿ ಪರಮ ಪಾವನರಾಗಬೇಕು.

ಧಾರವಾಡ<br>೯-೩-೧೯೩೦ } ಆಲೂರ ವೆಂಕಟರಾಯರು.

---

## ಗ್ರಂಥಕರ್ತನ ಎರಡು ಮಾತುಗಳು.



ಈಗ ಎರಡು ವರ್ಷಗಳ ಹಿಂದೆಯೇ ಶ್ರೀರಾಯರ ಅನುಗ್ರಹದಿಂದ ಅವರ ಚರಿತ್ರವೊಂದನ್ನು ಪ್ರಕಟಿಸುವ ಸುಯೋಗವು ನನಗೆ ಒದಗಿತು ಆದರೆ ಅದರಲ್ಲಿ ಬರೆಯತಕ್ಕ ಇನ್ನೂ ಎಷ್ಟೋ ಅಂಶಗಳು ಹಾಗೇ ಉಳಿದುಹೋದುದರಿಂದ ಮನಸ್ಸಿಗೆ ಅತೃಪ್ತಿಯಾಗಿ ಇದರ ೨ನೇ ಭಾಗವೊಂದನ್ನು ಬರೆದು ಕನ್ನಡ ವಾಚಕರಿಗೆ ಅರ್ಪಿಸಬೇಕೆಂದು ಮನಸ್ಸಿನಲ್ಲಿಯೇ ಮಂಡಿಗೆಯನ್ನು ಮಾಡುತ್ತಿದ್ದೆನು. ರಾಯರ ಅನುಗ್ರಹವು ಇನ್ನೆಂಥಾದ್ದೋ? ಅವರ ಮಹಿಮೆಯು ಎಷ್ಟು ಅಗಾಧವಾದದ್ದೋ ತಿಳಿಯದು ಅಷ್ಟರಲ್ಲಿಯೇ ಕೇವಲ ಗುರ್ವನುಗ್ರಹಕ್ಕೆ ಪಾತ್ರರೂ-ಧರ್ಮನಿಷ್ಠರೂ-ದಯಾಶೀಲರೂ ಆದ ಶೇಷಗಿರಿಯ ಇನಾಮುದಾರ ಶ್ರೀಮಾನ್ ಹಣಮಂತರಾವ ದೇಸಾಯಿಯವರು:—“ನೀವು ಬರೆದ ಶ್ರೀರಾಯರ ಚರಿತ್ರವನ್ನೋದಿ ಆನಂದಸಾಗರದಲ್ಲಿ ಮುಳುಗಿದೆವು. ಅದರಲ್ಲಿ ಇನ್ನೂ ಅನೇಕ ಭಾಗವು ಬರೆಯತಕ್ಕದ್ದು ಉಳಿದಿರುವದರಿಂದ ನೀವು ಬೇಗನೆ ಇದರ ೨ನೇ ಭಾಗವನ್ನು

ಬರೆದು ಪ್ರಕಟಿಸಬೇಕು. ನಾವು ಕೈಲಾದಮಟ್ಟಿಗೆ ಸಹಾಯಮಾಡುವೆವು." ಎಂಬದಾಗಿ ಧಾರವಾಡ ಮುಕ್ಕಾಮಿನಿಂದ ಒಂದು ಓಲೆಯನ್ನು ಬರೆದರು. ಅದನ್ನು ನೋಡಿದ ಕೂಡಲೆ ನನಗಾದ ಸಂತೋಷವನ್ನು ಹೇಳತೀರದು. ನಾನು ಮನಸ್ಸಿನಲ್ಲಿ ಯಾವುದನ್ನು ಯೋಚಿಸುತ್ತಿದ್ದೆನೋ ಅದನ್ನು ರಾಯರು ತಾವೇ ಮಾಡಿಸಿದರಲ್ಲಾ! ಎಂದು ಉತ್ಸಾಹಪೂರ್ಣನಾಗಿ ಇದನ್ನು ಬರೆಯುವದಕ್ಕೆ ತೊಡಗಿದೆನು.

ಶ್ರೀ ಹಣಮಂತರಾವ ದೇಸಾಯರೆಂದರೆ ಸಾಮಾನ್ಯರಲ್ಲ. ಅವರು ದೊಡ್ಡ ಶ್ರೀಮಂತರಿದ್ದಾಗ್ಯೂ ಸಾಧುಸಂತರಲ್ಲಿಅವರ ಭಕ್ತಿ ಬಹಳ. ಮಂತ್ರಾಲಯ ಮಠದ ಶಿಷ್ಯರಾದುದರಿಂದ ರಾಯರ ಮೇಲಂತೂ ಅವರ ದೃಢವಿಶ್ವಾಸ ಎಷ್ಟೆಂದುಹೇಳುವಹಾಗಿಲ್ಲ. ಇಷ್ಟೇಅಲ್ಲ;ರಾಯರಚರಿತ್ರಕ್ಕೆ ಸಂಬಂಧಪಟ್ಟಸಂಗತಿಗಳನ್ನು ರಾಶಿರಾಶಿಯಾಗಿ ಕೂಡಿಹಾಕಿರುತ್ತಾರೆ. ನಾನು ಮೊದಲನೇ ಭಾಗವನ್ನು ಬರೆಯುವಕಾಲಕ್ಕೆ ಸದರಿ ದೇಸಾಯಿಯವರಲ್ಲಿ ಹೇಗೆ ಹೋಗಬೇಕೆಂದು ಯೋಚಿಸುತ್ತ ಹೋಗಲು ಅವರು ಅತ್ಯಂತ ಪ್ರೀತಿ-ಗೌರವಗಳಿಂದ ನಾಲ್ಕಾರು ದಿವಸ ಮನೆಯಲ್ಲಿಯೇ ಇಟ್ಟುಕೊಂಡು ತಮ್ಮ ಪುಸ್ತಕಭಾಂಡಾರವನ್ನೇ ನನಗೆ ಒಪ್ಪಿಸಿಬಿಟ್ಟರು. ಮತ್ತು ತಮ್ಮ ಕಾರ್ಯಕಲಾಪಗಳನ್ನೆಲ್ಲ ಒದಿಗೊತ್ತಿ ನನಗೆ ಬೇಕಾದ ಸಹಾಯವನ್ನು ಮಾಡಿದರು. ನೋಡಿದಿರಾ! ದೇಸಾಯರೆತ್ತ! ನಾನೆತ್ತ! ಆದರೂ ಅವರು ತೋರಿದ ಸೌಜನ್ಯ-ದೊಡ್ಡಸ್ತಿಕೆಗಳೆಷ್ಟು?

ಹೀಗೆ ೨ ವರ್ಷದ ಹಿಂದೆಯೇ ದೇಸಾಯರ ಆಶ್ರಯಪಡೆದ ನಾನು ಈಗಲಾದರೂ ಅವರಲ್ಲಿಯೇ ಹೋಗಿ ಹೆಚ್ಚಿನ ಸಂಗತಿಗಳನ್ನೆಲ್ಲ ಸಂಗ್ರಹಿಸಿಕೊಂಡು ೨ನೇ ಭಾಗವನ್ನು ಬರೆದೆನು. ( ಓದುದರ ಅನುಕೂಲ್ಯಕ್ಕಾಗಿ ಎರಡೂ ಭಾಗಗಳನ್ನು ಒಟ್ಟಾಗಿ ಮುದ್ರಿಸಿರುವದು ) ಮುಖ್ಯವಾಗಿ ಇದು ಬೈಲಿಗೆ ಬರಲಿಕ್ಕೆ ದೇಸಾಯರೇ ಕಾರಣರೆಂದು ಹೇಳಬಹುದು.

ಇದರಂತೆಯೇ ಜಮ್‌ಶೇಟಪುರದ ಶ್ರೀಯುತ ಗುರುಸಿಂಹರವರು ತೋರಿದ ಧನಸಹಾಯಕ್ಕಾಗಿ ಅವರ ಧನ್ಯವಾದವನ್ನು ಮಾಡದೆ ಇರಲಾರೆನು.

ಅಲ್ಲದೆ—ಧಾರವಾಡವಾಸಸ್ಥರಾದ ಶ್ರೀಮಾನ್ ನಾರಾಯಣರಾವ ದೇಶಪಾಂಡೆ ವಕೀಲರು ಸಾವುಕಾರವಕೀಲರೂ ಶಿಡೇನೂರ ವಕೀಲರೂ ಜಡ್ಜ ಕೋರ್ಟ ಶಿರಸ್ತೇದಾರ ದೇಸಾಯಿಯವರೂಸಬ್‌ರಜಿಸ್ಟ್ರಾರರೂ ಇವರೇ ಮೊದಲಾದವರು ತೋರಿಸಿ ಸಹಾನುಭೂತಿಗಾಗಿ ಅತ್ಯಂತ ಕೃತಜ್ಞನಾಗಿರುವೆನು

ಶ್ರೀಗಳವರ ಸಂಪೂರ್ಣ ಚರಿತ್ರವನ್ನು ಬರೆಯುವದರಲ್ಲಿ ಬಳ್ಳಾರಿ

ಮಹಾತ್ಮರೂ-ಚಿತ್ತಶುದ್ಧಿಯನ್ನು ಪಡೆದವರು-ಜ್ಞಾನಿಗಳೂ ಎನಿಸಿಕೊಂಡಂಥವರೇ ಕೈಯೂರಿ ಕುಳಿತಿರಲು—ನನ್ನಂಥ ಅಲ್ಪಜ್ಞ-ಅಲ್ಪಮತಿಯಾದವರೂ ಯಾವಗಿಡದ ತೊಪ್ಪಲು? ಆದರೂ ದೊಡ್ಡವರ ಗುಣಾನುಕೀರ್ತನವು ಅಲ್ಪವಾದರೂ ಮಹತ್ ಫಲ ಕೊಡುವುದೆಂಬ ನಂಬಿಗೆಯಿಂದ ಏನೋ ಅದರಲ್ಲಿ ಅತ್ಯಲ್ಪ ಭಾಗವನ್ನು ತಿಳಿದಮಟ್ಟಿಗೆ ಬರೆದಿರುವೆನು ಇದು ವಾಚಕರಿಗೆ ಸಂತೋಷವನ್ನುಂಟು ಮಾಡಿದಲ್ಲಿ ನನ್ನ ಶ್ರಮವು ಸಾರ್ಥಕವಾದಂತಾಗುವದು ಇರಲಿ.

ಇನ್ನು ಮನೋಹರವಿಠ್ಠಲದಾಸರು ಮಾಡಿದ ಶ್ರೀರಾಯರ ಸ್ತೋತ್ರ ವನ್ನು ಶೋಧಮಾಡಿ ಪ್ರಕಟಿಸಿದ ಶ್ರೀಮಾನ್—ಹಣಮಂತರಾವ ಗೋರ ಬಾಳ ವಕೀಲ ಲಿಂಗಸೂಗೂರ ಈ ಮಹನಿಯರು ಅದನ್ನು ನನ್ನೀ ಗ್ರಂಥದಲ್ಲಿ ಸೇರಿಸುವದಕ್ಕೆ ಉದಾರಮನಸ್ಸಿನಿಂದ ಅಪ್ಪಣೆಯನ್ನಿತ್ತುದಕ್ಕಾಗಿ ಅವರಿಗೂ ತಮ್ಮ ಸಾವಿರಾರು ಕಾರ್ಯಕಲಾಪಗಳಲ್ಲಿ ಕ್ಷಣಶಃ ಅವಕಾಶವಿಲ್ಲದಿದ್ದರೂ ಅದರ ಲ್ಲಿಯೇ ಅನುವು ಮಾಡಿಕೊಂಡು ನನ್ನ ಕೋರಿಕೆಯಂತೆ ವಿಸ್ತಾರವಾದ ಪ್ರಸ್ತಾ ವನೆಯೊಂದನ್ನು ಬರೆದು ಸರ್ವಾಲಂಕಾರ ಭೂಷಿತೆಯಾದ ನವಯುವತಿಗೆ ಕುಂಕುಮದ ಬೊಟ್ಟನ್ನಿಟ್ಟು ಅಲಂಕರಿಸಿದಂತೆ ಇದನ್ನಲಂಕರಿಸಿದ ಶ್ರೀಮಾನ್ ಆಲೂರ ವೆಂಕಟರಾಯರಿಗೂ ಚಿರಋಣಿಯಾಗಿರುವೆನು.

ಹಾಗೂ ಮೊದಲಿನಿಂದಲೂ ಸಹಾನುಭೂತಿಯನ್ನು ತೋರಿಸಿ, ಪ್ರೋತ್ಸಾ ಹನಕೊಟ್ಟು ಬೇಡಿದ ಗಡುವಿನಲ್ಲಿಯೇ ಸುವ್ಯವಸ್ಥಿತ ರೀತಿಯಿಂದ ಇದನ್ನು ಮುದ್ರಿಸಿ ಕೊಟ್ಟದ್ದಕ್ಕಾಗಿ ಸ. ಚ. ಸಂಪಾದಕರಾದ ಶ್ರೀಯುತ ಯ. ಗು. ಕುಲ ಕರ್ಣಿಯವರನ್ನೂ ಭಿ. ಪ. ಕಾಳೆಯವರನ್ನೂ ಅತ್ಯಂತವಾಗಿ ಅಭಿನಂದಿಸುವೆವು.

ಕಟ್ಟಕಡೆಗೆ ಮನೋಹರ ವಿಠ್ಠಲದಾಸರು ಹೇಳಿಕೊಂಡಂತೆ:—

ಧರೆಯೊಳಗೆ ವಿಜಯೀಂದ್ರ ಕರಕಮಲ ಸಂಜಾತ |
ಗುರುಸುಧೀಂದ್ರಾರ್ಯರಿಗೆ ವರಕುವರ ನೆನಿಸಿರ್ದ |
ಸಿರಿರಾಘವೇಂದ್ರನೆಂಬಭಿಧಾನದಿಂ ಕರೆಸಿ ಶ್ರೀಮಧ್ವಮತವಂ ಪೆರ್ಚಿಸಿ ||
ಬಿರುದುಪಸರಿಸಿ ಸರ್ವತಂತ್ರ ಸ್ವತಂತ್ರರೆನೆ |
ಮೆರೆದಮಹಿಮನೆ ಪುತ್ರಸಂಪತ್ಕಳತ್ರಸು |
ಸ್ಥಿರಮಾಯುವಿಜ್ಞಾನಸದ್ಭಕ್ತಿಪುಣ್ಯಗಳನಿತ್ತುಹರಸಿ ಸಲಹೋ ||

ಎಂಬದಾಗಿಸಹಾಯಕರಾದ ಸನ್ಮಾನನೀಯ ಗೃಹಸ್ಥರಿಗೂ ವಾಚಕವೃಂದಕ್ಕೂ ಆಯುರಾರೋಗ್ಯೈಶ್ವರ್ಯಾದಿಗಳನ್ನು ಕೊಟ್ಟು ಅವರಿಂದ ಇತೋಪ್ಯತಿಶಯ ಕಾರ್ಯಗಳನ್ನು ಮಾಡಿಸಿರೆಂದು ಶ್ರೀರಾಯರಲ್ಲಿ ನೆರಗೊಡ್ಡಿ ಬೇಡಿಕೊಳ್ಳುವೆನು.

ಇತಿ ಶ್ರೀರಾಯರ ಪಾದರೇಣು ಭೀಮಾಚಾರ್ಯ ಒಡವಿ

# ವಿಷಯಾನುಕ್ರಮಣಿಕೆ.



# ಶುದ್ಧಿ ಪತ್ರಿಕೆ.



| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೨ | ೧೨ | ಪಲ್ಹಾದ ನಾರದ | ಪ್ರಲ್ಹಾದನಾರದ |
| ೩ | ೨೮ | ಕುತರ್ಕಹೇಳವನಕಟ್ಟಿ | ಕರ್ಕಹೇಳವನಕಟ್ಟಿ |
| ೧೧ | ೨೨ | ತಿಮ್ಮಣಾಚಾರ್ಯವರ್ಯರ | ತಿಮ್ಮಣಾರ್ಯವರ್ಯರ |
| ೧೨ | ೧೮ | ಅರ್ಧಿಕರಾಗಿದ್ದ ರಾಜರೆಲ್ಲ | ಅಧೀನರಾಗಿದ್ದ ರಾಜರೆಲ್ಲ |
| | ೨೩ | ಮಧುವಿಜಯ | ಮಧುರಾವಿಜಯ |
| ೨೭ | ೧೯ | ಬೇಡಿಕೊಂಡರು | ಬೇಡಿಕೊಂಡನು |
| ೨೮ | ೨೩ | ವೆಂಕಟಾಚಾರ್ಯರಂ | ವೆಂಕಟಾರ್ಯರಂ |
| ೩೬ | ೧೫ | ಸವಸ್ಥಾನವನ್ನು ಕೊಡುವದು | ಸಂಸ್ಥಾನವನ್ನು ಕೊಡುವದು |
| ೪೩ | ೨೬ | ಮರ್ಯಾದೆ; ಆದರೆ | ಮರ್ಯಾದೆ ಆದರೆ. |
| ೪೪ | ೬ | ಚಿತ್ರಕ್ಕೆ ತಂದೆನು | ಚಿತ್ತಕ್ಕೆ ತಂದನು |
| ೪೬ | ೧೯ | ಮಂಚಾಲೆವ್ವಳೆಂಬ | ಮಂಚಾಲೆವ್ವನೆಂಬ |
| ೫೩ | ೮ | ಯಾಹಾತ್ಮರಾದವರು | ಮಹಾತ್ಮರಾದವರು |
| ೫೪ | ೨ | ಸಾಧುಗುಣವೆಂದಾ | ಸಾಧುಗಳ ಗುಣವೆಂದಾ |
| ೫೭ | ೮ | ವಾಕ್ಯಗಿಂತಲೂ | ವಾಕ್ಕಿಗಿಂತಲೂ |
| ೫೯ | ೧೯ | ಯಾಯಿಮಾಹಿಷ | ಯಾಹಿಮಾಹಿಷ |
| ೬೦ | ೪ | ವಾಕ್ಪಟವ | ವಾಕ್ಪಾಟವ |
| | ೬ | ಸುಮನೋರ್ವಾ | ಸಮನೋರ್ವಾ |
| ೬೫ | ೧೨ | ದೇವರ ಕೃಪೆಯಲ್ಲಿ | ದೇವರ ಕೈಯಲ್ಲಿ |
| ೬೯ | ೧೪ | ವ್ಯುತಿಗೆಯರ್ಲಾಗಸ | ವ್ಯುತಿಗೆಯ್ಯಲಾಗಸ |
| ೯೩ | ೨ | ದ್ವಾತ್ರಿಂಶ‍್ಡಂಶ | ದ್ವಾತ್ರಿಂಶದ್ದಂಶ |
| ೯೮ | ೨೫ | ನಂದಗೋಪೆಯೂ | ನಂದಗೋಪನೂ |
| ೧೦೬ | ೧೪ | ಅಂಜಿಕೆ ನಿಮಗುಂಟೇ | ಅಂಜಿಕೆ ನಮಗುಂಟೇ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೧೩ | ೧ | ಶ್ರುತಿಭವಿಭಗವತ್ಪಾದ | ಶ್ರುತಿಭುವಿಭಗವತ್ಪಾದ |
| ೧೧೯ | ೫ | ಸ್ವಪಚರಾಗಿ | ಶ್ವಪಚರಾಗಿ |
| | ೧೧ | ಮೋಕ್ಷಕಾರಣಸಾಮುಗ್ರ್ಯಂ | ಮೋಕ್ಷ ಕಾರಣ ಸಾಮಗ್ರ್ಯಂ |
| ೧೨೧ | ೧೦ | ಪಾವವೆನಿಸುವವು | ಪಾಪವೆನಿಸುವವು |
| ೧೨೫ | ೧೦ | ಸಿದ್ಧಿ ಮಾಡುವದು | ಸಿದ್ಧ ಮಾಡುವದು |
| ೧೨೭ | ೧೫ | ಶಿಲಾಶಾಶನಗಳು | ಶಿಲಾಶಾಸನಗಳು |
| | ೨೧ | ದಾನಕೊಟ್ಟರಂತೆ | ದಾನಕೊಟ್ಟಂತೆ |
| ೧೨೮ | ೧ | ನಿಖಿಲವಿದ್ವಸ್ಮಾಲಿ | ನಿಖಿಲವಿದ್ವನ್ಮಾಲಿ |
| ೧೨೯ | ೮ | ಭದ್ರಮುನ್ನಿದ್ರ್ಯಯೋನ್ನಃ | ಭದ್ರಮುನ್ನಿದ್ರಯೋನ್ನ |
| ೧೪೧ | ೧೭ | ಗಜಪದೇಸ್ಥಿತಾ | ಗಜಪತೇಸ್ಥಿತಾ |
| ೧೪೨ | ೨೫ | ಮನಸೆಹತಾ | ಮನಸೇಽಲಾ |
| ೧೪೩ | ೨೫ | ಮಾರ್ತಂಶಂ | ಮಾರ್ತಾಂಡಂ |
| ೧೫೪ | ೧೧ | ಭೋಧವಿರ್ಣಣೆ | ಭೋಧವರ್ಣಣೆ |
| | ೧೪ | ಕುಲಕನ್ಯೋಪನಾಮೋಕ | ಕುಲಕನ್ಯೋರ್ಪನಾಮೋ |
| ೧೬೫ | ೨೨ | ಇವರ ಮೇಲಿಂದ | ಇದರ ಮೇಲಿಂದ |
| ೧೮೭ | ೧ | ಮಾನಾಯಿಸುಕೃತೇ | ಮಾನಾಯಿಪೂರ್ವ ಸುಕೃತೇ |
| ೧೯೪ | ೨೭ | ಜರತ್ಕಾವಸ್ಥಂ | ಜರತ್ಕಾಕಾವಸ್ಥಾಂ |
| ೨೧೭ | ೧೧ | ಲೀಲಾಧಿಕೃತ | ಲೀಲಾಧಿಕ್ಕೃತ |

———

॥ ಶ್ರೀ ರಾಮಚಂದ್ರಾಯ ನಮಃ ॥　　　　॥ ಶ್ರೀ ಕಾಂತೇಶಾಯ ನಮಃ ॥

ಸಚಿತ್ರ

# ಶ್ರೀಮತ್ ರಾಘವೇಂದ್ರಗುರುಕಥಾಮೃತ

## ಪ್ರಥಮ ಗುಚ್ಛ

ಶ್ರೀಮದಮರಪ್ರವರ ಮಕುಟ ।
ಸ್ತೋಮ ಮಣಿಗಣಕಿರಣಕೀರ್ಣೋ- ।
ದ್ದಾಮ ದಿವ್ಯ ಪದಾಬ್ಜಪೀಠವನಂತಗುಣನಿಳಯಾ ॥
ಭೂಮಿ ಸುರ ಗೋದ್ವಿಜ ಸುಧರ್ಮ ।
ಕ್ಷೇಮಕಾರಣ ಮೂರ್ತಿಯಹ ಲ- ।
ಕ್ಷ್ಮೀಮನೋರಮನೀಗೆ ನಮಗಿಷ್ಟಾರ್ಥಸಂಪದವ ॥ ೧ ॥

(ಪೌಲೋಮಪರ್ವ ಭಾರತ)

---

### ಶ್ರೀಗಳವರ ವಂಶವೃಕ್ಷವು

ವೇ॥ ಕೃಷ್ಣಮಾಚಾರ್ಯರು.
|
ಹಿರಣ್ಯಯಾಚಾರ್ಯರು. (ಕನಕಾಚಲಭಟ್ಟರು.)
|
ವೇ॥ ತಿಮ್ಮಣ್ಣಾಚಾರ್ಯರು. (ಹೆಂಡತಿ ಗೋಪಿಕಾಂಬಾ)

- ಎಂಕಟಾಬಾಯಿ. ಮಧುರಾಪುರದ ನರಸಿಂಹಾಚಾರ್ಯರ ಹೆಂಡತಿ
- ಗುರುರಾಜಾಚಾರ್ಯರು.
- ವೇ॥ ವೆಂಕಟಾಚಾರ್ಯರು ಹೆ. ಸರಸ್ವತೀಬಾಯಿ. (ಶ್ರೀರಾಘವೇಂದ್ರಸ್ವಾಮಿಗಳು)
  - ಶ್ರೀ ಲಕ್ಷ್ಮೀನಾರಾಯಣಾಚಾರ್ಯರು.
    - ಶ್ರೀನಿವಾಸಾಚಾರ್ಯರು. (ಶ್ರೀವಾದೀಂದ್ರಸ್ವಾಮಿಗಳು)

ಶ್ರೀ ಭಗವಂತನೇ ಹೇಳಿಕೊಂಡಿಲ್ಲವೇ?

"ನಾಹಂ ವಸಾಮಿ ವೈಕುಂಠೇ ನ ಯೋಗಿಹೃದಯೆ ರವೌ |
ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ ||"

(ಎಲೈ ನಾರದನೆ! ಭಕ್ತರು ಭಕ್ತಿಯಿಂದ ಎಲ್ಲಿ ನನ್ನ ಗಾಯನ ಮಾಡುವರೋ ಅಲ್ಲಿ ನಾನಿರುವೆನಲ್ಲದೆ-ವೈಕುಂಠದಲ್ಲಾಗಲಿ, ಯೋಗಿಗಳ ಹೃದಯುದಲ್ಲಾಗಲಿ,ಸೂರ್ಯಮಂಡಲ ಮಧ್ಯದಲ್ಲಾಗಲಿ ನಾನಿರುವದಿಲ್ಲ) ಎಂಬದಾಗಿ—

ಅಂದಮೇಲೆ ಭಗವದ್ಭಕ್ತರ ಮಹಿಮೆಯನ್ನು ಇನ್ನೆಷ್ಟೆಂದು ಹೇಳೋಣ! ಭಗವಂತನಿಗೆ ಕೇವಲ ಭಕ್ತರಾದುದರಿಂದಲೇ ಇವರಿಗೆ ಭಾಗವತರೆಂಬ ಹೆಸರು ಬಂದಿರುವದು ಇಂಥ ಭಾಗವತರಲ್ಲಿಯೂ ಪರಮ ಭಾಗವತರೆಂಬ ಹೆಸರನ್ನು ಹೊಂದಿ ಪ್ರಾತಃಸ್ಮರಣೀಯರಾದ—

"ಪ್ರಲ್ಹಾದ ನಾರದ ಪರಾಶರ ಪುಂಡರೀಕ |
ವ್ಯಾಸಾಂಬರೀಷಶುಕ ಶೌನಕ ಭೀಷ್ಮಕಾದ್ಯಾಃ ||
ರುಕ್ಮಾಂಗದಾರ್ಜುನ ವಸಿಷ್ಠ ವಿಭೀಷಣಾದಿ |
ಪುಣ್ಯಾನಿಮಾನ್ ಪರಮ ಭಾಗವತಾನ್ ಸ್ಮರಾಮಿ" ||

ಪ್ರಲ್ಹಾದ ನಾರದಾದಿಗಳ ವಿಷಯದಲ್ಲಿ ಹೇಳತಕ್ಕದ್ದೇನು! ಆದರಲ್ಲಿಯೂ ಭಾಗವತ ಶಿಖಾಮಣಿಯೆನಿಸಿದ ಭಕ್ತಾಗ್ರೇಸರನಾದ ಪ್ರಲ್ಹಾದನ ಮಹಿಮೆಯನ್ನು ಕೇಳಬೇಕೇ? ಪ್ರಲ್ಹಾದನು ಹಿರಣ್ಯಕಶಿಪುವೆಂಬ ದೈತ್ಯನ ಹೊಟ್ಟೆಯಲ್ಲಿ ಹುಟ್ಟಿದ್ದೇನೋ ನಿಜ. ಆದರೇನು? ಅವನಂಥ ಹರಿಭಕ್ತನು ಈ ಭೂತಲದಲ್ಲಿಯೇ ಸಿಕ್ಕಲಾರನು. 'ನ ಭೂತೋ ನ ಭವಿಷ್ಯತಿ' ಎಂದು ಹೇಳಬಹುದು ಈತನ ಹೆಸರು ಭಾಗವತರ ಮಾಲಿಕೆಯಲ್ಲಿ ಪ್ರಥಮಸ್ಥಾನದಲ್ಲಿ ಕುಳಿತಿದ್ದರಿಂದಲೇನೇ ಇವನ ಮಹಿಮಾತಿಶಯವು ತಿಳಿಯುವಂತಿದೆ. ಬೇರೆ ಹೊಗಳುವದೇತಕ್ಕೆ?

ಪ್ರಲ್ಹಾದನು ರಾಜ್ಯಭಾರ ಮಾಡಿದ್ದು ಈಗಿನ ಕಾಲದ ಮಾತಲ್ಲ. ಎರಡು ಯುಗಗಳ ಹಿಂದಿನ ಸುದ್ದಿ ಲಕ್ಷಾಂತರ ವರ್ಷಗಳ ಹಿಂದಿನ ಕಥೆ. ಏನಾದರೇನು? ಆತನ ಶುಭ್ರವಾದ ಕೀರ್ತಿಯು ಅಣುಮಾತ್ರವಾದರೂ ಮಾಸಿದೆಯೆ? ಇಲ್ಲ, ಇಲ್ಲ. ಅದು ಮತ್ತಿಷ್ಟು ಪ್ರಕಾಶಿಸುತ್ತಲೇ ಇದೆ. ಹರಿಶರಣರ ಮಹಿಮೆಯೇ ಅಂಥಾದ್ದು. ಅವರಿಗೆ ಸರಿಯಾದವರು ತ್ರಿಭು

ವನದಲ್ಲಿಯೂ ದೊರಕಲಾರರು. ಅವರ ಮಹಿಮಾತಿಶಯವು ಇನ್ನೆಂಥಾದ್ದೋ? ಅವರ ಸಾಮರ್ಥ್ಯವಿನ್ನೆಷ್ಟೋ? ಪಾಮರರಾದ ನಮ್ಮಿಂದದನ್ನಳೆಯಲು ಅಸಾಧ್ಯ ಹೆಚ್ಚೇನು? ಅವರು ಮನುಷ್ಯರೇ ಅಲ್ಲ; ದೇವಾಂಶ ಸಂಭೂತರು. ಅಂಥವರ ನಾಮಸ್ಮರಣೆಯೇ ನಮಗೆ ಜನ್ಮಜನ್ಮಾಂತರಕ್ಕೂ ತಾರಕವೆಂದು ಹೇಳಿದರೆ ಅದೇನೊಂದು ಅತಿಶಯವಲ್ಲ.

ಹಿಂದಕ್ಕೆ ಗಜರಾಜನ ಕೂಗನ್ನು ಕೇಳಿ ಅಥವಾ ಪಾಂಡವರ ಪತ್ನಿಯಾದ ದ್ರೌಪದಿಯ ಆರ್ತಸ್ವರವನ್ನು ಕೇಳಿ ಪರಮಾತ್ಮನು ಓಡಿಬಂದು ನೆಂಬ ನಮ್ಮ ಪ್ರಾಚೀನ ಪುರಾಣೇತಿಹಾಸಗಳ ಮಾತಂತಿರ ಹತ್ತಿಟ್ಟಿಗಿರಲಿ, ನೂರಾರು ವರ್ಷಗಳಹಿಂದೆಯೇ ಆಗಿಹೋದಂಥ, ಅದೂ ಹಬ್ಬ ಬಡಪಾಯಿ ಯಾದ ಹೆಂಗಸಾದಂಥ—ಹೆಳವನಕಟ್ಟೆ ಗಿರಿಯಮ್ಮಳೆಂಬೊಬ್ಬ ಸಾಧ್ವೀ ಮಣಿಯು ಹಿಮ್ಮೆ ಗುಡಿಗೆ ನೈವೇದ್ಯವನ್ನು ಹಿಯ್ಯುವಾಗ ಬಾಗಿಲಲ್ಲಿ ಕಟ್ಟಿದ್ದ ಕುದುರೆಯ ಹತ್ತಿರ ಹಾದುಹೋಗುತ್ತಿರಲು, ಆ ಕುದುರೆಯು ಹಿಮ್ಮಿಂದೊಮ್ಮೆ ಗಿರಿಯಮ್ಮನ ಬಲಗಡೆಯ ಮೊಲೆಯನ್ನು ಹಲ್ಲುಗಳಿಂದ ಹಿಡಿದು ಬಿಟ್ಟಿತು. ಕುದುರೆಯ ಕ್ರೂರ ದವಡೆಯಲ್ಲಿ ಸಿಕ್ಕ ಮೇಲೆ ಕೇಳುವ ದೇನದೆ? ಮೊಲೆಯು ಕತ್ತರಿಸಿ ಬೀಳುವದೋ ಅನ್ನುವ ಹಾಗಾಯಿತು. ಆಗಲೇ ಗಿರಿಯಮ್ಮನು ಆರ್ತಧ್ವನಿಯಿಂದ ಪರಮಾತ್ಮನಿಗೆ ಮೊರೆಯಿಟ್ಟಳು.†

ಭಕ್ತ ಪರಾಧೀನನಾದ ಪರಮಾತ್ಮನು ತರುಣಿಯ ಆಲಾಪಕ್ಕೆ ಓಡಿ ಬಂದನೋ ಎಂಬಂತೆ ಕ್ಷಣಮಾತ್ರದಲ್ಲಿ ಕುದುರೆಯು ಮೊಲೆಯನ್ನು ಬಿಟ್ಟು

---

ಪದ. ರಾಗ | ನಾಟಿ | ತಾಳ-

ನಿನ್ನ ನಂಬಿದ್ದವರ ಕಾಯೋ ನಿಜವುಳ್ಳ ದೇವಾ| ಎನ್ನನು ಉದ್ಧರಿಸಿ ಕಾಯೋ ಶ್ರೀವೆಂಕಟರಾಯಾ|| ಪ ||

ಸುರಪತಿ ಮುನಿದು ಮಳೆಗರೆಯಲೇಳುದಿನ ಬಿಡದೆ| ತುರಗಳೆಲ್ಲಾ ಮರುಗಿ ಬಾಯಬಿಡುತಿರಲು|| ಬೆರಳಿನಿಂದ ಗೋವರ್ಧನಗಿರಿಯನೆತ್ತಿ ಗೋಗಳನ್ನು| ದ್ಧರಿಸಿ ಕಾಯ್ದ ಕರುಣಾಸಿಂಧು ಕಮಲಲೋಚನಾ|| ೧ || ಮಡುವಿನೊಳಗೆ ಮಲೆತನೀರ| ಕುಡಿಯ ಬಂದ ಗಜವ ನೆಗಳಿ| ಬಿಡದೆ ಕಾಲಕಚ್ಚಿ ಭಂಗಬಡಿಸುತಿರಲು || ತಡೆಯಲಾರದೆ ಪ್ರಾಣ| ಬಿಡುವ ಸಮಯದಲ್ಲಿ ಬಂದು| ಕೆಡಹಿ ಚಕ್ರದಿಂದ ನೆಗಳ ಕರಿಯ ಸಲಹಿದೆ|| ೨ || ಮತ್ತೆ ಮಂದ ಜ್ಞಾನದಿಂದ ಮೆಯ್ಯಮರೆತು ಬರಲು ಸ್ತನವ | ತುತ್ತು ಮಾಡಿ ಹಿಡಿದು ಕುದುರಿ ಕ್ರೂರದಂತದಿ|| ಕತ್ತರಿಸುವೊ ಸಮಯದಲ್ಲಿ ಕಡೆಗೆ ಮಾಡಿಕಾಯೊ ಎನ್ನ| ಕರ್ತು ಹೆಳವನಕಟ್ಟೆ ಕರುಣಿವೆಂಕಟ|| ೩ ||

ಬಿಟ್ಟಿತು. ಹದನಾದ ಹಲ್ಲಿನ ಗುರುತು ಕೂಡಾ ಮೊಲೆಯಮೇಲೆ ಮೂಡಿರ ಲಿಲ್ಲ. ಆಹಾ! ನೋಡಿದಿರೋ! ಹರಿಶರಣರ ಮಹಿಮೆಯನ್ನು! ಆದ್ದರಿಂದ ಲೇ ದಾಸರು ಈ ಕೆಳಗಿನ ಪದ್ಯಗಳಲ್ಲಿ—

(೧) ಭಕತರ ಸೇವೆಯ ಕೊಡುಕಂಡ್ಯಾ । ನಿನ್ನ । ಭಕತರ ಸಂಗವ ಕೊಡುಕಂಡ್ಯಾ । ಹರಿಯೆ ॥

(೨) ನಿನ್ನ ದರುಶನಕೆ ಬಂದವನಲ್ಲವೋ । ಮಹಾ । ಪುಣ್ಯವಂತರ ದಿವ್ಯ ಚರಣ ನೋಡಲು ಬಂದೆ ॥

(೩) ಕಠಿಣವೋ ನಿನ್ನ ಭಕತರ ನೋಡುವಲಾಭ । ಸಟೆಯಲ್ಲ ವೇದಗಳು ಸಾರುತಿದಕೋ ॥

ಎಂಬದಾಗಿ ಹೇಳಿಕೊಂಡಿರುತ್ತಾರೆ

ಇಂಥ ಭಕ್ತಾಗ್ರೇಸರ ಚಕ್ರವರ್ತಿಯು(ಪ್ರಲ್ಹಾದನು)ಹಿಂದಕ್ಕೊಮ್ಮೆ ಕರ್ನಾಟಕದಲ್ಲಿಯೇ ಜನಿಸಿ ಕರ್ನಾಟಕದಲ್ಲಿಯೇ ರಾಜ್ಯಭಾರ ಮಾಡಿದ ಸಂಬಂಧವನ್ನು ಕನ್ನಡಿಗರಾದ ನಾವು ಮರೆಯಲಾಗದು.

ಈಗಿನ ಮದ್ರಾಸ ಇಲಾಖೆಯಲ್ಲಿ ತುಂಗಭದ್ರಾನದಿಯ ದಡದಲ್ಲಿ ರುವ ಮಂತ್ರಾಲಯವೆಂಬ ಕ್ಷೇತ್ರವೇ ಈತನ ತಾಯಿಮನೆಯೆಂದು ಹೇಳು ವರು. ಇದು ಆ ಕಾಲದಲ್ಲಿ ಹನ್ನೆರಡು ಹರದಾರಿಗಿಂತ ಹೆಚ್ಚು ಹಬ್ಬಿದ ಪಟ್ಟಣವಾಗಿತ್ತೆಂದೂ ಇಲ್ಲಿಗೆ ಹನ್ನೆರಡು ಹರದಾರಿ ದೂರವಿರುವ ಅಹೋ ಬಲ ನರಸಿಂಹಪುರವೆಂಬುದೇ ಈತನ ಕಚೇರಿಯ ಸ್ಥಾನವಾಗಿತ್ತೆಂದೂ, ಇಲ್ಲಿಗೆ(ಮಂತ್ರಾಲಯಕ್ಕೆ)ನಾಲ್ಕು ಹರದಾರಿ ದೂರದಲ್ಲಿರುವ 'ಬಿಚ್ಚಾಲಿ' ಎಂಬ ಊರೇ ಭಿಕ್ಷಾಲಯ—ಭಿಕ್ಷುಕರಿಗೆ ಭಿಕ್ಷೆಹಾಕುವ ಬಾಗಿಲವಾಗಿ ತ್ತೆಂದೂ, ಇಲ್ಲಿಂದ ಎರಡು ಹರದಾರಿ ದೂರದಲ್ಲಿರುವ ''ಮಾಧವಾರ''ಎಂಬ ಊರೇ ಮಹಾದ್ವಾರವೆಂಬ ಹೆಸರಿನಿಂದ ಹಿಪ್ಪುತ್ತಿತ್ತೆಂದೂ, ಇಲ್ಲಿಗೆ ಹಿಂದೇ ಒಂದು ಹರದಾರಿ ದೂರದಲ್ಲಿರುವ 'ಚಟ್ನಹಳ್ಳಿ' ಎಂಬುದೇ ಚಟ್ನ(ಹಿಂಡಿ) ಯನ್ನು ಕುಟ್ಟುವ ಮನೆಯಾಗಿತ್ತೆಂದೂ ಐತಿಹ್ಯವುಂಟು.

ಇದೇ ಭಕ್ತಶ್ರೇಷ್ಠನೂ ರಾಜಾಧಿರಾಜನೂ ಆದ ಪ್ರಲ್ಹಾದನೇ ಕಲಿ ಯುಗದಲ್ಲಿ ಮಂದಮತಿಗಳ ಉದ್ಧಾರಾರ್ಥವಾಗಿ ಶ್ರೀವ್ಯಾಸರಾಯರೆಂಬ ಹೆಸರಿನಿಂದ ಅವತರಿಸಿದನು. † ಈ ವ್ಯಾಸರಾಯಸ್ವಾಮಿಗಳವರು ಅತ್ಯಂತ

† ಈ ವಿಷಯದಲ್ಲಿ ಒಬ್ಬಾನೊಬ್ಬ ದಾಸರು ಹೀಗೆ ಹೇಳಿಕೊಂಡಿರುತ್ತಾರೆ:—

ಶ್ರೇಷ್ಠರಾದ ಯತಿಕುಲತಿಲಕರೆನಿಸಿಕೊಂಡರೂ, ಉಜ್ವಲವಾದ ಕರ್ನಾಟಕದ ಅಭಿಮಾನದಿಂದ ರಾಷ್ಟ್ರಕಾರ್ಯದಲ್ಲಿ ಕೈ ಹಾಕಿ ವಿಜಯನಗರದ ರಾಯರಿಗೆ ಹೊತ್ತುಹೊತ್ತಿಗೆ ಸದುಪದೇಶವನ್ನು ಮಾಡುತ್ತ ಅವರ ಕಷ್ಟನಷ್ಟಗಳನ್ನೆಲ್ಲ ದೂರೋಡಿಸಿ ಸ್ವಯಂ ರಾಜ್ಯಭಾರವನ್ನುಮಾಡಿ ಕನ್ನಡಿಗರ ಸಾಮ್ರಾಜ್ಯವನ್ನು ಮುಂದಕ್ಕೆ ತಂದರು ಇಷ್ಟೇ ಅಲ್ಲ, ಸಂಸ್ಕೃತದಲ್ಲಿ ಅದ್ವಿತೀಯ ಪಂಡಿತರಾಗಿದ್ದ ಇವರು ಭಾಷಾಪ್ರೇಮದಿಂದ ಕನ್ನಡದಲ್ಲಿಯೇ ಅನೇಕಾನೇಕ ದೇವರ ನಾಮಗಳನ್ನು ರಚಿಸಿ ಪಾಮರರ ಉದ್ಧಾರವಾಗುವಂತೆ ಮಾರ್ಗ ಮಾಡಿಕೊಟ್ಟರು. ಹೀಗೆ—ನಮ್ಮ ಕನ್ನಡದೇಶ, ಕನ್ನಡ ಭಾಷೆಯಮೇಲೆ ಈ ಮಹನೀಯರು ಮಾಡಿದ ಉಪಕಾರವನ್ನು ಎಷ್ಟು ಬಣ್ಣಿಸಿದರೂ ತೀರದು ಇಂಥ ಮಹಾನುಭಾವರ ಚರಿತ್ರವೊಂದನ್ನು ವಿಸ್ತಾರವಾಗಿ ಬರೆದು ಕನ್ನಡಿಗರಿಗೆ ಅರ್ಪಿಸಬೇಕೆಂದು ಯೋಚನೆಯಿರುವದು. ಭೋ! ಯತಿಕುಲತಿಲಕಾ! ಸಜ್ಜನ ಸಾರ್ವಭೌಮಾ! ಪಾಮರನ ಮೇಲಿಷ್ಟು ಅನುಗ್ರಹಿಸು. ಆಶೀರ್ವಾದ ಮಾಡು. ನನ್ನ ಯೋಚನೆಯನ್ನು ಸಫಲಗೊಳಿಸು. ಪುನಃ ಪುನಃ ಪ್ರಾರ್ಥಿಸುವೆನು.

ಮುಂದೆ ತುಸ ದಿನಗಳು ಕಳೆದವು. "ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ|" ಎಂಬ ಮಾತು ಸುಳ್ಳಲ್ಲ ಪ್ರಲ್ಹಾದನಿಗೆ ಬಹು ಕಾಲದ ಮೇಲೆ ಮತ್ತೊಮ್ಮೆ ಜನ್ಮಭೂಮಿಯಾದ ತಾಯಿಮನೆಯ ನೆನಪಾಯಿತು.

---

ರಾಗ| ಮೋಹನ| ಛಾಪು|

ಚಂದ್ರಾ ಧರೆಯೊಳು ಮೂಡಿದಾ| ಪ್ರಲ್ಹಾದನೆಂಬುವ | ಚಂದ್ರಾ || ಪ ||

ಹೊಂದಿದೋಡಿಸೆ ಹೃದಯಾಂಧಕಾರ ಗುಣ| ಸಾಂದ್ರವ್ಯಾಸರಾಜೇಂದ್ರನೆಂಬುವ|| ಚಂದ್ರಾ ||

——— || ಅ. ಪ. ||

ನಮ್ಮ ದ್ವೈತಸಿದ್ಧಾಂತಸ್ಥಾಪನಾಚಾರ್ಯರಲ್ಲಿ - ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿಗಳಿಗೆ ಸದೃಶರಾದ ಶ್ರೀಮದಾಚಾರ್ಯರು-ಶ್ರೀಜಯತೀರ್ಥರು (ಟೀಕಾಚಾರ್ಯರು)-ಶ್ರೀವ್ಯಾಸರಾಯರು ಎಂಬ ಮೂವರೂ ಅತ್ಯಂತ ಪ್ರಸಿದ್ಧರೆಂಬುದಾಗಿ —

"ಶ್ರೀಮಧ್ವಃಕಲ್ಪವೃಕ್ಷಶ್ಚ| ಜಯಾಚಾರ್ಯಸ್ತು ಧೇನವಃ|
ಚಿಂತಾಮಣಿಸ್ತು ವ್ಯಾಸಾರ್ಯಃ | ಮುನಿತ್ರಯಮುದಾಹೃತಂ" ||

(ಶ್ರೀಮುಷ್ಣಮಾಹಾತ್ಮ್ಯ)

ಶ್ರೀಮುಷ್ಣಮಾಹಾತ್ಮ್ಯದಲ್ಲಿ ಹೇಳಲ್ಪಟ್ಟಿರುವದು. ಈ ಮಹಾಮಹಿಮರ ಚರಿತ್ರವು ಲೋಕಾದ್ಭುತವಾಗಿರುವದು.

ಕೂಡಲೆ ಶ್ರೀ ವ್ಯಾಸರಾಯರೆಂಬ ಹೆಸರಿನಿಂದ ಅವತರಿಸಿದ ಪ್ರಹ್ಲಾದನು ಶ್ರೀಮದ್ರಾಘವೇಂದ್ರಸ್ವಾಮಿಗಳೆಂಬ ಹೆಸರಿನಿಂದ ಅವತರಿಸಿ* ಭಕ್ತೋದ್ಧಾರಾರ್ಥವಾಗಿ ಮಂತ್ರಾಲಯದಲ್ಲಿಯೇ ನೆಲಸಿ ನಿಂತುಬಿಟ್ಟನು. ಈಗಲೂ ಇಲ್ಲಿ (ಮಂತ್ರಾಲಯದಲ್ಲಿ) ಅವರ ವೃಂದಾವನವಿದ್ದು ಸಾವಿರಾರು ಜನರು ಸೇವಾ ಸ್ತೋತ್ರಾದಿಗಳನ್ನು ಮಾಡಿ ಇಷ್ಟಾರ್ಥವನ್ನು ಹೊಂದುತ್ತಿರುವರು. ಇಂಥ ಮಹಾನುಭಾವರಾದ ಸಾಕ್ಷಾತ್ ಪ್ರಹ್ಲಾದಾಂಶರಾದ ಶ್ರೀರಾಘವೇಂದ್ರಸ್ವಾಮಿಗಳವರ ಚರಿತ್ರವನ್ನೇ ಸದ್ಯಕ್ಕೆ ವಾಚಕರ ಮುಂದಿಡಬೇಕೆಂದು ಯಥಾಮತಿ ಯತ್ನಮಾಡಿರುವೆನು. ಕರ್ಣಾಟಕಸ್ಥರು ಅವರ ಕಥಾಮೃತವನ್ನು ಪಾನಮಾಡಿ ಕುಣಿಯಲಿ, ತೇಜಸ್ಸನ್ನು ಹೊಂದಲಿ, ವೀರ್ಯವುಳ್ಳವರಾಗಲಿ. ಹೇ ಜಯಕರ್ಣಾಟಕ ಭೂಮಾತೇ! ಜಯಮಂಗಲದಾಯಿನಿ! ನಿನ್ನ ಆ ಪುಣ್ಯಗರ್ಭಾಂಬುಧಿಯಲ್ಲಿ ಇನ್ನೂ ಇಂತಹ ರತ್ನಗಳನ್ನೆಷ್ಟು ತುಂಬಿಕೊಂಡಿರುವೆಯೋ ಅದನ್ನು ಹೇಳಬಲ್ಲವರಾರು? ನಿನಗೆ ನನ್ನ ಅನಂತಕೋಟಿಪ್ರಣಾಮಗಳಿಂಲಿ. ಅಸ್ತು.

ಹಾಗಾದರೆ ಈಗ ಇವರ ಪೂರ್ವವೃತ್ತದ ವಿಷಯವೇನೆಂಬದನ್ನು ಮೊದಲು ತುಸು ಯೋಚಿಸೋಣ!

ಹಿಂದಕ್ಕೆ ಮಹಾ ದೈತ್ಯನಾದ ಹಿರಣ್ಯಕಶಿಪುವಿನ ಬಾಧೆಯನ್ನು ತಾಳಲಾರದೆ ದೇವತೆಗಳೆಲ್ಲರೂ ಸೇರಿ ಶ್ರೀಮನ್ಮಹಾವಿಷ್ಣುವಿಗೆ ಮೊರೆಯಿಡಬೇಕೆಂದು ವೈಕುಂಠಲೋಕಕ್ಕೆ ಪ್ರಯಾಣ ಮಾಡಿದರು.

ವೈಕುಂಠದಲ್ಲಿ ಸ್ವಾಮಿಯು ರತ್ನಖಚಿತವಾದ ಮಂಚದ ಹೇಲೆ ಹಂಸತೂಲಿಕಾಶಯ್ಯೆಯಲ್ಲಿ ಸುಖವಾಗಿ ಪವಡಿಸಿದ್ದನು. ನಾಲ್ಕುದಿಕ್ಕಿನ

---

* "ಹಿಂದೆ ವ್ಯಾಸಮುನಿಯೆಂದೆನಿಸಿದ ಕ| ರ್ಮಂದಿಗಳರಸಯತೀಂದ್ರ ಕಾಣಮ್ಮಾ||
ತುಂಗಾತೀರದಿ ನಿಂತ ಸುಯತಿವರನ್ಯಾರೇ ಪೇಳಮ್ಮಯ್ಯಾ|| (ಅಭಿನವ ಜನಾರ್ದನವಿಠಲ)

"ವ್ಯಾಸರಾಯನೆನಿಸಿ ನೃಪನ ಕ್ಲೇಶವ ಕಳೆದವನೆ ಬಾರೊ|
ಶ್ರೀಸುಧೀಂದ್ರಕರಕಂಜಜ ವಾಸುದೇವಾರ್ಚಕನೆ ಬಾರೊ"||
ರಾಘವೇಂದ್ರಾರ್ಯನೆ ಬಾರೋ|| (ಜಗನ್ನಾಥದಾಸರು)

"ಪ್ರಥಮ ಪ್ರಹ್ಲಾದವ್ಯಾಸಮುನಿಯೆ| ರಾಘವೇಂದ್ರಯತಿಯೆ"|
ರಥವನೇರಿದ ರಾಘವೇಂದ್ರಾ| ರಾಯ ಗುಣಸಾಂದ್ರಾ|| (ಗೋಪಾಲದಾಸರು)

ಬಾಗಿಲುಗಳಲ್ಲಿಯೂ ನಾಲ್ಕು ಜನ ದ್ವಾರಪಾಲಕರು ಯಾರನ್ನೂ ಒಳಗೆ ಬಿಡದಂತೆ ನೋಡಿಕೊಂಡಿದ್ದರು. ಅಂಥಾ ಸಮಯದಲ್ಲಿ ದೇವತೆಗಳು ಪೂರ್ವದಿಕ್ಕಿನ ಬಾಗಿಲಿನಿಂದ ನಾರಾಯಣನ ಮಂದಿರವನ್ನು ಪ್ರವೇಶಮಾಡಬೇಕೆಂದು ಹೊರಟರು. ಅಲ್ಲಿ ಸುಮುಖನೆಂಬವನು ದ್ವಾರರಕ್ಷಕನಾಗಿದ್ದನು. ದೊಡ್ಡವರ ಆಶ್ರಯವನ್ನು ಹೊಂದಿದ ಅಲ್ಪರೂ ಕೂಡ ಅಹಂಕಾರದಿಂದ ಹೇಗೆ ಮೆರೆಯುತ್ತಾರೆಂಬದನ್ನು ಬೇರೆ ಹೇಳಲೇಬೇಕಾಗಿಲ್ಲ. ಸುಮುಖನ ಸ್ಥಿತಿಯಾದರೂ ಇದರಂತೆಯೇ ಇತ್ತು. ತಾನು ಸಾಕ್ಷಾತ್ ವಿಷ್ಣು ಸೇವಕನೆಂದೂ ತನಗೆ ಸರಿಯಾದವರು ಯಾರೂ ಇಲ್ಲವೆಂದೂ ಅವನು ಬೀಗಿ ಬೆರೆಯುತ್ತಿದ್ದನು. ಇಂಥವನು ದೇವತೆಗಳನ್ನು ಲಕ್ಷಿಸುವನೇ? ಬಾಗಿಲಲ್ಲೇ ತಡೆದುಬಿಟ್ಟನು. ಅಲ್ಲದೆ-ನೀವು ಕರ್ಮಾಧಿಕಾರಿಗಳು, ಯೋಗಗಮ್ಯವಾದ ವೈಕುಂಠವನ್ನು ಪ್ರವೇಶ ಮಾಡಕೂಡದು, ಎಂದು ನಿಷ್ಠುರ ವಚನಗಳನ್ನು ಆಡಿದನು. ಅಹಾ ಇದೇನು? ದೇವರು ವರವು ಕೊಟ್ಟರೂ ಪೂಜಾರಿಯು ವರವು ಕೊಡಲಿಲ್ಲವೆಂಬ ಗಾದೆಯು ಸಮಾಚಾರವಾಯಿತು. ವಿಷ್ಣುಲೋಕದಲ್ಲಿ ಆತನ ಮಂದಿರದ ಬಾಗಿಲವರೆಗೂ ಬಂದಿದ್ದ ದೇವತೆಗಳು ಈಗ ಆತನನ್ನು ಕಾಣದೆ ಹಿಂದುರಿಗಿ ಹೋಗಬೇಕೇ? ಹಾಗಾದರೆ ಅವರು ಬಂದದ್ದರ ಸಾರ್ಥಕ್ಯವೇನು? ದೇವತೆಗಳಿಗಾದರೋ ದೈತ್ಯನ ಬಾಧೆಯು ಮಿತಿಮೀರಿ ಹೋಗಿತ್ತು. ಇನ್ನು ತಡೆಯುವದು ಅವರಿಂದ ಶಕ್ಯವಿದ್ದಿಲ್ಲ ಕಾರಣ—ದ್ವಾರಪಾಲಕನನ್ನು ಬದಿಗೊತ್ತಿ ಏಕದಾ ಒಳಗೆ ನುಗ್ಗಿಯೇ ಬಿಟ್ಟರು. ಈ ಗೊಂದಲಕ್ಕೆ ನಾರಾಯಣನು ಎಚ್ಚತ್ತು ದೇವತೆಗಳನ್ನು ಕಂಡು ವಿಚಾರಿಸಲು, ಅವರು ತಮಗಾದ ದೈತ್ಯಬಾಧೆಯನ್ನು ವಿವರಿಸಿ ಇಂಥಾ ಸಂಕಟಸಮಯದಲ್ಲಿ ದ್ವಾರಪಾಲಕನು ನಮ್ಮನ್ನು ಒಳಗೆ ಬಿಡದಂತೆ ನಿರ್ಬಂಧಿಸಿದನೆಂದೂ ಹೇಳಿದರು. ಪರಮಾತ್ಮನು ದೇವತೆಗಳನ್ನು ಸಮಾಧಾನಪಡಿಸಿ ಕಳಿಸಿದನು. ಹಾಗೂ—ಸಮಯಾಸಮಯವನ್ನು ನೋಡದೆ ದೇವತೆಗಳನ್ನು ತಡೆದದ್ದಕ್ಕಾಗಿ, ಅವರು ಯಾವ ದೈತ್ಯನ ಬಾಧೆಯಿಂದ ಇಲ್ಲಿಗೆ ಬಂದಿದ್ದರೋ ಅದೇ ದೈತ್ಯನ ಹೊಟ್ಟೆಯಲ್ಲಿ ಹುಟ್ಟಬರಬೇಕೆಂದು ತನ್ನ ದ್ವಾರಪಾಲಕನಾದ ಸುಮುಖನಿಗೆ ಅಪ್ಪಣೆಮಾಡಿದನು. ಪ್ರತ್ಯಕ್ಷ ಹೆಂಡತಿಯ ಅಹಂಕಾರವನ್ನೇ ಖಂಡನಮಾಡಲಿಕ್ಕೆ ಹಿಂದೆಮುಂದೆ ನೋಡದಂಥ ಸ್ವಾಮಿಯು ಇತರರ ಅಹಂಕಾರವನ್ನು ತಡೆಯಬಹುದೇ?

ಆತನು ಎಂದಿಗೂ ತಡೆಯಲಾರನು. ಆಗ ಸುಮುಖನ ಮೋರೆಯು ಕಪ್ಪು ಬಡೆದುಹೋಯಿತು. ಮಾಡುತ್ತಾನೇನು? ಪರಮಾತ್ಮನ ಅಪ್ಪಣೆ ಮೀರುವದಕ್ಕೆ ಸಾಧ್ಯವಿಲ್ಲ. ದೈತ್ಯನ ಹೊಟ್ಟೆಯಲ್ಲಿ ಹುಟ್ಟಲೇ ಬೇಕಾಯಿತು. ಪರಮಾತ್ಮನ ಚರಣಾರವಿಂದದಲ್ಲಿ ಬಿದ್ದು ಹೊರಳಾಡ ಹತ್ತಿದನು; ಮತ್ತು ತಾನು ದೈತ್ಯನಲ್ಲಿ ಜನಿಸಿದರೂ ಕೇವಲ ಭಗವದ್ಭಕ್ತನಾಗಿರುವಂತೆಯೇ ಅನುಗ್ರಹಿಸಬೇಕೆಂದು ಬೇಡಿಕೊಂಡನು. ಈ ಪ್ರಕಾರ ಅಹಂಕಾರದಿಂದ ಮತ್ತನಾದ ಸುಮುಖನೇ ಹಿರಣ್ಯಕಶಿಪುವಿನ ಹೊಟ್ಟೆಯಲ್ಲಿ ಪ್ರಲ್ಹಾದನಾಗಿ ಜನಿಸಿದನಂತೆ. ಈತನಿಗೆ ಸಂಹತಾ-ಪ್ರಹತಾ ಎಂಬಿಬ್ಬರು ಪರಿಚಾರಕರಾಗಿದ್ದರಂತೆ

ಈ ವಿಷಯುವು ಸ್ಕಂದ ಪುರಾಣದ ಸಿಂಹಾಚಲ ಮಾಹಾತ್ಮೆಯಲ್ಲಿ ಹೇಳಲ್ಪಟ್ಟಿರುವದು.

ಮುಂದೆ ಈ ಸುಮುಖನೇ ತ್ರೇತಾಯುಗದಲ್ಲಿ ವಿಭೀಷಣನಾಗಿ ಹುಟ್ಟಿದನು. ಆತನ ಪರಿಚಾರಕರಾದ ಸಂಹತ-ಪ್ರಹತರು ಸಂಧಿಕ-ಪ್ರಸಂಧಿಕರೆಂಬ ನಾಮದಿಂದ ಹುಟ್ಟಿ ವಿಭೀಷಣನಿಗೆ ಸೇವಕರಾದರು.

ದ್ವಾಪರ ಯುಗದಲ್ಲಿ ಅದೇ ಸುಮುಖನು ಪ್ರತೀಪರಾಜನ ಪುತ್ರನಾಗಿ ಬಾಲ್ಹೀಕರಾಯನೆಂದು ಪ್ರಸಿದ್ಧನಾದನು. ಆಗ ಸಂಹತ-ಪ್ರಹತರು ಪ್ರತೀಪ-ಅಪ್ರತೀಪರೆಂಬ ಹೆಸರಿನಿಂದ ಹುಟ್ಟಿ ಬಂದರು

ಇದೇ ಸುಮುಖನು ಕಲಿಯುಗದಲ್ಲಿ ವ್ಯಾಸರಾಯನೆಂಬ ಹೆಸರಿನಿಂದ ಅವತರಿಸಿದನು ಆ ವ್ಯಾಸರಾಯರೇ ಮುಂದೆ ಶ್ರೀ ರಾಘವೇಂದ್ರಸ್ವಾಮಿಗಳಾಗಿ ಹುಟ್ಟಿದರು. ಸಂಹತ-ಪ್ರಹತರು ಅಪ್ಪಣಾಚಾರ್ಯ-ಕೃಷ್ಣಾಚಾರ್ಯರೆಂಬ ಹೆಸರಿನಿಂದ ಜನಿಸಿ ಇವರ ಶಿಷ್ಯರಾದರು. ಅಪ್ಪಣಾಚಾರ್ಯರು ಶ್ರೀ ರಾಘವೇಂದ್ರಸ್ತೋತ್ರ-ರಾಘವೇಂದ್ರಕವಚ-ರಾಘವೇಂದ್ರ ದಂಡಕ ಮೊದಲಾದವುಗಳನ್ನೂ ಕೃಷ್ಣಾಚಾರ್ಯರು ಕೃಷ್ಣಾಚಾರ್ಯಸ್ಮೃತಿಯೆಂಬ ಗ್ರಂಥವನ್ನೂ ಬರೆದಿದ್ದಾರೆ. ಈ ವಿಷಯುವು ಬಳ್ಳಾರೀ ಜಿಲ್ಹೆಯ ಹೊಸಪೇಟೆಯಲ್ಲಿದ್ದ ಶ್ರೀ ಕೃಷ್ಣಾವಧೂತರೆಂಬವರು ಬರೆದ ರಾಘವೇಂದ್ರ ತಂತ್ರವೆಂಬ ಗ್ರಂಥದಲ್ಲಿ ಉಕ್ತವಾಗಿರುವದು † ಇರಲಿ. ಇನ್ನು ನಮ್ಮ ಕಥಾನ

† ೧ ಪುರಾ ಪ್ರಲ್ಹಾದ ನಾಮಾಭೂತ್ ಹಿರಣ್ಯಕಶಿಪೋಃ ಸುತಃ ||
ಯದರ್ಥಂ ಶ್ರೀ ಮಹಾವಿಷ್ಣುಃ ನೃಕಂಠೀರವತಾಂಗತಃ ||೧||

ಕದ ಕಡೆಗೆ ತೆರಳೋಣ.

ಪೂರ್ವ ಸಮುದ್ರತೀರದಲ್ಲಿ ವಿಜಗಾ ಪಟ್ಟಣ(ವಿಶಾಖ ಪಟ್ಟಣ)ಕ್ಕೆ ಸಮೀಪವಾಗಿವಿಜಯನಗರವೆಂಬುದೊಂದುಗ್ರಾಮವಿದೆ ಕನ್ನಡಿಗರಸಾಮ್ರಾಜ್ಯದ ರಾಜಧಾನಿಯಾದ ಪ್ರಖ್ಯಾತ ವಿಜಯನಗರವೇ ಬೇರೆ. ಇದೇ ಬೇರೆ.

---

ಸಂಹತಃ ಪ್ರಹತಶ್ಚೇತಿ ತಾಸ್ಯಾಸ್ತಾಂ ಪರಿಚಾರಿಣೌ ||
ತ್ರೇತಾಯಾಂ ರಾಮಸೇವಾರ್ಥಂ ವಿಭೀಷಣ ತಯಾಜನಿ ||೨||
ತತ್ರಾಪಿ ಜಾತೌ ತೌಜಾತೌ ಸಂಧಿಕಶ್ಚ ಪ್ರಸಂಧಿಕಃ ||
ದ್ವಾಪರೇತಿ ಸಮಂತಾಭ್ಯಾಂ ಸಮಾವಿಷ್ಟಶ್ಚ ವಾಯುನಾ ||೩||
ಭೂಭಾರಕ್ಷಪಣೆ ವಿಷ್ಣೋರಂಗತಾ ಮಾತ್ರಮೇವಸಃ ||
ಪ್ರತೀಪ ಪುತ್ರತಾವಾಪ್ಯ ಬಾಲ್ಹೀಕೇಷ್ವ ಭವತ್ಪತಿಃ ||೪||
ಕಲೌ ಗೋಪಾಲ ಕೃಷ್ಣಸ್ಯ ಪೂಜಾಯೈ ವ್ಯಾಸಮಸ್ಕರಿ ||
ಭೂತ್ವಾನಿರ್ಜಿತ್ಯ ದುರ್ವಾದೀನ್ ಮಧ್ವಶಾಸ್ತ್ರಂ ಪ್ರಕಾಶಯನ್ ||೫||
ಬ್ರಹ್ಮಮಾನಸ ಪೂಜಾಯಾಂ ಆವಿರ್ಭೂತೌ ಹೃದಂಬುಜಾತ್ ||
ಸೀತಾರಾಘವಯೋರರ್ಚ್ಯಾ ತಸ್ಯ ಪೂಜಾವಿಶೇಷತಃ ||೬||
ಶ್ರೀರಾಘವೇಂದ್ರ ತೀರ್ಥಾಖ್ಯೋ ವತೀಯರ್ಯ ಯತಿರೂಪತಃ ||
ವಿವರ್ತ್ಯ ಮಧ್ವಶಾಸ್ತ್ರಸ್ಯ ಲೋಕೋಪಕೃತಿ ಮಾತನೋತ್ ||೭||
ಅಪ್ಪಣಾಚಾರ್ಯ ಕೃಷ್ಣಾಖ್ಯೌ ತತ್ರಾಪಿ ದ್ವಿಜರೂಪತಃ ||
ಸಂಹತಃ ಪ್ರಹತೌ ಜಾತೌ ಶಿಷ್ಯೌ ತಸ್ಯ ಪ್ರಿಯೌ ಸದಾ ||೮||

(ರಾಘವೇಂದ್ರ ತಂತ್ರ ತೃತೀಯ ಪಟಲ.)

ಇದೇ ವಿಷಯವನ್ನು ನರಹರಿ ಆಚಾರ್ಯರೆಂಬವರು ಸಂಕ್ಷೇಪವಾಗಿ ತಮ್ಮದೊಂದು ಪದದಲ್ಲಿ ಹೀಗೆ ಬಣ್ಣಿಸಿದ್ದಾರೆ.

ರಾಗ | ಕಾಂಬೋದಿ | ತಾಳ | ಆದಿ

ಎಂತು ಬಣ್ಣಿಸಲಿ ನಿನ್ನಾ | ಶ್ರೀಗುರು ರನ್ನಾ || ಎಂತು ಬಣ್ಣಿಸಲ್ಯೋ ಶ್ರೀಮಂತ್ರನಿಲಯ
ವಾಸಿ | ಸಂತರ ನಿಕರಕ್ಕ ಅಂತುಗಾಣದ ಚರ್ಯ || ಪ ||
ಮೊದಲು ಕನಕ ಶಯ್ಯನುದರದಿ ಜನಿಸೊಕಾಲದಲಿ ಸ್ವಮಾತೃಗರ್ಭದಲಿರುವಾಗ ನಾರದರು
ತಿಳಿದು ಬಂದು ಮುದದಿಂದಲಿ ತಮ್ಮ ವದನದಿಂದುಪದೇಶ ಬದಿಯಲಿ ಮಾಡಲು ||
ಅದನು ಸಾದರದಿ ಕೇಳಿ ಪ್ರಲ್ಹಾದಾಭಿಧನಾಗಿ ಮುಖ್ಯ ಘಾಳೀದೇವನ ದಿವ್ಯ ಸದಮಲಾ
ವೇಶ ತಾಳಿ ಆ ಕಾಲದಿ | ಉದ್ಭವಿಸಿದ್ಯೊ ಹರಿಪದಜ ಪೂರ್ವರ ಮೌಳಿ || ೧ ||
ತಾಪಿದೈತ್ಯನು ಸಂತಾಪಪಡಿಸೆ ಸರ್ವ | ವ್ಯಾಪಿಯು ನರಮೃಗರೂಪನ ಮಾಡಿಸಿ ]
ಕೋಪಕಂಜದಲಿ ಸಮೀಪದಿ ಚರಿಸಿ | ಪಾದಪದ ಮುಗಳ ಪದೋಪದಿ ನುತಿಸಿ ಪ್ರೇಮ:

ಆ ಕಾಲದಲ್ಲಿ ಕರ್ಣಾಟಕಪ್ರಾಂತದೊಳಗೆ ಎಣಿಸಲ್ಪಡುತ್ತಿದ್ದರೂ ಸದ್ಯಕ್ಕೆ ಮದ್ರಾಸ ಇಲಾಖೆಗೆ ಸೇರಿ ಆಂಧ್ರಪ್ರಾಂತದೊಳಗೆ ಕೂಡಿಹೋಗಿದೆ. ಕನ್ನಡ ನಾಡೆಂಬುದರ ಗುರುತು ಸಹ ಸಿಕ್ಕುವ ಹಾಗಿಲ್ಲ. ಕಾಲವು ಏನನ್ನು ತಾನೇ ಮಾಡದು? ಇರಲಿ.

ಇಲ್ಲಿ ಗೌತಮಗೋತ್ರದ ತಿಮ್ಮಣಾಚಾರ್ಯನೆಂಬವ † ನೊಬ್ಬ ಸತ್ವಶೀಲನಾದ ಬ್ರಾಹ್ಮಣನಿದ್ದನು. ಈತನು ಹಳ್ಳೀ ದಶಗ್ರಂಥಿ, ವೇದಶಾಸ್ತ್ರ ಪಾರಂಗತ, ಮೇಲಾಗಿ ಕರ್ಮನಿಷ್ಠ, ಸಾಲದುದಕ್ಕೆ ವೀಣಾವಾದನದಲ್ಲಿಯೂ ಅತ್ಯಂತ ಚತುರ. ಇದರಿಂದ ಈತನಿಗೆ ವೇಣೀತಿಮ್ಮಣಾಚಾರ್ಯರೆಂದೇ ಹೆಸರು ಬಿದ್ದಿತ್ತು. ಈತನ ತಂದೆಯಾದ ಹಿರಣ್ಮಯಾಚಾರ್ಯರೂ ‡ (ಕನಕಾಚಲಭಟ್ಟರು) ಅಜ್ಜಂದಿರಾದ ಕೃಷ್ಣಮಾಚಾ

ಪಾರ ಸಂಪಾದಿಸಿ ಪುನಃ ಮತ್ತೆ ದ್ವಾಪರದಲಿ ಜನಿಸಿ ಮೆರೆದ್ಯೋ ನೀ ಪ್ರತೀಪ ಕುವರನೆನಿಸಿ ಬಾಹ್ಲೀಕ ಭೂಪತಿಯಾಗಿ ತ್ರಯಿಪತಿಯನು ಒಲಿಸಿ ॥ ೨ ॥
ಈ ಪರಿಯಲಿ ಭವಕೂಪಾರ ಸಾವಿಕನ ಪರಮಾನು ಕಂಪಾಪಾತ್ರನಾಗುತಲ್ಯಾ ಪವನನ ಮತಸ್ಥಾಪನೆಗೋಸುಗನೀ ಪುಣ್ಯಪ್ರಾರಬ್ಧದಾಫಲಸವಿಯೋದಕ್ಕೆ ಪುನರೀಯುಗದಿದೇಹವ ಧರಿಸಿ ॥ ಶ್ರೀಪಾದರಾಯರ ದಯದಿಚಂದ್ರಿಕಾಚಾರ್ಯೇಪನಾಮದಿ ಭರದಿ ತೋಷಿಸಿ ನಿತ್ಯ ಗೋಪಾಲ ಕೃಷ್ಣನ ಭಾಪುರೆಯೆನಿಸಿದಿ ॥ ೩ ॥
ಶ್ರೀ ಕಂಜಜಾತ ಪಿನಾಕಿಯೆ ಮೊದಲಾದ ದಿವೌಕಸವಿಮತ ನಾನೇಕರೀತಿಗಳಿಂದ ನೀಕಯ್ಯವಶಮಾಡಿಕೊಂಡು ಈ ಜನರ ಶೋಕಕಳೆಯುತ್ತ ಬೇಕಾದ್ದು ಕೊಡುತಲಿ ಸಾಕಿಸಲಹ ಬೇಕೆಂದು ಬಿರುದ ಪೊತ್ತು ॥ ಈ ಕಲಿಯುಗದಿ ಬಂದು ವಿಜಯೀಂದ್ರರಶೋಕರತೋಕನೆಂದು ಪುಟ್ಟಿದ್ಯೋ ನಿನ್ನಂಥ ಕರುಣಿಯನ್ನು ನಾಕಾಣೆನೆಂದೆಂದು ॥ ೪ ॥

.... .... ....

ಇದೇ ಮೇರೆಗೆ ಕೇವಲ ಅಪರೋಕ್ಷಜ್ಞಾನಿಗಳಾದ ಶ್ರೀಪ್ರಾಣೇಶವಿಠ್ಠಲದಾಸರೂ ಕೂಡ — ರಾಯರ ನೋಡಿರೈ । ಶ್ರೀಗುರುರಾಯರ ಪಾಡಿರೈ ॥ ಪ ॥ ಎಂಬ ಪದದಲ್ಲಿ ಈ ಅಂಶವನ್ನು ಸೂಚಿಸಿರುವರು.

† ಜನಕೋಪಮಕನ್ಯಕೇನ್ವಯೇಸ್ಮಿನ್ನಿಜತಾತಾಧಿಕನಂದನೆ ಗುಣೌಘ್ಯೈಃ ।
ಅನುಜಾತಸಮಾನಪೂರ್ವಜಾತೇ ಭವದೇವೋ ಭುವಿ ಕೃಷ್ಣನಾಮಧಾಮಾ ॥೧॥

‡ ಗುಣವಾರಿಧಿರಾವಿರಾಸ ವಿದ್ಯಾಚಣಕೃಷ್ಣಾರ್ಯಮಹೀಸುರಾಧಸೇತುಃ ॥
ಕನಕಾಚಲನಾಮ ಪುಣ್ಯನಾಮಾ ಕನಕೋರ್ವೀಭೃದಿವಾ ಪರೋತಧೀರಃ ॥೨॥

ರ್ಯರೂ * ಸದಾಚಾರಶೀಲರಾದ ಬ್ರಾಹ್ಮಣರೇ ಆಗಿದ್ದರಲ್ಲದೆ ಪಾಂಡಿತ್ಯದಲ್ಲಿಯೂ ಮಿಗಿಲಾದವರೆಂದು ಹೆಸರುವಾಸಿಯಾಗಿದ್ದರು. ಕೃಷ್ಣಮಾಚಾರ್ಯರಂತು ವೈಣಿಕವಿದ್ಯೆಯಲ್ಲಿ ಅತಿಪ್ರಖ್ಯಾತರಾಗಿ ವಿಜಯನಗರದ ದೊರೆಯಾದ ಕೃಷ್ಣರಾಜನಿಗೆ ಗುರುಗಳಾಗಿದ್ದರು. ಅರಸನು ಈ ಗಾಂಧರ್ವ ವಿದ್ಯೆಯನ್ನು ಇವರಿಂದಲೇ ಕಲಿತು ಇವರಿಗೆ ಮುತ್ತಿನ ಕಂಠಿಯೇ ಮೊದಲಾದ ಆಭರಣಗಳನ್ನೂ ಅನೇಕ ಬಿರುದಾವಳಿಗಳನ್ನೂ ಗುರುದಕ್ಷಿಣೆಯಾಗಿ ಕೊಟ್ಟಿದ್ದನಂತೆ. § ತಿಮ್ಮಣಾಚಾರ್ಯರಿಂದ ತಂದೆ-ಅಜ್ಜಂದಿರ ಹೆಸರು ಇನ್ನೂ ಮುಂದಕ್ಕೆ ಬಂದಿತು. ಇಂಥ ಮಕ್ಕಳೇ ಮಕ್ಕಳು. ಉಳಿದವರೆಲ್ಲರೂ ಜೀವಕ್ಕೆ ಮುಕ್ಕಳು.

ತಿಮ್ಮಣಾಚಾರ್ಯರಿಗೆ ಕೇವಲ ಪತಿಪರಾಯಣಳಾದ "ಗೋಪಿಕಾಂಬೆ" † ಯೆಂಬವಳೊಬ್ಬ ಹೆಂಡತಿಯಾಗಿದ್ದಳು. ಆಕೆಯ ಪತಿನಿಷ್ಠೆ-ದೈವತ ಭಕುತಿ- ವಿನಯಾದಿ ಗುಣಗಳನ್ನು ನೋಡಿದವರೊಬ್ಬೊಬ್ಬರೂ ತಿಮ್ಮಣಾಚಾರ್ಯರಿಗೆ ಸರಿಯಾದ ಹೆಂಡತಿಯೆಂದು ಹೊಗಳುತ್ತಿದ್ದರು. "ಅಮೃತಂ ಸುಗುಣಾಭಾರ್ಯಾ |" ಎಂಬಂತೆ ಗೋಪಿಕಾಂಬೆಯೆಂಬ ಸುಗುಣೆಯಾದ ಹೆಂಡತಿಯೊಬ್ಬಳಿಂದ ತಿಮ್ಮಣಾಚಾರ್ಯರಿಗೆ ವಿಷಮಯವಾದ ಪ್ರಪಂಚವೂಕೂಡ ಅಮೃತಮಯವಾಗಿ ಹೋಯಿತು. ಅದರಿಂದಲೇ ಒಬ್ಬ ಕವಿಯು ಹೀಗೆ ಅಂದಿದ್ದಾನೆ:—

ಬೆಚ್ಚನ ಮನೆಯಾಗಿ ವೆಚ್ಚಕ್ಕೆ ರೊಕ್ಕಾಗಿ |
ಇಚ್ಛೆಗೆ ಬರುವ ಸತಿಯಿರಲು ಕೈಲಾಸಕ್ಕೆ |
ಕಿಚ್ಚು ಹಚ್ಚೆಂದ ಸರ್ವಜ್ಞ ||

---

* ಉದಭೂದಧಿಭೂತಲೇ ದ್ವಿಜೇಂದ್ರಾ ದಧಿಭೂರಾಗಮಮೌಲಿಶಸ್ತ್ರಭಾಜಾಂ||
ಅವದನ್ ಕಿಲ ತಿಮ್ಮಣಾಚಾರ್ಯವಾರ್ಯಾಃ ಸುಹೃದೋ ವೇಂಕಟಶೈಲನಾಥನಾಥಂ||೩||
(ರಾಘವೇಂದ್ರವಿಜಯ)

§ ಉಪದಿಶ್ಯ ಸಕೃಷ್ಣಭೂವಲಾರೇರ್ನಿಜಗಾಂಧರ್ವಕಲಾಂಕಲಾಮಗೃಹ್ಣಾತ್ ||
ಘನಮೌಕ್ತಿಕ ಗುಚ್ಛಹಾರಪೂರ್ವಾಂ ಬಿರುದಾಲೀಂ ಗುರುದಕ್ಷಿಣಾಪದೇಶಾತ್ ||

† ಸ್ಮೃತಿವನ್ನಿಗಮಸ್ಯಪತ್ನೀವದ್ದಿನನಾಥಸ್ಯ ಮುನೇರರುಂಧತೀವ ||
ರಜನೀ ಸುಹೃದಃ ಕುಮುದ್ವತೀವ ಮಹಿಲಾತಸ್ಯಲಸಾಸ ಗೋಪಿಕಾಂಬಾ ||
(ರಾಘವೇಂದ್ರವಿಜಯ)

ಈಗಿನ ತಿಮ್ಮಣ್ಣಾಚಾರ್ಯರ ಸಂಸಾರವು ಇಂಥಾದ್ದು. ಗಂಡ-ಹೆಂಡರಿಬ್ಬರೂ ಸುಖಸಾಗರದಲ್ಲಿ ತೇಲುತ್ತ ತೇಲುತ್ತ ನಡೆದರು. ಆದರೇನು? ಅವರನ್ನು ದಡಕ್ಕೆ ತಂದುಮುಟ್ಟಿಸುವಂಥ ಮಗನೊಬ್ಬನು ಹುಟ್ಟಲಿಲ್ಲ. ಅವರು ಸಾಗರದಲ್ಲಿಯೇ ತೇಲಾಡಬೇಕಾಯಿತು. ಆಗ ಅವರಿಗೆ ಯೋಚನೆ ಹುಟ್ಟಿತು. ತಡಮಾಡಲಿಲ್ಲ. ದೀನಬಂಧುವೂ- ಶರಣಾಗತ ರಕ್ಷಕನೂ- ಭೂವೈಕುಂಠಪತಿಯೂ ಎನಿಸಿದ ಶ್ರೀವೆಂಕಟರಮಣನ ಸೇವೆ ಮಾಡಬೇಕೆಂದು ಹೊರಟೇಬಿಟ್ಟರು. ವಿಜಯನಗರದಿಂದ ಹೊರಟವರು ತುಂಡೀರಮಂಡಲದಲ್ಲಿರುವ 'ಪಟ್ಟಣ' ಎಂಬ ಅಗ್ರಹಾರದಲ್ಲಿ ನಿಂತು ಸೇವಿಸಹತ್ತಿದರು. ‡ ವೆಂಕಟಪತಿಯು ಭಕ್ತರ ಕೈವಾರಿ. ಭಕ್ತಾಧೀನನೆಂಬುದು ಆತನ ಬಿರುದು ತನ್ನವರ ಕಷ್ಟಗಳನ್ನು ಆತನು ಎಂದಿಗೂ ಕಣ್ಣಿನಿಂದ ನೋಡಲಾರ. ಈ ವಿಷಯದಲ್ಲಿ ಮಹಾತ್ಮರಾದ ಶ್ರೀಜಗನ್ನಾಥದಾಸರಾಯರು ಏನು ಹೇಳಿಕೊಂಡಿದ್ದಾರೆ ನೋಡಿರಿ?

ಅಡವಿಯೊಳು ಬಿತ್ತದಲೆ ಬೆಳದಿಹ ।
ಗಿಡದ ಮೂಲಿಕೆ ಸಕಲ ಜೀವರ ।
ಒಡಲೊಳಿಪ್ಪಾಮಯವ ಪರಿಹರಗೈಸುವಂದದಲೀ ॥

---

‡ ಅಥ ತುಂಡಿರಮಂಡಲೇಗ್ರಹಾರೇ ಲಸಿತೇ ಪಟ್ಟಣನಾಮ್ನಿ ವಾಸಯೋಗ್ಯೆ॥
ಕಮಲಾರಮಣಂ ಪ್ರಸಾದ್ಯ ಕಾಂತಾ ಮಿಲಿತಃ ಕಾನಪಿ ವತ್ಸರಾನ ನೈಷೀತ್॥
(ರಾಘವೇಂದ್ರವಿಜಯ)

ವಿಜಯನಗರದ ಅರಸರ ಕಾಲದಲ್ಲಿ ಅವರಿಗೆ ಅಧೀನರಾಗಿದ್ದ ರಾಜರಿಗೆಲ್ಲ ಮಾಂಡಲಿಕರಾಜರೆಂದೂ—ಆ ಮಾಂಡಲಿಕರು ಆಳುತ್ತಿದ್ದ ಭೂಭಾಗಕ್ಕೆ ಮಂಡಲವೆಂದು ಹೆಸರಿಟ್ಟಿದ್ದರು. ಇಂಥಾ ಮಂಡಲಗಳು ಎಷ್ಟೋ ಇದ್ದವು. ಅವುಗಳಲ್ಲಿ ತುಂಡೀರವೆಂಬುದೂ ಒಂದು ಮಂಡಲ.

ತುಂಡೀರದೇಶವೆಂದರೆ ತಿರುಪತಿಯ ಸುತ್ತಲಿನ ಪ್ರದೇಶವು- ಪಟ್ಟಣ ಎಂಬ ಅಗ್ರಹಾರವು ಈಗಿನ ಗೋವಿಂದರಾಜ ಪಟ್ಟಣವಾಗಿರಬಹುದೆಂದು ತೋರುತ್ತದೆ.

ಗಂಗಾದೇವಿಯಿಂದ ವಿರಚಿತವಾದ "ಮಧುವಿಜಯ" ಅಥವಾ 'ವೀರಕಂಪರಾಯಚರಿತ' ವೆಂಬ ಸಂಸ್ಕೃತಗ್ರಂಥದಲ್ಲಿ ಈ ತುಂಡೀರದೇಶದ ವರ್ಣನೆಯು ಬಂದಿರುವದು. ಮತ್ತು 'ವ್ಯಾಸರಾಯಚರಿತಂ, ಎಂಬ ಗ್ರಂಥದ ಕರ್ತರಾದ ಸೋಮನಾಥ ಕವಿಯು—ತಾನು ಕಾಂಚಿಯ ಸಮೀಪದಲ್ಲಿರುವ ತುಂಡೀರದೇಶದವನೆಂದು ಹೇಳಿಕೊಂಡಿದ್ದಾನೆ. ಅಲ್ಲದೆ-ಭವಿಷ್ಯೋತ್ತರಪುರಾಣ-ಶ್ರೀವೆಂಕಟೇಶಮಾಹಾತ್ಮ್ಯದಲ್ಲಿ ವರ್ಣಿಸಲ್ಪಡಿದ-ತೊಂಡದೇಶವಾದರೂ ಇದೇ ಆಗಿರುವದು.

———

ಜಡಜಸಂಭವ ಜನಕ ತ್ರಿಜಗ |
ದ್ವಡೆಯ ಸಂತೃಪಿಸೆನಲು ಯುವರಿ |
ದ್ದೆಡೆಗೆ ಬಂದೊದಗುವನು ಭಕ್ತರ ಭಿಡೆಯ ಮೀರದಲೆ ||
(ಹರಿಕಥಾಮೃತಸಾರ)

ಇಂಥಾ ವೈಕುಂಠಪತಿಯು ತಿಮ್ಮಣಾಚಾರ್ಯರ ಅಚಲವಾದ ಭಕ್ತಿಗೆ ಮೆಚ್ಚಿದನೆಂಬುವದೇನಾಶ್ಚರ್ಯ! ಗೋಪಿಕಾಂಬೆಯು ಗರ್ಭಿಣಿಯಾಗಿ ಒಂದು ಕನ್ಯಾರತ್ನವನ್ನು ಪಡೆದಳು. ಬಹುದಿವಸದಿಂದ ಮಕ್ಕಳು ಮಕ್ಕಳೆಂದು ಹಲುಬಿ ಹಂಬಲಿಸುವವರಿಗೆ ಗಂಡೇನು? ಹೆಣ್ಣೇನು? ವಿಚಾರಿಸಿದರೆ—'ಪುತ್ರಾಚ್ಛತಗುಣಂ ಪುತ್ರೀ! ಎಂದು ಕೆಲ ವಿಷಯಗಳಲ್ಲಿ ಮಗನಿಗಿಂತಲೂ ಮಗಳಿಗೇ ಹೆಚ್ಚು ಗೌರವವು ಕೊಡಲ್ಪಟ್ಟದೆ. ರೂಢಿಯಲ್ಲಾದರೂ ಹೀಗೆಯೇ-ಹೆಣ್ಣು ಹುಟ್ಟದ ಮನೆಯು ತಣ್ಣಗೆಂದು ಹೇಳುವರಲ್ಲವೇ? ಕನ್ನಡ ಕವಯಿತ್ರಿಯೊಬ್ಬಳು ಇದರ ನಿರ್ಣಯವನ್ನು ಹೀಗೆ ಮಾಡಿರುವಳು:-

ಕುಲಪುತ್ರನೋದಿ ತಿಳಿದು ನಡೆದಲ್ಲದೆ |
ಕುಲವನುದ್ಧರಿಸಲರಿಯನು ||
ಕುಲಪುತ್ರಿಯೊಳುಗುವರನಿಗಿತ್ತ ಮಾತ್ರಕೆ |
ಕುಲಕೋಟಿಯನುದ್ಧರಿಪಳು || ೧ ||
ಪೆಣ್ಣಲ್ಲವೆ ತಮ್ಮನೆಲ್ಲಪಡೆದತಾಯಿ |
ಪೆಣ್ಣಲ್ಲವೆ ಪೊರೆದವಳು ||
ಪೆಣ್ಣುಪೆಣ್ಣೆಂದೇತಕೆ ಬೀಳುಗಳೆವರು |
ಕಣ್ಣುಕಾಣದ ಗಾವಿಲರು || ೨ ||
(ಹದಿಬದೆಯ ಧರ್ಮ.)

ಹೀಗಿದ್ದರೂ— ಹುಟ್ಟದ ಮನೆಯನ್ನು ಬಿಟ್ಟು ಹೋಗುವದೆಂದೋ-ಇನ್ನಾವ ಕಾರಣದಿಂದೋ ಹೆಣ್ಣು ಹುಟ್ಟದರೆ ಹುಣ್ಣು ಹುಟ್ಟದ ಹಾಗಾಯಿತೆಂದು ಜನರು ತಿರಸ್ಕರಿಸುತ್ತಿರುವರು. ಇದು ಹೇಗೇ ಇರಲಿ, ತಿಮ್ಮಣಾಚಾರ್ಯರೂ-ಗೋಪಿಕಾಂಬೆಯೂ ಮಗಳ ಮುದ್ದು ಮುಖವನ್ನು ನೋಡಿದ ಕೂಡಲೆ ಅಪಾರವಾದ ಸಂತೋಷವನ್ನು ಹೊಂದಿದರು. ಕರುಣಾಸಾಗರನಾದ ವೇಂಕಟಪತಿಯು ನಮ್ಮ ಮೇಲೆ ಅನುಗ್ರಹ ಮಾಡಿದನಲ್ಲಾ! ಎಂಬ ಸಂತೋಷವು ಅವರ ಹೊಟ್ಟೆಯಲ್ಲಿ ಹಿಡಿಸದಾಯಿತು.

ಎಷ್ಟೋ ಉತ್ಸವಾದಿಗಳನ್ನು ಮಾಡಿದರು. ಬಡಬಗ್ಗರಿಗೆ ದಾನ-ಧರ್ಮ ಮಾಡಿದರು. ಹನ್ನೆರಡನೆಯ ದಿವಸ ಬಂತು. ಕೂಸನ್ನು ತೊಟ್ಟಿಲಲ್ಲಿ ಹಾಕಿ 'ಎಂಕೂ' ಎಂದು ನಾಮಕರಣ ಮಾಡಿದರು. ಎಂಕೂನು ಬೆಳೆದು ದೊಡ್ಡವಳಾದಳು. ಅಂಬೆಗಾಲಿಟ್ಟು ಓಡಾಡಹತ್ತಿದಳು; ಮೆಲ್ಲಗೆ ನಡೆ ಯಲಿಕ್ಕೂ ಹತ್ತಿದಳು. ತೊದಲು ಮಾತುಗಳನ್ನಾಡುತ್ತಿರುವಳು. ಆಕೆಯ ತೊದಲುವಾತಿನಲ್ಲಿಯೇ ತಾಯಿ-ತಂದೆಗಳಿಗೆ ಅಮೃತ ಪ್ರವಾಹವು ತೋ ರುತ್ತಿರುವದು. ಈ ಪ್ರಕಾರ ಏಕ ಮಾತ್ರ ಮಗುವನ್ನು ನೋಡಿ ಆನಂದ ಪಡುತ್ತಿರುವ ಗೋಪಿಕಾಂಬೆಗೆ ಶ್ರೀವೇಂಕಟರಮಣನು ಮತ್ತೊಂದು ಪುತ್ರ ರತ್ನವನ್ನು ಕೊಟ್ಟುಬಿಟ್ಟನು. ಆತನಿಗೆ ಗುರುರಾಜನೆಂದು ಹೆಸರಿಟ್ಟರು * ಗುರುರಾಜನೂ ಬೆಳೆದು ದೊಡ್ಡವನಾದನು. ತಿಮ್ಮಣಾಚಾರ್ಯರು ಮಗನ ಉಪನಯನವನ್ನೂ ಮಗಳ ಲಗ್ನವನ್ನೂ ಮಾಡಲುದ್ಯೋಗಿಸಿದರು. ಎಂಕೂ ಳನ್ನು ಮಧುರಾಪುರವಾಸಿಯಾದ ನರಸಿಂಹಾಚಾರ್ಯರೆಂಬವರಿಗೆ ಗೊತ್ತು ಮಾಡಿ ಗುರುರಾಜನ ಉಪನಯನವನ್ನು ತೀರಿಸಿ ಆಕೆಯ ಲಗ್ನವನ್ನು ಮಾಡಿದರು. (೦)

ಇತ್ತಲಾಗಿ ತಿಮ್ಮಣಾಚಾರ್ಯರಿಗೆ ಇನ್ನೊಬ್ಬ ಮಗನಾಗಬೇಕೆಂಬ ಆಶೆಹುಟ್ಟಿತು. 'ಒಬ್ಬ ಮಗ ಮಗನಲ್ಲ, ಒಕ್ಕಣ್ಣು ಕಣ್ಣಲ್ಲ' ಎಂಬ ನಾಣ್ಣು ಡಿಯಂತೆ ಒಬ್ಬ ಮಗನಿಂದ ಅವರು ಸಂತುಷ್ಟರಾಗಲಿಲ್ಲ. ಪುನಃ ಶ್ರೀವೆಂಕ ಟರಮಣನ ಸೇವೆಯನ್ನು ಮಾಡಹತ್ತಿದರು. ಆಗಲೂ ವೆಂಕಟಪತಿಯು ಅವರ ಭಕ್ತಿಗೆ ಮೆಚ್ಚಿ ಮತ್ತೊಂದು ಪುತ್ರರತ್ನವನ್ನು ಕೊಟ್ಟನು. ಆತನಿಗೆ 'ವೀಣಾವೆಂಕಟನೆಂದು' ಹೆಸರಿಟ್ಟರು. † ವೀಣಾವೆಂಕಟನು ಹುಟ್ಟಿದ ಕೂಡಲೆ ಜ್ಯೋತಿರ್ವಿದರು ಈ ಮಗುವನ್ನು ನೋಡಿ:—ಈತನೊಬ್ಬ

* ಕುಲದೈವತದೈಶಿಕಪ್ರಸಾದಾತ್ಪ್ರಭವಾಪತ್ಯಪುರಃ ಸರೋಽತುಲಃ ಶ್ರೀಃ॥
ಸ ಚಕಾರ ಚ ವೆಂಕಟಾಂಬಿಕಾಖ್ಯಾಂ ಸ್ವಸುತಾಯಾ ಗುರುರಾಜನಾಮ ಸೂನೋಃ॥
( ರಾಘವೇಂದ್ರವಿಜಯ )

(೦) ವೆಂಕಟಾಂಬಾಂ ಸ್ವತನಯಾಂ ಲಕ್ಷ್ಮೀನರಸಿಂಹಧೀಮತೇ॥
ಮಧುರಾಯಾಂ ವಾಸಕರ್ತ್ರೇ ದತ್ವಾ ತಸ್ಮೈ ಕುತೋಷಸಃ॥

† ವೆಂಕಟೇಶ ಪ್ರದತ್ತಂ ತಂ ವೀಣಾವೆಂಕಟನಾಮಕಂ॥
(ರಾ. ಅಣುವಿಜಯ)

ದೇವಾಂಶನೆಂದೂ-ಮಹಾಸತ್ಪುರುಷನಾಗುವನೆಂದೂ ತರ್ಕಿಸಿದರು. ಜ್ಯೋತಿರ್ವಿದರ ನುಡಿಯಂತೆ ಈತನೇ ಮುಂದೆ ಶ್ರೀರಾಘವೇಂದ್ರಸ್ವಾಮಿಗಳೆಂಬ ಹೆಸರಿನಿಂದ ಪ್ರಖ್ಯಾತನಾದನು. ತಿಮ್ಮಣಾಚಾರ್ಯರು ಗೋಪಿಕಾಂಬೆಯೂ ಜನ್ಮಾಂತರೀಯದಲ್ಲಿ ಏನು ಪುಣ್ಯ ಮಾಡಿಬಂದಿದ್ದರೋ ಅವರ ಹೊಟ್ಟೆಯಲ್ಲೀಗ ಪ್ರಲ್ಹಾದಾಂಶರಾದ ಶ್ರೀರಾಘವೇಂದ್ರ ಸ್ವಾಮಿಗಳು ಹುಟ್ಟಿಬಂದರು. ಅಹಾ! ಗೋಪಿಕಾಂಬೆ! ನೀನು ಧನ್ಯಳು! ಧನ್ಯಳು! ನಿನ್ನ ಪುಣ್ಯೋದರವನ್ನು ವರ್ಣಿಸಲು ನಾವೆಷ್ಟರವರು? ಇಕೋ ನಿನಗೂ ನಿನ್ನ ಮಗುವಿಗೂ ಸಾಷ್ಟಾಂಗವಾಗಿ ವಂದಿಸುವೆವು. ಪಾಮರರಾದ ನಮ್ಮನ್ನೂ ನಮ್ಮ ವಾಚಕವರ್ಗವನ್ನೂ ಈ ಭವಸಾಗರದಿಂದ ಪಾರು ಮಾಡಲಾರೆಯಾ? ಇದೊಂದನ್ನು ನಿನ್ನಲ್ಲಿ ಬೇಡಿಕೊಳ್ಳುವೆವು.

ವೀಣಾ ವೆಂಕಟನು ದೊಡ್ಡವನಾದನು. 'ವಿದ್ಯಾಕಾಮಂತು ಸಪ್ತಮೆ' ಎಂಬ ಶಾಸ್ತ್ರಾನುಸಾರವಾಗಿ ಏಳನೇ ವರ್ಷದಲ್ಲಿ ಅವನ ಉಪನಯನವಾಯಿತು. ನರಸಿಂಹಾಚಾರ್ಯರ ಬಳಿಯಲ್ಲಿ ವಿದ್ಯಾಭ್ಯಾಸಕ್ಕಿಟ್ಟರು. ನರಸಿಂಹಾಚಾರ್ಯರು ನಮ್ಮ ವಾಚಕರಿಗೇನು ಅಪರಿಚಿತರಲ್ಲ. ತಿಮ್ಮಣಾಚಾರ್ಯರ ಅಳಿಯಂದಿರು. ಇವರು ಆ ಕಾಲದಲ್ಲಿ ಘನ ವಿದ್ವಾಂಸರೊಳಗೆ ಎಣಿಸಲ್ಪಡುತ್ತಿದ್ದರು. ಮೇಲಾಗಿ ಬಾಲಕರಿಗೆ ಪಾಠಹೇಳುವಲ್ಲಂತೂ ಅತ್ಯಂತ ಹೆಸರಾಗಿದ್ದರು. ಪ್ರೌಢಪಾಠಕ್ಕಿಂತಲೂ ಬಾಲಪಾಠವನ್ನು ಹೇಳುವದು ಬಿಗಿಯಾದದ್ದು. ಯಾಕಂದರೆ ಚಿಕ್ಕಮಕ್ಕಳ ಬುದ್ಧಿಯು ಇನ್ನೂ ಅಷ್ಟು ವಿಸ್ತೃತವಾಗಿರುವದಿಲ್ಲ. ಅವರ ಮನಃಶಕ್ತಿಯನ್ನು ಪರೀಕ್ಷಿಸಿ ಅದಕ್ಕನುಗುಣವಾಗಿ ಶಿಕ್ಷಣವನ್ನು ಕೊಡುತ್ತಾ ಅವರ ಕೋಮಲ ಮನಸ್ಸನ್ನು ತಿದ್ದುವದು ಗುರುವಿನ ಕೆಲಸವಾಗಿರುವದು. ಇದು ಬಹಳ ಕಷ್ಟಕರವಾದದ್ದು. ಅಂತೆಯೇ ಈಗಲೂ ಬಾಲಪಾಠಕ್ಕೆ ಪ್ರೌಢರಾದವರನ್ನೇ ಏರ್ಪಡಿಸುತ್ತಲಿರುವರು.

ಗುರವೋ ಬಹವಃ ಸಂತಿ ಶಿಷ್ಯವಿತ್ತಾಪ ಹಾರಕಾಃ ||
ದುರ್ಲಭಃ ಸಗುರುರ್ಲೋಕೇ ಶಿಷ್ಯಹೃತ್ತಾಪ ತಾರಕಃ ||

( ಶಿಷ್ಯರ ದುಡ್ಡನ್ನು ಹರಣಮಾಡುವಂಥ ಗುರುಗಳು ಎಷ್ಟೋ ಜನರುಂಟು. ಆದರೆ ಅವರ ಮನಸಿನ ತಾಪವನ್ನು ಹೋಗಲಾಡಿಸಿ ಜ್ಞಾನೋಪದೇಶ ಮಾಡುವ ಗುರುಗಳು ದುರ್ಲಭ. )

ಎಂಬಂತೆ ಶಿಷ್ಯರ ಚಿತ್ತವನ್ನು ಹರಣಮಾಡಿಕೊಂಡು ಅವರಿಗೆ ವಿದ್ಯಾಮೃತವನ್ನು ಪಾನಮಾಡಿಸುವ ಗುರುಗಳಲ್ಲಿ ನರಸಿಂಹಾಚಾರ್ಯರು ಅಗ್ರಗಣ್ಯರಾಗಿದ್ದರು. ಚಿಕ್ಕಂದಿನಲ್ಲಿಯೇ ಇಂಥ ಗುರುವಿನ ಸನ್ನಿಧಾನವು ಸಿಕ್ಕದ್ದು ನಮ್ಮ ವೀಣಾವೆಂಕಟನ ಸುದೈವವಲ್ಲವೇ? ಬಾಲಕನಾದರೂ ವೆಂಕಟನೇನು ಕಡಿಮೆಯವನಲ್ಲ. ಗುರುಗಳು ಒಂದು ವಿಷಯವನ್ನು ಒಮ್ಮೆ ಹೇಳಿದರೆ ಸಾಕು. ಅದು ಈತನಿಗೆ ಮುಖಪಾಠವಾಗುತ್ತಿತ್ತು. ಇಷ್ಟೇ ಅಲ್ಲ, ಆ ವಿಷಯದ ಮೇಲೆ ಏನೇನು ಆಕ್ಷೇಪಗಳು ಹೊರಡಬಹುದೋ ಅವನ್ನೆಲ್ಲ ತಾನೇ ತನ್ನ ಬುದ್ಧಿಯಿಂದ ಯೋಚಿಸಿಕೊಂಡು ಅದಕ್ಕೆ ತಕ್ಕ ಸಮಾಧಾನಗಳನ್ನು ಬರೆದಿಟ್ಟು ಬಿಡುತ್ತಿದ್ದನು! ಇದು ಸಾಮಾನ್ಯ ಬಾಲಕರಿಗೆ ಬರತಕ್ಕುದಲ್ಲ. ಇಂಥ ಅಸಾಧಾರಣ ಬುದ್ಧಿಶಾಲಿಯಾದ ಶಿಷ್ಯನನ್ನು ನೋಡಿ ನರಸಿಂಹಾಚಾರ್ಯರು ಆನಂದಸಾಗರದಲ್ಲಿ ಮುಳುಗಿ ಹೋದರು. ಪಾಠಹೇಳುವದರಲ್ಲಿ ಅವರಿಗೆ ಇನ್ನೂ ಆಸಕ್ತಿಯು ಹೆಚ್ಚಿತು. ಶಿಷ್ಯನು ಕೇಳಿದಷ್ಟು ಸಂತೋಷ; ಓದಿದಷ್ಟು ಆನಂದ. ವೀಣಾವೆಂಕಟನು ಪಾಠಕ್ಕೆ ಎದುರಿಗೆ ಕುಳಿತರೆ ತೀರಿತು; ಗುರುಗಳಿಗೆ ಊಟಉಪಚಾರಾದಿಗಳು ಕೂಡ ಮರೆತುಹೋಗುವವು. ಎಷ್ಟು ಪಾಠ ಹೇಳಿದರೂ ಸಾಲದು. ಎಷ್ಟು ವಿಷಯ ವಿವೇಚನೆಮಾಡಿದರೂ ತೀರದು. ಅಹಾ! ನರಸಿಂಹಾಚಾರ್ಯರೇ! ಗುರುತ್ವವು ನಿಮ್ಮಲ್ಲಿ ಸಾರ್ಥಕವಾಯಿತು. ಪ್ರತ್ಯಕ್ಷ ಪ್ರಲ್ಹಾದನೇ ಅವತರಿಸಿ ಬಂದು ನಿಮ್ಮಲ್ಲಿ ವಿದ್ಯಾಭ್ಯಾಸಮಾಡುತ್ತಿರುವನೆಂದಮೇಲೆ ನಿಮ್ಮ ಸಮಾನ ಧನ್ಯರಿನ್ನಾರು?

ಭೋ ವಾಚಕವೃಂದ! ಇಂಥ ಶಿಷ್ಯರಿದ್ದ ಗುರುಗಳೇ ಧನ್ಯರಲ್ಲವೇ? ಪೂರ್ವಕಾಲದಲ್ಲಿ ಇಂಥ ಗುರುಶಿಷ್ಯರನ್ನು ಅನೇಕ ಕಡೆಯಲ್ಲಿ ನೋಡಬಹುದಾಗಿತ್ತು. ವಿದ್ಯಾಮಂದಿರದ ಬಾಗಿಲವನ್ನು ತೆರೆದು ಬಿಟ್ಟದೆಯೆಂದು ಹೇಳಿಕೊಳ್ಳುವ ಈಗಿನ ಕಾಲದಲ್ಲಾದರೋ—ದೊಡ್ಡ ದೊಡ್ಡ ವಿದ್ಯಾಲಯಗಳಲ್ಲಿ ಕೂಡ ಗುರುಗಳು ವ್ಯಾಖ್ಯಾನರೂಪದಿಂದ ಹೇಳುವದೂ, ಶಿಷ್ಯರು ಟಿಪ್ಪಣಿ-ನೋಟ್ಸುಮಾಡಿಕೊಳ್ಳುವದೂ ಇಷ್ಟೇ ಹೊರತು ಹೆಚ್ಚಿನ ಗುರುಶಿಷ್ಯಸಂಬಂಧವೇ ಕಂಡು ಬರುವದಿಲ್ಲ. ಈ ... ನ ನೂತನ ಪದ್ಧತಿಯಿಂದ ಹೊಟ್ಟೆಯ ಪಾಡಿಗಾಗಿ ದುಡಿಯುವ ಗುರುಗಳ ...-ಗುರುಗಳನ್ನು ಕಸಕ್ಕಿಂತ ಕಡೆಯಾಗಿ ತಿಳಿಯುವ ಶಿಷ್ಯರೂ ಹೆಚ್ಚುತ್ತಲಿರುವರು. ಇದರಿಂದಲೇ ನಮ್ಮ

ದೇಶವು ಇಷ್ಟು ಹೀನದೆಸೆಗೆ ಬಂದಿರುವದು ಇನ್ನೂ ಬರುತ್ತಿರುವದು ಆದರೂ ಎಷ್ಟೋ ಜನರು ಇದೊಂದು ನವನಾಗರಿಕತೆಯು ಲಕ್ಷಣವೆಂದು ಹೇಳಿಕೊಳ್ಳುತ್ತಿರುವರು. ನಮ್ಮ ದುರ್ದೈವ!

ವೀಣಾವೆಂಕಟನು ಈಗ ವೇದಶಾಸ್ತ್ರಗಳಲ್ಲಿ ಪಾರಂಗತನಾಗಿರುವನು. ಗುರುಗಳಾದ ನರಸಿಂಹಾಚಾರ್ಯರ ಬಂಡವಲವು ಇಲ್ಲಿಗೆ ತೀರಿದಂತಾಯಿತು. ಶಿಷ್ಯನ ಕುತೂಹಲವು ಮಾತ್ರ ಮುಗಿಯಲಿಲ್ಲ. ಇನ್ನೂ ಹೆಚ್ಚಿನ ವಿದ್ಯೆ ಕಲಿಯಬೇಕೆಂಬಾಶೆ ಹುಟ್ಟಿತು. ಅಷ್ಟರಲ್ಲಿ ಈತನ ಅಣ್ಣಂದಿರಾದ ಗುರುರಾಜಾಚಾರ್ಯರು ತಂದೆ-ತಾಯಿಗಳ ಅಪ್ಪಣೆಯಂತೆ ಅತಿ ಸುಂದರಳೂ ವಿದ್ಯಾವಿನಯ ಸಂಪನ್ನಳೂ ಆದ 'ಸರಸ್ವತಿ' ಎಂಬ ಕನ್ಯೆಯೊಡನೆ ವೀಣಾವೆಂಕಟನ ಲಗ್ನವನ್ನು ಮಾಡಿದರು. § ಕೂಡಲೆ ವೆಂಕಟನು ವಿದ್ಯಾರ್ಜನೆಗಾಗಿ ಕುಂಭಕೋಣಕ್ಕೆ ಹೊರಟು ಹೋದನು.

ಆಗ ಅಲ್ಲಿ ಮಂತ್ರಾಲಯಮಠದ ಶ್ರೀಸುಧೀಂದ್ರತೀರ್ಥರೆಂಬ ಸ್ವಾಮಿಗಳವರು ವಾಸಮಾಡಿಕೊಂಡಿದ್ದರು. ಇವರೇನು ಸಾಮಾನ್ಯರಲ್ಲ. ಚತುಃಷಷ್ಟಿಕಲೆಗಳಲ್ಲಿಯೂ ಪ್ರವೀಣರಾಗಿ ಅಪ್ಪಯ್ಯದೀಕ್ಷಿತರೆಂಬ ಮಹಾಪಂಡಿತರ ಶಿವಸರ್ವೋತ್ತಮತ್ವ ಸಾಧಕಗಳಾದ ಸಕಲ ಗ್ರಂಥಗಳಿಗೂ ಪ್ರತಿಗ್ರಂಥಗಳನ್ನು ರಚಿಸಿ 'ಚತುರಧಿಕ ಶತಗ್ರಂಥರತ್ನಪ್ರಣೇತಾ' ಎಂಬದಾಗಿ ಬಿರುದನ್ನು ಪಡೆದಂಥ ಶ್ರೀಮದ್ವಿಜಯೀಂದ್ರಸ್ವಾಮಿಗಳವರಕರಸಂಜಾತರು. ಅತಿಪ್ರಸಿದ್ಧ ವಿದ್ಯಾವಂತರು ಇವರ ವಿದ್ಯಾಕಲಾಕೌಶಲ್ಯವನ್ನು ನೋಡಿಯೇ ಶ್ರೀರಘುನಾಥಪ್ರಭು-ಶ್ರೇಷ್ಠನು ಇವರಿಗೆ ಕನಕಾಭಿಷೇಕವನ್ನು ಮಾಡಿಸಿದ್ದನು. † ಇದು ಅಲ್ಲದೆ ಕರ್ಣಾಟಕದ ದೊರೆಯೂ ಕೂಡ ಇವರ ಗ್ರಂಥ

---

§ ಜ್ಞಾತ್ವಾ ಲಗ್ನವಯಸ್ಕಂ ಚ ತಸ್ಮೈ ಕನ್ಯಾಂ ನ್ಯಯೋಜಯತ್ ॥
ಸರಸ್ವತೀತಿ ನಾಮ್ನೀಂ ಹಿ ಗುರುರಾಜಾಚಾರ್ಯಸ್ತದಾ ಮುದಾ ॥
ತತಃ ಶ್ರೀವೇಂಕಟಾಚಾರ್ಯಃ ಕುಂಭಘೋಣಪುರಂ ಗತಃ ॥
ತತ್ರ ಶ್ರೀಸ್ವಾಮಿನಂ ಶ್ರೇಷ್ಠಂ ಶ್ರೀಸುಧೀಂದ್ರನಾಮಕಂ ॥

(ರಾಘವೇಂದ್ರ ವಿಜಯ)

† ರಘುನಾಥಪ್ರಭುವೆಂದರೆ — ತಂಜಾವರದ ದೊರೆಯಾದ ಅಚ್ಯುತನಾಯಕನ ಮಗನು. ಈತನು ೧೬೧೪ರಲ್ಲಿ ಪಟ್ಟಕ್ಕೆ ಬಂದನು.

ಈ ವಿಷಯವನ್ನು — ಚತುರ್ಥಗುಚ್ಛದೊಳಗೆ ಬಂದಿರುವ 'ಕಾಲವಿಚಾರ'ದಲ್ಲಿ ವಿಸ್ತರಿಸಿರು

ರಚನಾಚಾತುರ್ಯಕ್ಕೆ ಆಶ್ಚರ್ಯಪಟ್ಟು ರತ್ನಾಭಿಷೇಕವನ್ನು ಮಾಡಿಸಿದ್ದ ನಂತೆ! ಈ ಶ್ರೀಪಾದಂಗಳವರು 'ಅಲಂಕಾರ ಮಂಜರಿ' (ಅಲಂಕಾರಗ್ರಂಥ) 'ಸುಭದ್ರಾಪರಿಣಯ' (ನಾಟಕ) ಎಂಬ ಗ್ರಂಥಗಳನ್ನು ರಚಿಸಿರುವರು.

ವೀಣಾವೆಂಕಟನು ನೆಟ್ಟಗೆ ಅಲ್ಲಿಗೆ ಹೋದನು. ಶ್ರೀಗಳವರು ಶಿಷ್ಯರಿಗೆ ಪಾಠ ಹೇಳುತ್ತ ಕುಳಿತಿದ್ದರು ಶಿಷ್ಯಸ್ತೋಮವು ಬಹು ದೊಡ್ಡ ದಾಗಿತ್ತು. ಈತನು ಹೋದವನೇ ಶ್ರೀಗಳವರಿಗೆ ವಿನಯದಿಂದ ಸಾಷ್ಟಾಂಗ ಹಾಕಿದನು. ಗುರುಗಳು ಈತನನ್ನು ನೋಡಿ ನೀನಾರೆಂದು ಕೇಳಲು— ತನ್ನ ವೃತ್ತಾಂತವನ್ನೆಲ್ಲ ಹೇಳಿ ವಿದ್ಯಾಭ್ಯಾಸಕ್ಕೆ ಸನ್ನಿಧಿಗೆ ಬಂದಿರುವೆ ನೆಂದು ಅರಿಕೆಮಾಡಿಕೊಂಡನು. ಶ್ರೀಗಳವರು ಸಂತೋಷಭರಿತರಾಗಿ ಈತ ನೊಬ್ಬನನ್ನು ತಮ್ಮ ಶಿಷ್ಯಸಮೂಹದಲ್ಲಿ ಕೂಡಿಸಿಕೊಂಡುಬಿಟ್ಟರು.

ವೀಣಾವೆಂಕಟನು ಸಾಮಾನ್ಯ ಬುದ್ಧಿಯವನಲ್ಲ. ಗುರುಗಳು ವಿಷ ಯವನ್ನು ಎಷ್ಟು ಸಂಕ್ಷೇಪದಿಂದ ಹೇಳಿದರೂ ಕೂಡ ಅದಕ್ಕೆ ಅತ್ಯಂತ ವಿಸ್ತೃತವಾದ ವ್ಯಾಖ್ಯಾನವನ್ನು ಆ ರಾತ್ರಿಯಲ್ಲಿಯೇ ಬರೆದಿಟ್ಟುಬಿಡುತ್ತಿ ದ್ದನು. ಯಾವ ಶಿಷ್ಯನ ಬುದ್ಧಿಗೂ ಗ್ರಹಿಸದಂಥ ವಿಷಯ ವಿವರಣೆ ಯನ್ನು ಈತನು ಲೀಲಾಮಾತ್ರವಾಗಿ ತಿಳಿದುಕೊಳ್ಳುವನು. ಉಳಿದ ಶಿಷ್ಯ ರಿಗೆ ಇಷ್ಟೊಂದು ಮೇಧಾಶಕ್ತಿಯು ಇರಲಿಲ್ಲ. ಅದರಿಂದಲವರು ವೀಣಾ ವೆಂಕಟನನ್ನು ಕಂಡು ಅಸೂಯೆ ಪಡಹತ್ತಿದರು. ಏನಾದರೂ ಮಾಡಿ ಆತನನ್ನು ಮಠದಿಂದ ಹೊರಗೆ ಹಾಕಿಸುವದು ಅವರ ಧ್ಯೇಯವಾಗಿತ್ತು.

"........ಮಡಿವಳ್ಳನಕಾ | ಶಳಮಂ ಮನ್ನಿಸುವರಾರ್

ದಿಗಂಬರರೂರೊಳ್" ||

ಎಂಬಂತೆ ಈತನ ಅಪ್ರತಿಮವಾದ ಬುದ್ಧಿಸಾಮರ್ಥ್ಯವನ್ನು ಕಂಡು ಹಿಡಿಯುವ ಶಕ್ತಿಯು ಹೇಗಾಗಬೇಕು? ಕಡೆಗೆ ಒಂದು ದಿವಸ ಶ್ರೀಗಳಿದು ರಿಗೆ ಹೀಗೆ ಚಾಡೀ ಹೇಳಿದರು:—"ವೀಣಾವೆಂಕಟನು ಬಹಳ ಆಟಗುಳಿ; ಲೇಶವಾದರೂ ಪಾಠವನ್ನು ಕಲಿಯುವದಿಲ್ಲ. ರಾತ್ರಿಯಲ್ಲಿ ಕೂಡಾ ನಿದ್ದೆ ಮಾಡದೆ ಉಡಾಳತನದಿಂದ ತಿರುಗುತ್ತಿರುವನು. ಇಂಥವನನ್ನು ಮಠ ದಲ್ಲಿ ಅನ್ನಹಾಕಿ ಇಟ್ಟುಕೊಂಡದ್ದು ಅನ್ಯಾಯವೇ ಸರಿ."

---

ವೆವು. ಅಲ್ಲದೆ ಮುಂದೆ ಬಂದಿರುವ ಯಜ್ಞನಾರಾಯಣದೀಕ್ಷಿತರ ವಿಷಯವನ್ನೂ ಅಲ್ಲಿಯೇ ಹೇಳಿ ರುವೆವು. ಆ ಭಾಗವನ್ನು ನೋಡಿರಿ.

ನೋಡಿದಿರಾ! ದುರ್ಜನರ ಸ್ವಭಾವವು ಹೇಗಿರುವದು? ಅವರು ತಮಗೆ ಏನೂ ಲಾಭವಿಲ್ಲದಿದ್ದರೂ ಎರಡನೆಯವರ ಕಾರ್ಯಹಾನಿಯನ್ನು ನೋಡಿ ಸಂತೋಷಪಡುವರು. ಅಂತೆಯೇ— ಇವರ ವಿಷಯದಲ್ಲಿ ಸುಭಾಷಿತಕಾರರು ಹೀಗೆ ಒಕ್ಕಣಿಸಿರುವರು:—

"ದುರ್ಜನಸ್ಯ ಸ್ವಭಾವೋಽಯಂ ಪರಕಾರ್ಯವಿನಾಶನಂ ||
ನೋದರಂ ತೃಪ್ತಿಮಾಪ್ನೋತಿ ಮೂಷಕೋವಸ್ತ್ರಭಕ್ಷಣಾತ್ ||

(ಇಲಿಯು ತನ್ನ ಹೊಟ್ಟೆಗೆ ತೃಪ್ತಿಯಾಗದಿದ್ದರೂ ವಸ್ತ್ರಗಳನ್ನು ಛಿನ್ನ ವಿಚ್ಛಿನ್ನವಾಗಿ ಕಡಿದು ಬಿಸುಟಿ ಆನಂದಿಸುವಂತೆ-ದುರ್ಜನರು ಎರಡನೇಯವರ ಕಾರ್ಯ ನಾಶದಿಂದಲೇ ಸಂತೋಷ ಪಡುವರು. ಇದೊಂದು ಅವರ ಹುಟ್ಟು ಸ್ವಭಾವ!)

ಶಿಷ್ಯರ ಮಾತು ಶ್ರೀಗಳವರಿಗೆ ಸರಿದೋರಲಿಲ್ಲ. ಅವರು ವಿಚಾರ ಮಾಡುವೆವೆಂದು ಹೇಳಿದರು. ಮುಂದೆ ನಾಲ್ಕಾರು ದಿವಸಗಳಾದ ಮೇಲೆ ಸುಧಾಪಾಠ ಹೇಳುವಕಾಲಕ್ಕೆ ಶ್ರೀಗಳವರಿಗೆ ಏನೋ ಸಂಶಯವು ತಟ್ಟಿದ್ದರಿಂದ— ಈ ಪಾಠವನ್ನು ನಾಳೆ ಹೇಳುವೆವೆಂದು ಎಲ್ಲರನ್ನೂ ಕಳಿಸಿಬಿಟ್ಟರು. ಹಾಗೂ ಅವತ್ತಿನ ರಾತ್ರಿಯಲ್ಲಿಯೇ ಶಿಷ್ಯನಾದ ವೆಂಕಟನನ್ನು ಪರೀಕ್ಷಿಸಬೇಕೆಂದು ಯೋಚಿಸಿದರು. ಪಾಪ! ವೆಂಕಟನಿಗೆ ಈ ಯಾವ ಸುದ್ದಿಯೂ ಗೊತ್ತಿರಲಿಲ್ಲ ನಿತ್ಯಕ್ರಮದಂತೆ ಅವತ್ತಿನ ದಿವಸವಾದರೂ ಗುರುಗಳು ಯಾವ ಪಾಠವನ್ನು ಸಂಶಯವೆಂದು ನಿಲ್ಲಿಸಿದ್ದರೋ ಅದಕ್ಕೇನೇ ಸರಿಯಾದ ಅರ್ಥವಿವರಣೆಯನ್ನು ಬರೆದಿಟ್ಟು ಮಲಗಿಕೊಂಡುಬಿಟ್ಟನು. (ಈಗೆ ವೆಂಕಟನು-ಸುಧಾಗ್ರಂಥಕ್ಕೆ 'ಪರಿಮಳ'ವೆಂಬ ಟಿಪ್ಪಣಿಯನ್ನು ಬರೆಯುತ್ತಿದ್ದನು) ಗಾಢವಾದ ನಿದ್ದೆಹತ್ತಿತು. ಹಳ್ಳೇಮಧ್ಯರಾತ್ರಿಯ ಸಮಯ. ಶ್ರೀಗಳು ಕೈಯಲ್ಲಿ ಒಂದು ದೀಪವನ್ನು ತಕ್ಕೊಂಡು ವೆಂಕಟನು ಮಲಗಿದ್ದ ಸ್ಥಳವನ್ನು ಹುಡುಕುತ್ತ ಬಂದರು. ವೆಂಕಟನಾದರೋ ಗುರಿಕೆ ಹೊಡೆಯುತ್ತಾನೆ. ಉಟ್ಟದ್ದೊಂದು ಅಂಗವಸ್ತ್ರ ಹೊತ್ತದ್ದೊಂದು ಪಂಚೆ. ಇಷ್ಟರ ಹೊರತು ಅವನ ಮೈಮೇಲೆ ಏನೂ ಇರಲಿಲ್ಲ. ಹತ್ತರದಲ್ಲಿ ಬರೆದಿಟ್ಟ ಕಾಗದಗಳು ಕೆಲವು ಬಿದ್ದಿದ್ದವು.

ಶ್ರೀಗಳವರು ಆ ಕಾಗದ ತಕ್ಕೊಂಡು ನೋಡುತ್ತಾರೆ! ಮುಂಜಾವಿನ ಪಾಠಹೇಳುವಾಗ ತಮಗೆ ಯಾವ ಸಂಶಯವು ಬಾಧಿಸುತ್ತಿತ್ತೋ ಅದಕ್ಕೇ

ಟಿಪ್ಪಣಿಯು ಅದರಲ್ಲಿ ಬರೆಯಲ್ಪಟ್ಟಿತ್ತು. ಆಗ ಅವರಿಗಾದ ಆನಂದವನ್ನು ಎಷ್ಟೆಂದು ಹೇಳೋಣ! ದಳ ದಳನೆ ಎರಡೂ ಕಣ್ಣುಗಳಿಂದ ಆನಂದಾಶ್ರುಗಳು ಸುರಿಯಹತ್ತಿದವು. ನಟ್ಟ ದೃಷ್ಟಿಯಿಂದ ವೆಂಕಟನನ್ನೇ ನೋಡಹತ್ತಿದರು. ಅವರಿಗೆ ತಿಳಿದು ಹೋಯಿತು. ಈತನು ಸಾಮಾನ್ಯ ಶಿಷ್ಯನಲ್ಲ. ದೇವಾಂಶನಾಗಿರಲಿಕ್ಕೇ ಬೇಕು ಅಹಾ! ಏನು ನಮ್ಮ ಪುಣ್ಯವೋ! ಇಂಥ ಶಿಷ್ಯನು ದೊರಕಿದನು, ಎಂದು ಮನಸ್ಸಿನಲ್ಲಿಯೇ ಆತನನ್ನು ಕೊಂಡಾಡಿ, ಆನಂದದಿಂದ ತಮ್ಮ ಮೈಮೇಲಿನ ಶಾಲನ್ನು ತೆಗೆದು ಆತನಿಗೆ ಹೊಚ್ಚಿ, ಬರೆದ ಓಲೆಗಳನ್ನು ತಕ್ಕೊಂಡು ಹೊರಟುಹೋದರು. ನಸುಕು ಹರಿಯಿತು. ವೆಂಕಟನು—

“ಉತ್ತಿಷ್ಠೋತ್ತಿಷ್ಠ ಗೋವಿಂದ ಉತ್ತಿಷ್ಠ ಗರುಡಧ್ವಜ।
ಉತ್ತಿಷ್ಠ ಕಮಲಾಕಾಂತ ತ್ರೈಲೋಕ್ಯಂ ಮಂಗಲಂ ಕುರು॥”

ಎಂಬದಾಗಿ ದೇವರನ್ನು ಧ್ಯಾನಿಸುತ್ತ ಎದ್ದು ಕುಳಿತನು. ಮೈಮೇಲೆ ನೋಡಿಕೊಳ್ಳುತ್ತಾನೆ! ದಿವ್ಯವಾದ ಶಾಲು. ಇದೇನು? ನಾನು ಪಂಚೆಯನ್ನು ಹೊತ್ತುಕೊಂಡು ಮಲಗಿರಲು, ಇಂಥ ಘನತರವಾದ ಶಾಲನ್ನು ಹೊಚ್ಚಿದವರಾರು? ಎಷ್ಟೆಷ್ಟೋ ಯೋಚಿಸಿದನು. ಕಡೆಗೂ ತಿಳಿಯಲೇ ಇಲ್ಲ. ಅಲ್ಲಿಂದ ಎಡಬಲಕ್ಕೆ ಹೊರಳಿ ರಾತ್ರಿಯಲ್ಲಿ ತಾನು ಬರೆದಿಟ್ಟ ಕಾಗದಗಳನ್ನು ನೋಡಿದನು. ಒಂದಾದರೂ ಇಲ್ಲ. ಗಾಬರಿಯಾದನು. ಇದೆಲ್ಲವೂ ತನ್ನ ಮೇಲೆ ಹೊಟ್ಟೇಕಿಚ್ಚುಪಡುತ್ತಿದ್ದ ಗೆಳೆಯರ ಕೆಲಸವಿರಬಹುದೆಂದು ಆತನಿಗೆ ಆಗ ಹೊಳೆಯಿತು. ಕೂಡಲೆ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಗುರುಸನ್ನಿಧಿಯಲ್ಲಿ ತಾನು ಊಹಿಸಿದ್ದನ್ನು ಹೇಳಿ ಶಾಲನ್ನು ತೆಗೆದಿಟ್ಟನು. ಶ್ರೀಗಳವರು ಆಗ ಯಾವ ಮಾತನ್ನೂ ಆಡದೆ- ಶಿಷ್ಯರೆಲ್ಲರೂ ಪಾಠಕ್ಕೆ ಬಂದ ಮೇಲೆ ವೆಂಕಟನ ಟಿಪ್ಪಣಿಯ ಪುಸ್ತಕವನ್ನು ಎಲ್ಲರಿಗೂ ತೋರಿಸಿದರು. ವೆಂಕಟನು ಬೆರಗಾಗಿ ಹೋದನು. ಶ್ರೀಗಳವರು ತನ್ನ ಮೇಲೆ ತೋರಿಸಿದ ಮಮತೆಯನ್ನು ನೋಡಿ ಆವನ ಆನಂದವು ಉಕ್ಕೇರಿ ಬರಹತ್ತಿತು. ಸಾಷ್ಟಾಂಗಹಾಕಿ ಪಾಮರನ ಮೇಲೆ ಅನುಗ್ರಹ ಮಾಡಬೇಕೆಂದು ಬೇಡಿಕೊಳ್ಳಹತ್ತಿದನು. ಮೊದಲು ಚಾಡೀ ಹೇಳಿದ ಶಿಷ್ಯರಂತೂ ಮೋರೆ ತಗ್ಗಿಸಿದ್ದರು!

ಇಂಥ ಅಗಾಧ ಬುದ್ಧಿಯುಳ್ಳವನೂ, ಸುಗುಣಿಯೂ, ನಮ್ರಶಾಲಿಯೂ

ಆದ ಹುಡುಗನನ್ನು ಯಾರು ಪ್ರೀತಿಸಲಿಕ್ಕಿಲ್ಲ? ಸ್ವಾಮಿಗಳೂ ಕೂಡ ಅತನ ತಲೆಯ ಮೇಲೆ ಕೈಯಿಟ್ಟು ಯಾವ ಹೆಸರಿನಿಂದ ಸುಧಾ ವ್ಯಾಖ್ಯಾನ ಬರೆಯುತ್ತಿದ್ದನೋ, ಅದನ್ನೇ ಅಂದರೆ 'ಪರಿಮಳ' ಎಂಬ ಬಹುಮಾನದ ಬಿರುದನ್ನೇ ಅವನಿಗೆ ದಯಪಾಲಿಸಿದರು †

ಮುಂದೆ ವೆಂಕಟನು ಗುರುಗಳ ಸಂಗಡ ಸಂಚಾರ ಮಾಡುತ್ತ-ಮಾಡುತ್ತ ದಕ್ಷಿಣ ದ್ವಾರಕೆಗೆ ಹೋಗಲು ಅಲ್ಲಿಯ ಶ್ರೀಕೃಷ್ಣಮೂರ್ತಿಯ ದೇವಾಲಯದಲ್ಲಿ ಒಬ್ಬ ಸಂನ್ಯಾಸಿ ಇದ್ದನು. ಆತನಿಗೂ ಇವರಿಗೂ ವಾಕ್ಯಾರ್ಥ ವಿಚಾರಣೆಯು ನಡೆಯಿತು ವೆಂಕಟಾಚಾರ್ಯರು ನುಡಿದ ಶಬ್ದವು ಅಪಶಬ್ದವೆಂದು ಸಂನ್ಯಾಸಿಯು ಹೇಳಿದನು. ಅದಕ್ಕೆ ವೆಂಕಟಾಚಾರ್ಯರು:—ನಿಮಗೆ ವ್ಯಾಕರಣ ಮಹಾಭಾಷ್ಯವು ಗೊತ್ತಿಲ್ಲವೆಂದು ಹೇಳಿ, ಮಹಾಭಾಷ್ಯವನ್ನು ಅನುವಾದ ಮಾಡಿ 'ಪ್ಸಾ' ಧಾತುವಿಗೆ ಉಜಂತರೂಪವನ್ನು ಹೇಳಿ ಅದೇ ಧಾತುವಿಗೆ ಯಜಂತ ರೂಪವನ್ನು ಹೇಳಿರೆಂದು ಸಂನ್ಯಾಸಿಗೆ ಪ್ರಶ್ನ ಮಾಡಿದರು. ಆತನ ಬಾಯಿ ಕಟ್ಟಾಯಿತು. ಇದೆಲ್ಲವನ್ನೂ ಕೇಳಿದ ಶ್ರೀಗಳವರು ಅತ್ಯಂತ ಸಂತೋಷದಿಂದ ಶಿಷ್ಯನಿಗೆ (ವೆಂಕಟನಿಗೆ)ಮಹಾಭಾಷ್ಯನೆಂಬ ಮತ್ತೊಂದು ಬಿರುದನ್ನು ದಯಪಾಲಿಸಿದರು. ‡

ತುಸು ದಿವಸಗಳು ಕಳೆದವು. ವೆಂಕಟನು ತಂಜಾವರವೆಂಬ ಪಟ್ಟಣಕ್ಕೆ ಹೋದನು. ತಂಜಾವರವೆಂದರೆ ಆಗ ಚೋಳದೇಶಕ್ಕೆ ರಾಜಧಾನಿಯಾಗಿತ್ತು. ಅಲ್ಲಿ—ವಿಜಯ-ನಗರದ ಅಚ್ಯುತರಾಯರಿಂದ ಸ್ಥಾಪಿಸಲ್ಪಟ್ಟ ಚವ್ವ ನಾಯಕನ ಮೊಮ್ಮಗನಾದ ರಘುನಾಥನಾಯಕನೆಂಬವನು ದೊರೆತನ ಮಾಡುತ್ತಿದ್ದನು (ಶ್ರೀ ಸುಧೀಂದ್ರರಿಗೆ ರತ್ನಾಭಿಷೇಕ ಮಾಡಿಸಿದ ದೊರೆಯು ಈತನೇ) ಈತನ ಆಸ್ಥಾನದಲ್ಲಿ ಗೋವಿಂದ ದೀಕ್ಷಿತರ (ಚವ್ವನಾ

---

† ದತ್ವಾ ಪರಿಮಳಾಖ್ಯಾಂ ಸ ವೆಂಕಟಾಚಾರ್ಯ ಧೀಮತೇ॥
ಸಂಚಾರಾಯ ಸಶಿಷ್ಯೋಽಸೌ ಕುಂಭಘೋಣ ಪುರಾದ್ಗತಃ॥
(ರಾಘವೇಂದ್ರಾಖ್ಯ ವಿಜಯ)

‡ ದೃಷ್ಟ್ವಾ ಸರ್ವಂ ದೈಶಿಕಃ ಶ್ರೀಸುಧೀಂದ್ರಃ ಪ್ರಾಗಜ್ಞಾತಂ ಕೌಶಲಂ ಶಾಬ್ದಭಾಷ್ಯೇ॥
ಪ್ರಾಚೀನಾಖ್ಯಾಂ ತಾಂ ಮಹಾಭಾಷ್ಯಪೂರ್ವಾಂ ಪ್ರಾದಾದಸ್ಮೈ ಪಶ್ಯತಾಂ ಪಂಡಿತಾನಾಂ॥
(ರಾ- ವಿಜಯ)

ಯಕನಲ್ಲಿ ಮಂತ್ರಿಗಳಾಗಿದ್ದ ಮಹಾತ್ಮರಿವರು )ಹಿರಿಯ ಮಗನಾದ ಯಜ್ಞನಾರಾಯಣ ಭಟ್ಟನೆಂಬ ಪಂಡಿತನು ಹಳ್ಳೀ ಹೆಸರಾಗಿದ್ದನು. † ಯಾವ ಪಂಡಿತರಾದರೂ ಈತನ ಕೂಡ ವಾಕ್ಕಲಹ ಮಾಡಿ ಇದು ವರೆಗೂ ಜಯ ಪಡೆದಿರಲಿಲ್ಲ. ಇಂಥಲ್ಲಿ ನಮ್ಮ ವೀಣಾ ವೆಂಕಟನು ಶುಲ್ಬಸೂತ್ರ ವ್ಯಾಖ್ಯಾನವನ್ನು ನಡಿಸಿ ವಾದದಲ್ಲಿ ಅನೇಕಾನೇಕ ಪಂಡಿತರನ್ನು ಜೈಸಿದನು; ಹಾಗೂ ತಪ್ತಮುದ್ರಾಂಕನದ ವಿಷಯುದಲ್ಲಿ ಅತ್ಯಂತ ಪ್ರೌಢವಿಚಾರವುಳ್ಳ ಉಪನ್ಯಾಸವೊಂದನ್ನು ಮಾಡಿದನು. ಇದರಿಂದ ಯಜ್ಞನಾರಾಯಣ ಭಟ್ಟನು ಸಂತೋಷಭರಿತನಾಗಿ ಈತನ ವಿಷಯುದಲ್ಲಿ ಬಹು ಗೌರವವನ್ನು ತೋರಿಸಿದನು. ಆಗ ಶ್ರೀಗಳವರು ಶಿಷ್ಯನಾದ ವೆಂಕಟನಿಗೆ ವಿಶೇಷ ಮರ್ಯಾದಾಸೂಚಕವಾದ 'ಭಟ್ಟ'ನೆಂಬ ಮತ್ತೊಂದು ಬಿರುದಾಂಕಿತ ವನ್ನು ಕೊಟ್ಟರು.

"ಯಜ್ಞನಾರಾಯಣಂ ಭಟ್ಟಂ ತಂಜಿತ್ವಾತೋಷಯದ್ಗುರುಂ ||
ತೇನತಸ್ಮಾದ್ಭಟ್ಟ ಸಂಜ್ಞಂ ಲಬ್ಧವಾನ್ ಭಾಷ್ಯವೇಂಕಟಃ" ||
(ರಾಘವೇಂದ್ರಾಣು ವಿಜಯ)

ಪೂರ್ವಕಾಲದಲ್ಲಿ —ಭಟ್ಟ, ಆಚಾರ್ಯ ಎಂಬ ಹೆಸರುಗಳನ್ನು ಹಳ್ಳೀ ಪೂಜ್ಯರಾದವರಿಗೆ ಕೊಡುವ ಸಾಂಪ್ರದಾಯವಿತ್ತು; ಮತ್ತು ಈ ಪಟ್ಟಾಂಕಿತವನ್ನು ಪಡೆದವರು ಧನ್ಯರೆಂದು ತಿಳಿಯುತ್ತಿದ್ದರು. ಈಗಿನ ನಾಗರಿಕತೆಯ ಕಾಲದಲ್ಲಾದರೋ ಈ ಹೆಸರನ್ನು ಧರಿಸುವದು ಕೇವಲ ತಿರಸ್ಕಾರ ಸೂಚಕವೆಂದು ತಿಳಿದು ಇದ್ದವರೂ ಆ ಹೆಸರುಗಳನ್ನು ತೆಗೆದು ಹಾಕ ಹತ್ತಿರುವರು. ಭಟ್ಟರೆಂದಾಗಲಿ ಆಚಾರ್ಯರೆಂಬಾಗಲಿ ಕರೆದರೆ ಬಲು ನಾಚಿಕೆಗೇಡೆಂದು ಈಗಿನ ತಿಳುವಳಿಕೆ. ಪೂರ್ವಜರು ಬಹು ಶ್ರಮ ಪಟ್ಟು ವಿದ್ಯಾಭ್ಯಾಸ ಮಾಡಿ ಮಿಗಿಲಾದ ಪಾಂಡಿತ್ಯದಿಂದ ಯಾವ ಬಿರು ದನ್ನು ಪಡೆಯಲಿಕ್ಕೆ ಹವಣಿಸುತ್ತಿದ್ದರೋ ಅಂಥಾ ಬಿರುದುಗಳನ್ನು ಅವರ ವಂಶಜರಾದ ನಾವೇ ಈಗ ತಿರಸ್ಕರಿಸಹತ್ತಿರುವೆವೆಂದ ಮೇಲೆ ನಮ್ಮಂಥ ಪಾಮರರು ಇನ್ನಾರು? ಅಯ್ಯೋ! ದುರ್ದೈವವೇ! ನಾಗರಿಕತೆಯು ಹೆಚ್ಚು ಹೆಚ್ಚಾದಂತೆ ಇನ್ನೂ ನಮ್ಮನ್ನು ಎಲ್ಲಿಗೆ ಒಯ್ದು ಮುಟ್ಟಿಸುವಿಯೋ ಯಾರು

† ಈತನ ವಿಷಯುವನ್ನು-ಮುಂದೆ ಚತುರ್ಥ ಗುಚ್ಛದೊಳಗೆ "ಶ್ರೀಗಳವರ ಕಾಲವಿಚಾರ" ಎಂಬ ಭಾಗದಲ್ಲಿ ನೋಡಿರಿ.

ಬಲ್ಲರು? ಕಾಲಾಯ ತಸ್ಮೈ ನಮಃ |

ಭೋ ವಾಚಕವೃಂದ! ಯಾವ ಬಾಲಕನು ಬಾಲ್ಯದಲ್ಲಿಯೇ ಶ್ರೀಗಳವರ ಅನುಗ್ರಹಕ್ಕೆ ಪಾತ್ರನಾಗಿ—ಪರಿಮಳ, ಮಹಾಭಾಷ್ಯ, ಭಟ್ಟ ಮುಂತಾದ ಬಿರುದುಗಳನ್ನು ಹೊಂದಿದನೋ ಅಂಥ ಬಾಲಕನನ್ನು ನಾವು ಇನ್ನು ಮೇಲೆ ಬಾಲಕನಂತೆಯೇ ಏಕವಚನದಿಂದ ಕರೆಯುವದು ಸರಿಯಾದದ್ದಲ್ಲ. ಕಾರಣ ಪಂಡಿತ ವೆಂಕಟನಾಥಾಚಾರ್ಯರೆಂದೇ ಕರೆಯೋಣ!

ವೆಂಕಟನಾಥಾಚಾರ್ಯರು ಎಂಥ ಘನಪಂಡಿತರಾದರೂ, ಮನೆಯಿಂದ ಬಲು ಬಡವರಾಗಿದ್ದರು. ಸಾಧಾರಣವಾಗಿ ವಿಚಾರ ಮಾಡಿದರೆ ಲೋಕದಲ್ಲಿ ಲಕ್ಷ್ಮೀ-ಸರಸ್ವತಿಯರು ಅನ್ಯೋನ್ಯ ಪ್ರೀತಿಯಿಂದ ಕೂಡಿಕೊಂಡಿರುವದು ಅಪೂರ್ವವೇ ಸರಿ. ಲಕ್ಷ್ಮಿಯನ್ನು ಕಂಡರೆ ಸರಸ್ವತಿಗಾಗದು; ಸರಸ್ವತಿಯನ್ನು ಕಂಡರೆ ಲಕ್ಷ್ಮಿಗಾಗದು. ಇದೇ ಬ್ರಹ್ಮಸೃಷ್ಟಿಯಲ್ಲಿ ಹೆಚ್ಚಾಗಿ ಕಂಡು ಬರುವದು. ಅಯ್ಯೋ ವಿಧಾತ! ಯಾರು ನಿನ್ನ ಹೆಂಡತಿಯಾದ ಶಾರದೆಯನ್ನು ಪೂಜೆಮಾಡಿ ಆಕೆಯಿಂದ ವರವನ್ನು ಪಡೆದುಕೊಳ್ಳುವರೋ ಅಂಥಾ ಮಹಾತ್ಮರನ್ನು ಅನ್ನಕ್ಕೂ ಗತಿಯಿಲ್ಲದಂತೆ ಮಾಡಿಬಿಡುವಿಯಲ್ಲಾ! ಇದೇ ಏನು ನಿನ್ನ ನ್ಯಾಯ? ಅಥವಾ ಇಹಲೋಕದ ಸುಖಕ್ಕೆ ಮಾತ್ರ ಸಾಧನೀಭೂತವಾದಂಥ, ದುರ್ಗುಣಗಳ ಉತ್ಪತ್ತಿಗೆ ತವರುಮನೆಯಾದಂಥ ಲಕ್ಷ್ಮಿಯ ಅನುಗ್ರಹವು ಉಪಯೋಗವಿಲ್ಲೆಂದೇ ತಿಳಿದು ಹೀಗೆ ಮಾಡಿರುವೆಯೋ ಏನೋ ಯಾರು ಬಲ್ಲರು? ಹೇಗೇ ಆಗಲಿ. ವೆಂಕಟನಾಚಾರ್ಯರಿಗೆ ಲಕ್ಷ್ಮಿಯ ಅನುಗ್ರಹವಾಗಿರಲಿಲ್ಲ ಅತ್ಯಂತ ದರಿದ್ರ ಸ್ಥಿತಿಯಲ್ಲಿಯೇ ಕಾಲಕಳೆಯುತ್ತಿದ್ದರು. ಎಲ್ಲಿಯ ವರೆಗೆ ಇವರು ಸಂಸಾರದ ತಾಪವನ್ನು ಹಚ್ಚಿಕೊಳ್ಳದೆ ಕೇವಲ ವಿದ್ಯಾಭ್ಯಾಸದಲ್ಲಿಯೇ ಕಾಲಕಳೆದರೋ ಅಲ್ಲಿಯ ವರೆಗೆ ಇವರಿಗೆ ಯಾವ ಚಿಂತೆಯೂ ಇದ್ದಿಲ್ಲ ಈಗಾದರೂ ಊರಿಗೆ ಬಂದು ಗೃಹಸ್ಥಾಶ್ರಮದಲ್ಲಿ ಕಾಲಿಟ್ಟಿರುವರು. ಅಂದಮೇಲೆ ಸಂಸಾರದ ತಾಪವು ಬಿಟ್ಟೀತೇ? ಹಿಬ್ಬಾನೊಬ್ಬ ಸತ್ಪುರುಷರು ಹೇಳಿದಂತೆ:—

ಕಚ್ಚಿ ಬಹುಕಾಲ ಕಡಿವ್ಯಾಗಲೊಲ್ಲದೋ | ಹೆಚ್ಚುತಲಿ ಪೋಗುತಿದೆ ಪೇಳಲೇನು || ಅಚ್ಯುತನೆ ನಿಮ್ಮ ನಾಮಮಂತ್ರದೌಷಧಿಯನ್ನು|
ಮುಚ್ಚಿಕೊಡುವೆಂದು ಮನದಲ್ಲಿ ನಿಂದು || ೧ ||

ಸಂಸಾರವೆಂಬೊ ಸರ್ಪದ ಬಾಧೆಯನ್ನು । ಕಂಸಾರಿ ಕೇಳು
ಸ್ಮರಿಸಲಾರೆ ಇನ್ನು ॥ ಪಲ್ಲ ॥ (ಹಿರೇ ಆಚಾರ್ಯರು)

ಅದು ಎಂಥವರನ್ನೂ ಬಿಡದು. ಇರಲಿ.

ಈ ಆಚಾರ್ಯರ ದಾರಿದ್ರ್ಯವು ಎಂಥದಾಗಿತ್ತೆಂಬದನ್ನು ಅವರ ಮಕ್ಕಳಾದ ಲಕ್ಷ್ಮೀ-ನಾರಾಯಣಾಚಾರ್ಯರೇ ರಾಘವೇಂದ್ರವಿಜಯದಲ್ಲಿ ಹೀಗೆ ಬಣ್ಣಿಸಿರುತ್ತಾರೆ ನೋಡಿರಿ:—

೧ ಅಬ್ದಸ್ಯೈಕಂ ವತ್ಸ್ಯತೋ ನಾಸ್ಯನವ್ಯಂ ಸ್ಥೂಲಂ ವಸ್ತ್ರಂ ಸಂತತಂ ಚಾಲ್ಪಮೌಲ್ಯಂ ॥
ನವ್ಯಂ ವಸ್ತ್ರಂ ನೈವಸೂಕ್ಷ್ಮಂ ಕದಾಪಿ ಕ್ಷೌಮೇತಸ್ಮಿನ್ ಕಾ ಕಥಾ ಕಿಂಚನಸ್ಯ ॥
೨ ತೈಲಾಭ್ಯಂಗಂ ವತ್ಸರಸ್ಯೈಕವಾರಂ ನೈತಸ್ಯಾಸ್ತಿ ಪ್ರಾಜ್ಯಮಾಜ್ಯಂ ಕಥಂ ಸ್ಯಾತ್ ॥

.... .... .... ....

(ಎಲ್ಲಿಯೋ ತುಸು ಬೆಲೆಯುಳ್ಳ ಉರುಟು ನೂಲ್ಲಿನ ವಸ್ತ್ರವು ಸಹ ವರ್ಷಕ್ಕೊಂದು ದೊರೆಯುವದು ಕಷ್ಟವಾಗಿತ್ತು. ಇನ್ನು ಸೂಕ್ಷ್ಮವಾದ ರೇಶಿಮೆ-ಜರತಾರಿ ವಸ್ತ್ರಗಳಂತೂ ದೂರತೋಪಾಸ್ತು.)

(ತೈಲಾಭ್ಯಂಗನವು ವರ್ಷಕ್ಕೊಂದು ಸಾರೆ ಸಹ ಆಗುತ್ತಿರಲಿಲ್ಲ. ದಿನಾಲು ಊಟದಲ್ಲಿ ತುಪ್ಪವಂತೂ ಇಲ್ಲವೇ ಇಲ್ಲ.)

ನೋಡಿದಿರಾ! ಎಂಥ ದರಿದ್ರ ಸ್ಥಿತಿಯಿದು. ಇಂಥವರಿಗೆ ಮುಂದೆ ಪರಮಾತ್ಮನು ಒಮ್ಮಿಂದೊಮ್ಮೆ ಧರ್ಮಸಾಮ್ರಾಜ್ಯದಲ್ಲಿ ಪಟ್ಟಗಟ್ಟಿ ಸಂಸ್ಥಾನಾಧಿಪತ್ಯವನ್ನು ವಹಿಸಿ ಬಿಟ್ಟನು. ಹಿಂದಕ್ಕೆ ಇದೇ ಸ್ವಾಮಿಯು— ಕಡುಬಡವನಾದ ಕುಚೇಲನ ಹಿಂದು ಹಿಡಿ ಅವಕ್ಕಿಯನ್ನು ತಕ್ಕೊಂಡು ಆತನಿಗೆ ಅಖಿಳ ಸಂಪದಗಳನ್ನು ಕೊಟ್ಟುಬಿಟ್ಟನಲ್ಲವೇ?

ಇಂತು ಕಷ್ಟದಲಿದ್ದವರಿಗೆ । ನ್ನೆಂತುಸಲಹುವ ನೋಮುರಾಂತಕ ।
ಕಂತುಪಿತನೊಲಿವುದನು ಬಲ್ಲವರಾರು ಜಗದೊಳಗೆ ॥

ಎಂಬೀ ರೀತಿಯಾಗಿ ಆ ಭಗವಂತನ ಮಹಾ ಮಹಿಮೆಯನ್ನು ತಿಳಿದವರಾರು? ಆತನಾದರೊ:—

ಇಟ್ಟಕಲ್ಲನು ಭಕುತಿಯಿಂದಲಿ। ಕೊಟ್ಟ ಭಕುತಗೆ ಮೆಚ್ಚಿ ತನ್ನನೆ ।

ಕೊಟ್ಟ ಬಡಬ್ರಾಹ್ಮಣನ ವಪ್ಪಿಡಿಯವಲಿಗಖಿಳಾರ್ಥ ||
ಕೆಟ್ಟ ಮಾತುಗಳೆನದೆ ಚೈದ್ಯನ | ಪೊಟ್ಟೆಯೊಳಿಂಬಿಟ್ಟ ಬಾಣದ |
ಲಿಟ್ಟ ಭೀಷ್ಮನವಗುಣಗಳೆಣಿಸಿದನೆ ಕರುಣಾಳು|| (ಹ ಕ. ಸಾರ)

ಎಂದು ದಾಸರು ಹೇಳಿಕೊಂಡಂತೆ ಅತ್ಯಂತ ಕರುಣಶಾಲಿ. ಇಂಥ ಕರುಣಾಸಾಗರನಾದ ಪರಮಾತ್ಮನನ್ನು ಒಲಿಸಿಕೊಂಡವರು ಧನ್ಯರಲ್ಲವೇ? ಅವರು ಎಷ್ಟು ದರಿದ್ರರಾದರೇನು? ಕಷ್ಟವುಳ್ಳವರಾದರೇನು? ಸರ್ವದಾ ಹರಿಧ್ಯಾನಾಮೃತವನ್ನು ಪಾನಮಾಡುತ್ತ, ಆನಂದದಿಂದ ಕಾಲಕಳೆಯುವ ಅವರೇ ಸುಖಿಗಳು. ಅವರೇ ದೇವತೆಗಳು ಅಂತೆಯೇ ಶ್ರೀಪುರಂದರ ದಾಸರು ಕೋಟ್ಯಾಧೀಶರಾಗಿದ್ದಾಗಲೂ ತಮಗೆ ಈ ಆನಂದವು ದೊರೆಯಲಿಲ್ಲೆಂಬಂಶವನ್ನು ದಾಸರಾದಮೇಲೆ —'ಏನಾನಂದವಾಗಿದೆ | ಶ್ರೀಹರಿಯ ನಾಮಾ |' ಎಂಬದಾಗಿ ಹೇಳಿಕೊಂಡಿರುತ್ತಾರೆ. ಇರಲಿ.

ಇವರು ಒಮ್ಮೆ ಸಂಚಾರಾರ್ಥವಾಗಿ ಹೊರಟು ಒಂದು ಪಟ್ಟಣದೊಳಗೆ ಒಬ್ಬ ದೊಡ್ಡ ಅಧಿಕಾರಸ್ಥನ (ನ್ಯಾಯಾಧಿಪತಿ) ಮನೆಯಲ್ಲಿ ಇಳಿದುಕೊಂಡರು. ಮರುದಿನವೇ ಅಧಿಕಾರಸ್ಥನ ಪುರೋಹಿತನ ಮನೆಯಲ್ಲಿ ದೊಡ್ಡದೊಂದು ಸಮಾರಾಧನೆಯು ನಡೆಯಿತು. ಅದರಿಂದ ವೆಂಕಟಾಚಾರ್ಯರಿಗೂ ಆಮಂತ್ರಣವು ಬಂದಿತು. ಭೋಜನಕ್ಕೆ ದಯಮಾಡಿಸಿದರು. ಪುರೋಹಿತನು— ಇವರು ಯಾರೆಂಬದನ್ನು ಲಕ್ಷಿಸದೆ:—ಎಲೈ ಆಚಾರ್ಯರೇ! ನೀವು ಗಂಧವನ್ನು ತೆಯ್ದು ಸಿದ್ಧಪಡಿಸಿರಿ, ಎಂಬದಾಗಿ ಅಪ್ಪಣೆ ಮಾಡಿಬಿಟ್ಟನು. ತಾನೊಬ್ಬ ರಾಜಪುರೋಹಿತನೆಂದೂ ಬೇಕಾದ ಬ್ರಾಹ್ಮಣರಿಗೆ ಬೇಕಾದ ಕೆಲಸ ಹೇಳಲಿಕ್ಕೆ ಯೋಗ್ಯತೆಯುಳ್ಳವನೆಂದೂ ಪುರೋಹಿತನು ತಿಳಿದುಕೊಂಡಿದ್ದನು ಇವರಂತೂ ಒಬ್ಬ ದೇಶಾವರದ ಬ್ರಾಹ್ಮಣರೆಂದು ಭಾವನೆ. ನೋಡಿದಿರೋ! ಐಶ್ವರ್ಯಮದೋನ್ಮತ್ತರಾದವರಿಗೆ ಕಣ್ಣುಗಳು ಹೇಗೆ ನೆತ್ತಿಯ ಮೇಲೆ ಬಂದಿರುತ್ತವೆಂಬದನ್ನು! 'ಸಿರಿಬಂದವರಿಗೆ ಪರಿ ಬರುವದು ಸಹಜ' ಈ ವಿಷಯದಲ್ಲಿ ಸಾಕ್ಷಾತ್ತು ಶ್ರೀಪುರಂದರದಾಸರು

ದೊರೆಗಳೊಲುಮೆಯುಂಟೆಂದೆಲ್ಲರೊಳು ಹಗೆತರವಲ್ಲ ಎಚ್ಚರಿಕೆ|
ಉರಗನಮುತ್ತಿ ಕಟ್ಟಿರುವೆಯು ಕೊರೆದಂಥ ತೆರನಪ್ಪುದೆಚ್ಚರಿಕೆ||
ಕರವಮುಗಿದು ಸಜ್ಜನರಿಗೆ ಶಿರಬಾಗಿ ನಡೆವುದು ಎಚ್ಚರಿಕೆ ||
ಸಿರಿಯೆಂಬ ಸೊಡರಿಗೆ ಮಾನ್ಯರ ಅವಮಾನ ಬಿರುಗಾಳಿ ಎಚ್ಚರಿಕೆ ||

ಎಂಬದಾಗಿ ಮೊದಲೇ ಎಚ್ಚರಿಕೆಯನ್ನು ಕೊಟ್ಟಿದ್ದರೂ ಮಂದಮತಿಗಳಾದ ನಾವು ಅಹಂಕಾರದಿಂದ ಅವುಗಳನ್ನೆಲ್ಲವನ್ನು ಮರೆತು ಬಿಡುತ್ತಿರುವೆವಲ್ಲ? 'ಆಚಾರ್ಯ ದೇವೋ ಭವ' 'ಅತಿಥಿ ದೇವೋ ಭವ' ಎಂಬ ವಾಕ್ಯಗಳನ್ನು ಅಲಕ್ಷಿಸಿ ಬಿಡುವೆವಲ್ಲ? ಅಹಂಕಾರವೆಂಬ ಕತ್ತಲೆಯನ್ನು ಹೃದಯದಲ್ಲಿ ತುಂಬಿಕೊಂಡವರಿಗೆ ದೈವತಸ್ವರೂಪರಾದ ಅಥಿತಿಗಳನ್ನು ಪೂಜಿಸಬೇಕೆಂಬ ಜ್ಞಾನವು ಹೇಗೆ ಹುಟ್ಟೀತು? ಕತ್ತಲೆಯು ಹರಿದರಲ್ಲವೇ ಜ್ಞಾನವೆಂಬ ಪ್ರಕಾಶವು ಬೀಳುವದು? ಆದ್ದರಿಂದಲೇ ಎಂತೆಂಥ ಪಂಡಿತಪ್ರಕಾಂಡರೂ ಕೂಡ ಭಕ್ತರ ಹೃದಯವನ್ನು ಅರಿಯದೆ ಕಡೆಗೆ ನಗೆಗೇಡಾಗಿ ಹೋಗಿರುವರು. ಪಂಡಿತೋತ್ತಮರಾದ ಶ್ರೀಜಗನ್ನಾಥದಾಸರು ಪೂರ್ವಾಶ್ರಮದಲ್ಲಿ ಅಹಂಕಾರದಿಂದ ಶ್ರೀವಿಜಯದಾಸರನ್ನು ನಿಂದಿಸಿದ್ದರಿಂದಲೇ ಅಲ್ಲವೇ ಕ್ಷಯರೋಗವನ್ನು ಸಂಪಾದಿಸಿದ್ದು? * ಮಹಾವಿದ್ವಾಂಸರಾದ ಜಯವೆಂಕಟಾಚಾರ್ಯರೆಂಬವರಿಗೆ ಈ ಅಹಂಕಾರವೇ ಅಲ್ಲವೇ ಬ್ರಹ್ಮರಾಕ್ಷಸನ ಜನ್ಮಕೊಟ್ಟಿದ್ದು? †

ಎಲೈ ಅಹಂಕಾರವೇ ನಿನ್ನ ಶಕ್ತಿಯು ಸಾಮಾನ್ಯವಾದುದಲ್ಲ. ನೀನು ಯಾರಲ್ಲಿ ಹೋಗಿ ಸೇರುವಿಯೋ ಅವರು ಎಂಥ ವಿದ್ವಾಂಸರೇ ಇರಲಿ. ಶ್ರೀಮಂತರೇ ಇರಲಿ ಕಡೆಗೆ ರಾಜಾಧಿರಾಜರೇ ಇರಲೊಲ್ಲರೇಕೆ, ಅವರನ್ನು ನೆಲಕ್ಕೆ ಹಾಕಿ ಬಿಡುವಿ. ವಿಜಯ ನಗರದ ದೊರೆಯಾದ ರಾಮರಾಜನಲ್ಲಿ ಸೇರಿ ಇಡೀ ಕರ್ನಾಟಕ ಸಾಮ್ರಾಜ್ಯವನ್ನು ಹೇಳ ಹೆಸರಿಲ್ಲದಂತೆ ಮಾಡಿದವನು ನೀನೇ ಅಲ್ಲವೇ? ಇಂಥ ಅಮಾನುಷ ಪರಾಕ್ರಮಿಯಾದ ನಿನಗೆ ದೂರದಿಂದಲೇ ವಂದಿಸುವೆವು. ನಮ್ಮನ್ನೂ ನಮ್ಮ ವಾಚಕ ವರ್ಗವನ್ನೂ

* ಶ್ರೀಜಗನ್ನಾಥದಾಸರ ದಿವ್ಯಚರಿತ್ರೆಯೊಂದನ್ನು ಪ್ರತ್ಯೇಕವಾಗಿ ಬರೆಯುವೆವು. ಅದರಲ್ಲಿ ಈ ವಿಷಯವು ವಿಸ್ತಾರವಾಗಿ ಬರುವದು.

† ಜಯವೆಂಕಟಾಚಾರ್ಯರೆಂಬವರು ಪ್ರಸಿದ್ಧ ಪಂಡಿತರು. ಇವರು ಹೋದಹೋದಲ್ಲಿ ವಾದ ಮಾಡಿ ಪಂಡಿತರನ್ನು ಗೆದ್ದು ಜಯ ಪತ್ರಗಳನ್ನು ಸಂಪಾದಿಸುತ್ತ ಕಪರಮಂಡಲಗಿಯ ರಾಮದಾಸರ ಹತ್ತರ ಬಂದು ಅಲ್ಲಿ ಇವರ ಅಹಂಕಾರ ಖಂಡನವಾಯಿತು. ಇಂಥ ದ್ರೋಹಸಂಪಾದನ [illegible] ಬ್ರಹ್ಮರಾಕ್ಷಸನ ಜನ್ಮ ಬಂದಿತಂತೆ—

ನಾವು ಈ ಮೊದಲು ಬರೆದ ಕಪರಮಂಡಲಗಿದಾಸರ ಚರಿತ್ರದಲ್ಲಿ ಈ ವಿಷಯವನ್ನು ನೋಡಿರಿ

ಮಾತ್ರ ಆಶ್ರಯಿಸಬೇಡ ಕಂಡೆಯಾ? ಇದೊಂದನ್ನು ನಿನ್ನಲ್ಲಿ ಬೇಡಿಕೊಳ್ಳುವೆವು. ಅಸ್ತು.

ಈ ಪ್ರಕಾರ ಮಾಡಿದ ಪುರೋಹಿತನ ಅಪ್ಪಣೆಯನ್ನು ಪಂಡಿತ ವೆಂಕಟಾಚಾರ್ಯರು ಶಿರಸಾವಹಿಸಿ ಆ ಕೂಡಲೆ ಅಗ್ನಿಸೂಕ್ತವನ್ನು ಪಠಿಸುತ್ತ ಗಂಧವನ್ನು ತೇಯಲಿಕ್ಕೆ ಕುಳಿತರು. ಗಂಧವು ಸಿದ್ಧವಾಯಿತು. ಬ್ರಾಹ್ಮಣರೆಲ್ಲರೂ ಬಂದರು. ಪುರೋಹಿತನು ಎಲ್ಲರಿಗೂ ಗಂಧಾಕ್ಷತೆಗಳನ್ನು ಕೊಟ್ಟನು. ಬ್ರಾಹ್ಮಣರು ಗಂಧವನ್ನು ಹಚ್ಚಿಕೊಂಡದ್ದೊಂದೇ ತಡ; ಮೈಗೆಲ್ಲ ಕೊಳ್ಳಿಯನ್ನು ಹಚ್ಚಿದಂತಾಯಿತು. ಊಟ-ಉಡಿಗೆಗಳು ಇನ್ನಾರಿಗೆ ಬೇಕು? ದಾರಿ ಸಿಕ್ಕ ಕಡೆಗೆ ಓಡುತ್ತ ಹೋಗಿ, ನೀರಲ್ಲಿ ಕುಳಿತುಕೊಂಡರು; ಮತ್ತು ಕೆಲವರು ಸ್ನಾನ ಮಾಡಹತ್ತಿದರು. ಕೆಲವರು ಹಿದ್ದೆಯಿಂದ ಮೈಯನ್ನು ಹರಿಸಿಕೊಳ್ಳಹತ್ತಿದರು. ಏನಾದರೇನು? ಮೈಗೆ ಹತ್ತಿದ ಉರುಪು ಹೋಗಲಿಲ್ಲ. ಎಲ್ಲ ಕಡೆಯಲ್ಲಿಯೂ ಹಾ ಹಾಕಾರ ವುಂಟಾಯಿತು. ಪುರೋಹಿತನು ಗಾಬರಿಯಿಂದ ಓಡಿಬಂದು ಪಂಡಿತ ವೆಂಕಟಾಚಾರ್ಯರ ಕಾಲಿಗೆರಗಿ:—ಸ್ವಾಮೀ, ತಾವು ತೆಯ್ದ ಗಂಧವನ್ನು ಹಚ್ಚಿಕೊಂಡು ಬ್ರಾಹ್ಮಣರು ಪ್ರಾಣ ಬಿಡುತ್ತಿರುವರು. ಮುಂದೆ ನಾನು ಮಾಡಿದ ಸಮಾರಾಧನೆಯ ಗತಿಯೇನು? ಹೇಗಾದರೂ ಮಾಡಿ ಮುಖ್ಯವಾಗಿ ಬ್ರಾಹ್ಮಣರನ್ನು ರಕ್ಷಿಸುವ ಭಾರವು ತಮ್ಮನ್ನೇ ಕೂಡಿದೆ. ನಾನು ತಮ್ಮ ಮಾಹಾತ್ಮ್ಯವನ್ನರಿಯದೆ ಅಹಂಕಾರದಿಂದ ಅಪ್ಪಣೆಮಾಡಿದ್ದನ್ನು ಕ್ಷಮಿಸಬೇಕು, ಎಂಬದಾಗಿ ಪರಿಪರಿಯಿಂದ ಬೇಡಿಕೊಂಡರು.

ಆಗ ವೆಂಕಟಾಚಾರ್ಯರು:—ಅಯ್ಯಾ ಪುರೋಹಿತನೇ, ನಾನು ಗಂಧವನ್ನು ತೇಯುವಾಗ ಅಗ್ನಿಸೂಕ್ತವನ್ನು ಪಠಿಸುತ್ತಿದ್ದೆನು. ಆ ಸೂಕ್ತದ ಮಹಿಮೆಯಿಂದ ಹೀಗಾಗಿರಬಹುದು ಒಳ್ಳೇದು. ಬೇಗನೆ ಬ್ರಾಹ್ಮಣರನ್ನು ಕರೆ; ಪುನಃ ವರುಣಸೂಕ್ತವನ್ನು ಪಠಿಸುತ್ತ ಗಂಧವನ್ನು ತೆಯ್ದುಕೊಡುವೆನು, ಎಂದು ಹೇಳಿ ಅದರಂತೆಯೇ ಗಂಧವನ್ನು ತೆಯ್ದುಕೊಟ್ಟರು. ಆಗ ಪುರೋಹಿತನು ಆ ಗಂಧವನ್ನು ಬ್ರಾಹ್ಮಣರಿಗೆ ಕೊಡಹೋದನು. ಮೊದಲು ಬಿಸಿಗಂಡ ಬ್ರಾಹ್ಮಣರು:—ಎಲೈ ಪುರೋಹಿತನೇ, ನಿನ್ನ ಗಂಧವೂ ಬೇಡ; ಊಟವೂ ಬೇಡ. ಬಂದ ದಾರಿಗೆ ಸುಂಕವಿಲ್ಲೆಂದು ಹೊರಟುಹೋಗುವೆವು. ಹಿಮ್ಮೆ ಹಚ್ಚಿಕೊಂಡರೆ ಪ್ರಾಣವುಳಿಸಿಕೊಳ್ಳುವದು ಕಷ್ಟನಾಗಿರವದು.

ಮತ್ತೂ ತಂದೆಯಾ! ಎಂದು ಓಡಿಹೋಗಹತ್ತಿದರು. ಪುರೋಹಿತನು ಅವರಿಗೆ ಸಾಷ್ಟಾಂಗವಾಗಿ ನಮಸ್ಕರಿಸಿ:—ಸ್ವಾಮಿ! ಬ್ರಾಹ್ಮಣರೇ! ನನ್ನ ಮೇಲೆ ವಿಶ್ವಾಸವಿಡಿರಿ ಇಕೋ, ಈ ಗಂಧವನ್ನು ಹಚ್ಚಿಕೊಂಡಾದರೂ ನೋಡಿರಿ ನಿಮ್ಮ ಮೊದಲಿನ ತಾಪವೆಲ್ಲ ಹೊರಟು ಹೋಗುವದು. ಮುಂದೆ ನನ್ನ ಕಾರ್ಯವು ಸಾಂಗವಾಗುವದು ಹೀಗೆಂದು ಬಗೆ ಬಗೆಯಿಂದ ಬೇಡಿ ಕೊಳ್ಳ ಹತ್ತಿದನು ಅಷ್ಟರಲ್ಲಿ ಪಂಡಿತ ವೆಂಕಟಾಚಾರ್ಯರು ಅಲ್ಲಿಗೆ ಬಂದು ಬ್ರಾಹ್ಮಣರಿಗೆ ಅಭಯವನ್ನು ಕೊಟ್ಟರು. ಅನಂತರ ಬ್ರಾಹ್ಮಣರು ಗಂಧ ವನ್ನು ಹಚ್ಚಿಕೊಳ್ಳಲು ವ್ಯಥೆಯಲ್ಲವೂ ತಂಪಾಗಿ ಹೋಯಿತು. ಎಲ್ಲರೂ ಸಂತೋಷಭರಿತರಾಗಿ ಆಚಾರ್ಯರ ಮಾಹಾತ್ಮ್ಯಕ್ಕೆ ಆಶ್ಚರ್ಯಪಡಹತ್ತಿ ದರು. ಪುರೋಹಿತನಂತೂ ಇವರಿಗೆ ಅತ್ಯಂತ ಲೀನನಾಗಿ ಹೋದನು. ಪಂಡಿತರು ಯಾವ ಅಧಿಕಾರಸ್ಥನ ಮನೆಯಲ್ಲಿ ಇಳಿದುಕೊಂಡಿದ್ದರೋ, ಆತನು ಈ ಸುದ್ದಿಯನ್ನು ಕೇಳಿ ಅವರಲ್ಲಿ ಪೂಜ್ಯಭಾವವನ್ನಿಟ್ಟು ಹಿಂದು ನೂರು ರೂಪಾಯಿ ಸಂಭಾವನೆ ಮಾಡಿ ಕಳಿಸಿದನು. §

ಹೀಗೆ ಸಂಚಾರ ಮಾಡುತ್ತ ಮಾಡುತ್ತ ವೆಂಕಟಾಚಾರ್ಯರು ಊರಿಗೆ ಬಂದರು. ಮುಂದೆ ಎಷ್ಟೋ ವರ್ಷ ಸಂಸಾರದಲ್ಲಿ ಕಾಲವು ಕಳೆದು ಹೋಯಿತು. ಬಳಿಕ ಒಮ್ಮೆ ಅಕಸ್ಮಾತ್ತಾಗಿ ಕುಂಭಕೋಣಕ್ಕೆ ಹೋಗಲು ಗುರುಗಳು ಇವರನ್ನು ಅಲ್ಲಿಯೇ ಇರಲಿಕ್ಕೆ ಹೇಳಿದರು. ಗುರ್ವಾ ಜ್ಞೆಯನ್ನು ಮೀರಲಾರದೆ ವೆಂಕಟಾಚಾರ್ಯರು ಹೆಂಡತಿಯನ್ನು ಅಲ್ಲಿಗೇ ಕರೆದೊಯ್ದು ಸುಖವಾಗಿದ್ದರು. ಕಾಲಕ್ರಮದಲ್ಲಿ ಇವರಿಗೆ ಮುತ್ತಿನಂಥ ಹಿಂದು ಗಂಡು ಮಗುವು ಜನಿಸಿತು. 'ಮೊದಲೇ ಉಲ್ಲಾಸ; ಅದರೊಳಗೆ ಫಾಲ್ಗುಣಮಾಸ!' ಎಂಬಂತೆ ಮೊದಲೇ ಸಂಸಾರ ಸುಖದಲ್ಲಿ ಮಗ್ನರಾದ ಇವರಿಗೆ ಇನ್ನೂ ಆಸಕ್ತಿಯು ಹೆಚ್ಚುತ್ತಾ ಹೋಯಿತು. ಮಗನಿಗೆ 'ಲಕ್ಷ್ಮೀ

§ ತದಾ ಸರ್ವೇ ಬ್ರಾಹ್ಮಣಾಸ್ತೇ ನತ್ವಾ ಶ್ರೀವೇಂಕಟಾಚಾರ್ಯಕಂ ||
ಜ್ಞಾನಿಶ್ರೇಷ್ಠ ದ್ವಿಜಶ್ರೇಷ್ಠ ತ್ವತ್ಸಮೋ ನಾಸ್ತಿ ಭೂತಲೇ ||
ಏವಂ ವದಂ ಬ್ರಾಹ್ಮಣಾಸ್ತಂ ಪ್ರಣೇಮುಸ್ತೇ ಮುಹುರ್ಮುಹುಃ ||
ತತೋ ನ್ಯಾಯಾಧಿಪಸ್ತಸ್ಮೈರೂಪ್ಯಕಾಣಾಂಶತಂದದೌ ||

(ರಾಘವೇಂದ್ರಾಣಾ ವಿಜಯಃ)

ನಾರಾಯಣ' 'ನೆಂದು ಹೆಸರಿಟ್ಟರು. † ಈ ಲಕ್ಷ್ಮೀನಾರಾಯಣಾಚಾರ್ಯರೇ ಮುಂದೆ ಪ್ರಸಿದ್ಧರಾಗಿ ರಾಘವೇಂದ್ರ ವಿಜಯವೆಂಬ ದಿವ್ಯ ಗ್ರಂಥವನ್ನು ಬರೆದರು.

ಈ ಸಮಯದಲ್ಲಿ ದೈವವಶಾತ್ತಾಗಿ ಶ್ರೀಸುಧೀಂದ್ರಸ್ವಾಮಿಗಳವರಿಗೆ ದೇಹದಲ್ಲಿ ಅಶಕ್ತಿಯುಂಟಾಗಲು ಅವರು ಶಿಷ್ಯರಾದ ವೆಂಕಟಾಚಾರ್ಯರನ್ನು ಕರೆದು ಆಶ್ರಮವನ್ನು ತೆಗೆದುಕೊಳ್ಳಲಿಕ್ಕೆ ಉಪದೇಶಮಾಡಿದರು. ಗುರುವಚನಶ್ರವಣದಿಂದ ಆಚಾರ್ಯರಿಗೆ ಒಮ್ಮಿಲೆ ತಲೆಯ ಮೇಲೆ ಸಿಡಿಲು ಬಿದ್ದಂತಾಯಿತು. ಹೌಹಾರಿ ಕುಳಿತು:— ಸ್ವಾಮಿಾ ಗುರುಗಳೇ;

ಬಾಲಾ ಭಾರ್ಯಾ ಬಾಲಕೋ ನೋಪನೀತಸ್ತಸ್ಮಾನ್ನಾಸಿ
ಸ್ವಾಶ್ರಮೋಽಸ್ಮಿನ್ಮನೀಷಾ||
ಪಾಂಡಿತ್ಯಂ ಮೇ ಜ್ಞಾನಮಸ್ತಿ ಪ್ರಭೋ ತೇ ಕಾರ್ಯಾದಸ್ಮಾ-
ನ್ಮುಚ್ಯತಾಂ ಶ್ರೀಸುಧೀಂದ್ರಃ ||

ನನ್ನ ಹೆಂಡತಿಯು ಇನ್ನೂ ಕೇವಲ ಚಿಕ್ಕವಳು. ಅಲ್ಲದೆ ಒಂದೆಂದರೆ ಒಂದೇ ಮಗುವು ಜನಿಸಿರುವದು. ಇಂಥಾ ಸ್ಥಿತಿಯಲ್ಲಿ ನಾನು ಆಶ್ರಮವನ್ನು ಹೇಗೆ ತೆಗೆದುಕೊಳ್ಳಲಿ? ಎಂಬ ಉದ್ಗಾರವನ್ನು ತೆಗೆದರು.

ಯಾರು ಸಂಸಾರಸುಖದಲ್ಲಿ ಇನ್ನೂ ಬಲವಾದ ಆಶೆಯನ್ನಿಟ್ಟುಕೊಂಡಿರುವರೋ ಅಂಥವರು ಸಂನ್ಯಾಸಾಶ್ರಮಕ್ಕೆ ಒಪ್ಪಿಕೊಳ್ಳಬಹುದೇ? ವಾಚಕರೇ, ವಿಷಯಸುಖವು ಎಂಥವರನ್ನಾದರೂ ತನ್ನ ಕಡೆಗೆ ಎಳಕೊಳ್ಳುತ್ತದೆಂಬದನ್ನು ನೋಡಿದಿರಾ! ಅದರಿಂದಲೇ ಶ್ರೀಶುಕಾಚಾರ್ಯರು;—

'ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ|'

ಎಂಬದಾಗಿ ನುಡಿದಿರುವರು.

ಆಗ ಶ್ರೀಸುಧೀಂದ್ರಯತಿಗಳು—ವೀಣಾವೆಂಕಟನಿಗೆ ಇನ್ನೂ ವಿಷಯವಾಸನೆಯು ಹೋಗಿಲ್ಲ ಈತನಿಗೆ ಈಗ ಹೇಳುವದು ತಕ್ಕದ್ದಲ್ಲವೆಂದು ಪೂರ್ವಾಶ್ರಮದ ತಮ್ಮ ಸೋದರಳಿಯನನ್ನು ಕರೆದು ಆತನಿಗೆ ಆಶ್ರಮ

† ಲಕ್ಷ್ಮೀಚಿಹ್ನಿತನಾಮತ್ವಾದಾರಿದ್ರ್ಯಂ ಲಬ್ಧವಾನಹಂ ||
ಇತಿ ಮತ್ವೇವ ತಂ ಚಕ್ರೇ ಲಕ್ಷ್ಮೀನಾರಾಯಣಾಹ್ವಯಂ ||
(ರಾಘವೇಂದ್ರ ವಿಜಯ)

ನ್ನು ಕೊಟ್ಟು 'ಯಾದವೇಂದ್ರ' ರೆಂಬ ಹೆಸರಿಟ್ಟರು. † ಈ ಯಾದ
ೀಂದ್ರರಿಗೆ ಶ್ರೀರಾಮದೇವರ ಹೊರತು ಉಳಿದ ಎಲ್ಲ ದೇವರ ಪ್ರತಿಮೆ
ಳೂ ದೊರೆತವು; ಆದರೆ ದೈವಲೀಲೆಯು ಬಹು ವಿಚಿತ್ರವಾದದ್ದು.
ದನ್ನು ತಿಳಿದವರಾರು? ಮುಂದೆ ಶ್ರೀ ಸುಧೀಂದ್ರಯತಿಗಳಿಗೆ ಗುಣವಾ
ತ್ತ ಬಂತು. ಶ್ರೀರಾಮದೇವರ ಪೂಜೆಯು ಮೊದಲಿನಂತೆ ಯಥಾಸಾಂಗ
ಾಗಿ ನಡೆಯಹತ್ತಿತು ಹೀಗೆ ನಡೆಯುತ್ತಿರಲಿಕ್ಕೆ ಒಂದಾನೊಂದು ದಿವಸ
ೀರಾಮದೇವರು ಸುಧೀಂದ್ರರ ಸ್ವಪ್ನದಲ್ಲಿ ಬಂದು ನಿಮ್ಮ ಪಶ್ಚಾತ್
ಂಕಟಾಚಾರ್ಯರಿಗೇ ಸಂಸ್ಥಾನವನ್ನು ಒಪ್ಪಿಸಬೇಕೆಂದೂ ಅವರ
ೂರತು ಪೂಜೆಗೆ ಇನ್ನಾರೂ ಯೋಗ್ಯರಲ್ಲವೆಂದೂ ಹೇಳಿದಂತೆ ಬೋಧೆ
ಾಯಿತು. ಯತಿಗಳು ವಿಸ್ಮಿತರಾದರು. ಶ್ರೀರಾಮದೇವರ ಅಪ್ಪಣೆ
ಂತೂ ಈ ಪ್ರಕಾರವಾಯಿತು. ವೇಂಕಟಾಚಾರ್ಯರಾದರೋ ಕೇವಲ
ಷಯಸುಖದಲ್ಲಿ ಮಗ್ನರಾಗಿರುವರು. ಇನ್ನೇನನ್ನು ಮಾಡೋಣ? ಎಂದು
ಶೋಚಿಸಿ, ಪುನಃ ವೇಂಕಟಾಚಾರ್ಯರನ್ನು ಕರೆಯಿಸಿ, ಮಠದೊಳಗಿನ
್ಲ ಜನರ ಸಮಕ್ಷಮ ತಮಗೆ ಬಿದ್ದ ಸ್ವಪ್ನದ ವೃತ್ತಾಂತವನ್ನು ತಿಳಿಸಿ
ು. ಆಗಲಾದರೂ ಆಚಾರ್ಯರು ಒಪ್ಪಿಕೊಳ್ಳಲಿಲ್ಲ ಮೌನವನ್ನೇ ತಾಳಿ
ು. ಅಲ್ಲದೇ ಇವರು ತಮಗೆ ಇದ್ದ ಒಬ್ಬ ಮಗನ ಉಪನಯನವನ್ನು
ಾಡದೆ ಆಶ್ರಮವನ್ನು ಸ್ವೀಕರಿಸುವ ಹಾಗಿದ್ದಿಲ್ಲ ಇದನ್ನು ತಿಳಿದು,
ೀಗಳವರು ವೆಂಕಟಾಚಾರ್ಯರಿಗೆ ಸಾಕಷ್ಟು ದ್ರವ್ಯಸಹಾಯ ಮಾಡಿ
ಪನಯನವನ್ನು ಮಾಡಲಿಕ್ಕೆ ಹೇಳಿದರು. ಶುಭ ಮುಹೂರ್ತದಲ್ಲಿ
ಕ್ಷ್ಮೀನಾರಾಯಣನ ಉಪನಯನವು ಯಥಾಸಾಂಗವಾಗಿ ನೆರವೇರಿತು
ವರೂ ಆಚಾರ್ಯರಿಗೆ ಆಶ್ರಮತೆಗೆದುಕೊಳ್ಳುವ ಇಚ್ಛೆ ಹುಟ್ಟಲಿಲ್ಲ.
ೆ ಒಂದಾನೊಂದು ದಿವಸ ಶ್ರೀಶಾರದೆಯೇ ಸ್ವಪ್ನದಲ್ಲಿ ಬಂದು ಆಶ್ರಮ
ೀಕಾರಮಾಡಬೇಕೆಂದು ಹೇಳಿದಂತಾಯಿತು ಈಗ ಮಾತ್ರ ವೇಂಕಟಾ
ಾರ್ಯರಿಗೆ ವಿರಕ್ತಿಯುಂಟಾಯಿತು ಸಂನ್ಯಾಸವನ್ನು ತೆಗೆದುಕೊಳ್ಳ

† ತತಸ್ತ್ವಕ್ತ್ವಾ ವೆಂಕಟಾರ್ಯಂ ಭಾಗಿನೇಯಂ ಸ್ವಶಿಷ್ಯಕಂ ।
ಆಹೂಯ ತಸ್ಮೈ ದತ್ವಾ ಸ ತ ಯಶ್ಚಾಶ್ರಮಮುತ್ತಮಂ ॥
ಯಾದವೇಂದ್ರೇತಿ ನಾಮಾಶು ಕೃತ್ವಾ ಪ್ರೀತ್ಯಾ ದದೌ ಗುರುಃ ॥
( ರಾ. ಅಣುವಿಜಯ.)

ಬೇಕೆಂದು ಸಿದ್ಧಾಂತಪಡಿಸಿದರು. ಹಾಗೂ ಈ ಸಂಗತಿಯನ್ನು ಗುರುಗಳ ಎದುರಿಗೆ ಹೇಳಿದರು. ಗುರುಗಳಿಗೆ ಪರಮಾನಂದವಾಯಿತು. ರೋಗಿ ಬಯಸಿದ್ದೂ ಹಾಲೋಗರ; ವೈದ್ಯ ಹೇಳಿದ್ದೂ ಹಾಲೋಗರ. ಎಂಬಂತೆ ಸ್ವಾಮಿಗಳು ತಮ್ಮ ಬಯಿಕೆಯು ನೆರವೇರಿತೆಂದು ಹಿರ್‍ರನೆ ಹಿಗ್ಗಿದರು. ಆದರೂ ಇವರಿಗೆ ಹೆಂಡತಿಯ ಎದುರಿನಲ್ಲಿಯೇ ಸಂನ್ಯಾಸದೀಕ್ಷೆಯನ್ನು ಕೊಡುವದು ತಕ್ಕದ್ದಲ್ಲವೆಂದು ಯೋಚಿಸಿ, ಕೂಡಲೆ ತಂಜಾವೂರಿಗೆ ಕರದುಕೊಂಡು ಹೋಗಿ, ಅಲ್ಲಿಯ ಅರಸನ ಸಮಕ್ಷಮ ಸಂನ್ಯಾಸಾಶ್ರಮವನ್ನು ಕೊಟ್ಟು ಉಪದೇಶಮಾಡಿಬಿಟ್ಟರು. ಶ್ರೀರಾಮದೇವರೂ-ಸಂಸ್ಥಾನವೂ ಎಲ್ಲವೂ ಇವರ ವಶವಾದವು. ಅಂದಿನಿಂದ ವೇಂಕಟಾಚಾರ್ಯರಿಗೆ ಪೂರ್ವಾಶ್ರಮದ ಈ ಹೆಸರು ಹೋಗಿ 'ಶ್ರೀಮದ್ರಾಘವೇಂದ್ರ' ರೆಂಬ ಹೆಸರುಂಟಾಯಿತು.* ಈ ಸಂಗತಿಯು ವರ್ತಿಸಿದ್ದು ಶಾಲಿವಾಹನ ಶಕ ೧೫೪೫ನೇ ರುಧಿರೋದ್ಗಾರಿ ಸಂವತ್ಸರದ ಫಾಲ್ಗುಣ ಶುದ್ಧ ದ್ವಿತೀಯಾ ದಿವಸದಲ್ಲಿ †

ವಾಚಕರೇ! ನಾವು ಇಲ್ಲಿಯ ವರೆಗೂ ಯಾರನ್ನು ಸಾಮಾನ್ಯವಾಗಿ ವೆಂಕಟಾಚಾರ್ಯರೆಂದು ಕರೆಯುತ್ತಿದ್ದೆವೋ ಅವರೇ ಈಗ ಶ್ರೀಮದ್ರಾಘವೇಂದ್ರ ಸ್ವಾಮಿಗಳೆಂಬ ಹೆಸರಿನಿಂದ ಪೂಜ್ಯರಾದ ಯತಿಗಳಾಗಿ ಕುಳಿತಿರುವರು. ಯಾರ ಯಾರ ಅದೃಷ್ಟದಲ್ಲಿ ಏನೇನು ಬರೆಯಲ್ಪಟ್ಟಿರುವದೋ ಅದನ್ನು ಕಂಡು ಹಿಡಿಯುವವರಾರು? ಮಠದಲ್ಲಿ ಅನೇಕ ಜನ ಪಂಡಿತರು-ಸಂಸ್ಥಾನವು ನಮಗಾಗುವದು, ನಿಮಗಾಗುವದು, ಎಂದು ಮನಸಿನಲ್ಲಿಯೇ ಮಂಡಿಗೆಯನ್ನು ಮಾಡ ಹತ್ತಿದ್ದರು. ಅವರ ಮಂಡಿಗೆಗಳೆಲ್ಲ ಅಲ್ಲಿಯೇ ಪುಡಿ ಪುಡಿಯಾಗಿ ಹೋದವು. ಇಷ್ಟೇ ಅಲ್ಲ, ಶ್ರೀ ರಾಮದೇವರೇ ವೆಂಕಟಾಚಾರ್ಯರಿಂದ ಪೂಜೆ ತೆಗೆದುಕೊಳ್ಳಬೇಕೆಂದು ಉತ್ಸುಕನಾಗಿ

---

* ಅಘಾಂದ್ರಾವಯತೀಯಸ್ಮಾದ್ವೇಂಕಾರೋವಾಂಛಿತಪ್ರದಃ॥
ರಾಘವೇಂದ್ರ ಯತಿಸ್ತಸ್ಮಾಲ್ಲೋಕೇ ಖ್ಯಾತಿಂಗಮಿಷ್ಯತಿ ॥

(ಪಾಪವನ್ನು ಪರಿಹರಿಸಿ ಇಷ್ಟಾರ್ಥ ಕೊಡುವದರಲ್ಲಿ ಶ್ರೇಷ್ಠರಾದ ಕಾರಣ ರಾಘವೇಂದ್ರರೆಂಬ ಹೆಸರು ಬಂದಿದೆ.)

† ವತ್ಸರೇ ರುಧಿರೋದ್ಗಾರಿ ಫಾಲ್ಗುನೇ ಶುಕ್ಲಪಕ್ಷಕೇ ॥
ದ್ವಿತೀಯಾಯಾಂ ಸನ್ಯಾಸಂ ಸ ಸ್ವೀಚಕ್ರೇ ಯಥಾವಿಧಿ ॥

(ರಾಘವೇಂದ್ರ, ಅಖು ವಿಜಯ)

ದ್ದನೆಂದಮೇಲೆ ಇವರ ಧನ್ಯವಾದವನ್ನು ಎಷ್ಟೆಂದು ಮಾಡಬೇಕು? ತಾಯಿ-ತಂದೆಗಳ ಪುಣ್ಯವು ಇನ್ನೆಷ್ಟು ಬಲವತ್ತರವಾದುದೋ? ಭೋ ಸ್ವಾಮಿನ್! ಗುರುರಾಜ ಸಾರ್ವಭೌಮಾ! ಶಿರಸಾಷ್ಟಾಂಗ ಬೇಡಿಕೊಳ್ಳುವೆವು ನಮ್ಮ ಹಾಗೂ ನಮ್ಮ ವಾಚಕ ವರ್ಗದ ಮೇಲಿಷ್ಟು ಅನುಗ್ರಹ ಮಾಡು.

ಮುಂದೆ ಶ್ರೀಸುಧೀಂದ್ರ ತೀರ್ಥರು ತಂಜಾವೂರಿನಿಂದ ಪಂಪಾ ಕ್ಷೇತ್ರಕ್ಕೆ ಬಂದು ಅಲ್ಲಿಯೇ ಎಷ್ಟೋ ಕಾಲ ತಪಸ್ಸನ್ನಾಚರಿಸಿ ಕಡೆಗೆ ಅಲ್ಲಿಯೇ ದೇಹವಿಟ್ಟರು. ಇವರ ವೃಂದಾವನವು ತುಂಗಭದ್ರಾತೀರ ಆನೆ ಗೊಂದಿಯಲ್ಲುಂಟು.

ಈ ಪ್ರಕಾರ ವೆಂಕಟಾಚಾರ್ಯರು ಒಮ್ಮಿಂದೊಮ್ಮೆ ಸಂಸಾರದಲ್ಲಿ ವಿರಕ್ತಿಯನ್ನು ಹೊಂದಿ ಸಂನ್ಯಾಸಾಶ್ರಮವನ್ನು ತೆಗೆದುಕೊಂಡದ್ದು ಅವರ ಹೆಂಡತಿಯಾದ ಸರಸ್ವತೀಬಾಯಿಯು ಮನಸ್ಸಿಗೆ ಬರಲಿಲ್ಲ ಆಕೆ ಇನ್ನೂ ತರುಣ ವಯಸ್ಕಳು ಒಬ್ಬನೇ ಒಬ್ಬ ಮಗನು ಜನಿಸಿದ್ದನು. ಸಂಸಾರಾಸಕ್ತಿಯು ಇನ್ನೂ ತಪ್ಪಿರಲಿಲ್ಲ ಅದರಿಂದ ಆ ಸಾಧ್ವೀಮಣಿಯು ಬಾವಿಯಲ್ಲಿ ಹಾರಿಕೊಂಡು ಪ್ರಾಣ ಬಿಟ್ಟಳು! ಅಯ್ಯೋ ತಾಯೀ! ಸರಸ್ವತೀ ಬಾಯೀ! ನೀನೂ ನಿನ್ನ ಪತಿಯಂತೆ ಐಹಿಕ ಸುಖೋಪಭೋಗಗಳನ್ನು ಹುಲ್ಲುಕಡ್ಡಿಗಿಂತಲೂ ಕಡೆಯಾಗಿ ಎಣಿಸಿ ಪರಮಾತ್ಮನಪಾದಾರವಿಂದವನ್ನು ಸೇರತಕ್ಕವಳು ಹೀಗೇಕೆ ಮಾಡಿದಿ? ವಿಧಾತನು ಬರೆದ ಬರಹವನ್ನು ಅಳಿಸಬಾರದೆಂದು ಹೀಗ ಮಾಡಿದಿಯಾ? ಅಥವಾ ಹಣೆಯ ಬರಹವನ್ನು ಹರಿಹರರೂ ತಪ್ಪಿಸಲಾರರೆಂಬ ಮಾತಿನ ಸತ್ಯತೆಯನ್ನು ತೋರಿಸುವದಕ್ಕೆ ಇಂಥಾ ಸಾಹಸ ಮಾಡಿದಿಯಾ? ಪ್ರಾಣವನ್ನು ಯಾಕೆ ನೀಗಿದಿ? "ಜೀವನ್ನರೋ ಭದ್ರ ಶತಾನಿ ಪಶ್ಯೇತ್‌|"(ಜೀವದಿಂದಿದ್ದರೆ ನೂರಾರು ಮಂಗಳಗಳನ್ನು ಕಾಣಬಹುದು )ಎಂಬ ವಾಕ್ಯವನ್ನು ಮರೆತೆಯಾ? ನಿನ್ನ ಮುದ್ದುಬಾಲಕನನ್ನು ನಿನ್ನಂತೆ ರಕ್ಷಿಸುವವರಿನ್ನಾರು? ಅವ್ವಾ, ಎಂಬ ಶಬ್ದವನ್ನು ಆತನಿಗೆ ಇನ್ನಿಲ್ಲದಂತೆ ಮಾಡಿಬಿಟ್ಟೆಯಲ್ಲಾ! ಆಗಲಿ, ಮಿಂಚಿಹೋದ ಮಾತಿಗೆ ಚಿಂತಿಸಿ ಫಲವೇನು?

ಪ್ರಾಚೀನ ಕರ್ಮವು ಬಿಡಲರಿಯದೋ |
ಯೋಚನೆಯ ಮಾಡಿ ಬಳಲುವದ್ಯಾಕೆ ಮನುಜಾ ||

(ಕನಕದಾಸರು.)

ಎಂದು ದಾಸರು ಹೇಳಿಕೊಂಡಂತೆ ಅವರವರ ಅದೃಷ್ಟದಲ್ಲಿದ್ದಂತಾಗುವದು. ಸರಸ್ವತೀಬಾಯಿಯು ಹೀಗೆ ಬಾವಿಯಲ್ಲಿ ಬಿದ್ದು ಸಾಯಲು ಆಕೆಗೆ ಪಿಶಾಚಿ ಜನ್ಮವು ಪ್ರಾಪ್ತವಾಯಿತು ಅದೇ ಜನ್ಮದಿಂದಲೇ ಪತಿಯ ಎದುರಿಗೆ ಬಂದು ಕುಳಿತಳು. ಶ್ರೀಗಳವರು (ರಾಘವೇಂದ್ರಸ್ವಾಮಿಗಳು) ತಮ್ಮ ಪತ್ನಿಗೆ ಬಂದ ಈ ಅವಸ್ಥೆಯನ್ನು ಜ್ಞಾನದೃಷ್ಟಿಯಿಂದ ತಿಳಿದು ಆ ಕೂಡಲೆ ಶಂಖೋದಕದಿಂದ ಪ್ರೋಕ್ಷಣೆಮಾಡಿ ಆ ದುಷ್ಟ ಜನ್ಮವನ್ನು ನೀಗಿಸಿದರು. * ಸರಸ್ವತೀಬಾಯಿಯು ಸಂತೋಷದಿಂದ ಸ್ವರ್ಗಲೋಕವನ್ನು ಸೇರಿದಳು. ಆಕೆಯ ಪೂಜೆಯನ್ನು ಇಂದಿಗೂ ಅವರ ವಂಶಜರು ಮಾಡುತ್ತಿರುವರು. ಅದಕ್ಕೆ 'ಸಹದೇವಿ' ಎಂಬ ಹೆಸರು ಪ್ರಾಪ್ತವಾಗಿದೆ.

ಇತ್ತಲಾಗಿ ಮೊದಲು ಸಂನ್ಯಾಸಾಶ್ರಮವನ್ನು ಹೊಂದಿದ ಯಾದವೇಂದ್ರರಿಗೆ—ವೇಂಕಟಾಚಾರ್ಯರು ಸಂಸ್ಥಾನಾಧಿಪತಿಗಳಾದ ಸುದ್ದಿಯು ಹತ್ತಿತು ಅವರಿಗೆ ಅದು ಸಹನವಾಗಲಿಲ್ಲ. ಒಮ್ಮೆ ನನಗೆ ಆಶ್ರಮವನ್ನು ಕೊಟ್ಟು ಈಗ ಮತ್ತೊಬ್ಬರಿಗೆ ಸಂಸ್ಥಾನವನ್ನೊಪ್ಪಿಸಬಹುದೋ? ಈ ಮಾತು ನ್ಯಾಯವಾದದ್ದಲ್ಲವೆಂದು ಸಿಟ್ಟಿನಿಂದ ನೆಟ್ಟಗೆ ಕುಂಭಕೋಣಕ್ಕೆ ಬಂದರು. ಬಂದವರು ಸುಮ್ಮನೆ ಕೂಡ್ರಲಿಲ್ಲ ನಾಲ್ಕಾರು ಮಂದಿ ಟೊಣಪರಾದ ಶಿಷ್ಯರನ್ನು ಕರೆದು ಶ್ರೀಮದ್ರಾಘವೇಂದ್ರರನ್ನು ಆಕಂಠಪರ್ಯಂತವಾಗಿ ಉಸುಕಿನಲ್ಲಿ ಹೂಳಿ ಬರಬೇಕೆಂದು ಅಪ್ಪಣೆ ಮಾಡಿದರು. ನೋಡಿದಿರಾ! ಸಕಲ ವಿಷಯದಲ್ಲಿಯೂ ವಿರಕ್ತಿಯನ್ನು ಹೊಂದಿ ಕುಳಿತಂಥ ಯತಿಗಳಿಗೂ ಕೂಡ ಆಶೆಯೆಂಬ ಪಿಶಾಚವು ಬಿಡಲಿಲ್ಲ. "ಸಂಸ್ಥಾನವು ಯಾರಿಗಾದರೇನು? ನಾವು ತುರೀಯಾಶ್ರಮವನ್ನು ತಕ್ಕೊಂಡದ್ದು ವಿಲಾಸ ಸುಖಗಳನ್ನು ಭೋಗಿಸಬೇಕೆಂಬುದಕ್ಕಲ್ಲ ತಪಸ್ವಿಗಳಾಗಿ ಪರಮಾತ್ಮನ ಪಾದಾರವಿಂದವನ್ನು ಸೇರುವದು ಮುಖ್ಯವಾದದ್ದು" ಎಂಬ ಅಲಂ ಬುದ್ಧಿಯು ಹುಟ್ಟಲಿಲ್ಲ. ಹಾಯ್ ಹಾಯ್! ಆಶಾಪಾಶದಿಂದ ಕಟ್ಟಲ್ಪಟ್ಟ ಮನು

* ಈ ವಿಷಯವಾಗಿ ಮಹಾತ್ಮರಾದ ಜಗನ್ನಾಥ ದಾಸರು ತಮ್ಮದೊಂದು ಪದ್ಯದಲ್ಲಿ ಹೀಗೆ ಬಣ್ಣಿಸಿದ್ದಾರೆ. —

ಭೂತಳನಾಥನ ಭೀತಿಯ ಬಿಡಿಸಿದಿ । ಪ್ರೇತತ್ವ ಕಳೆದ ಮಹಿಮೆಯ ।
ಗಾಯ ಬಾರೊ ॥ ಪ್ರೇತತ್ವ ಕಳೆದಿ ಮಹಿಮೆಯ ನಾ ಹೇಳ್ವೆನು ಜಗ ।
ನ್ನಾಥ ವಿಠಲನ ಪ್ರೀತಿಪಾತ್ರ । ರಾಯ ಬಂದು ॥ ರಾಯ ಬಾರೊ ತಂದೆ-ತಾಯಿ ಬಾರೊ॥

ಷ್ಯನು ಏನೇನನ್ನು ಮಾಡುವನೋ ಯಾರಿಗೆ ಗೊತ್ತು? ರಾವಣ, ಕೀಚಕ ರಂಥ ಬಲಿಷ್ಠರೂ ಹೆಣ್ಣಿಗೆ ಆಶೆಪಟ್ಟು ಕುಲಕ್ಷಯ ಮಾಡಿಕೊಂಡರು. ಮಹಾ ತಪಸ್ವಿಯಾದ ವಿಶ್ವಾಮಿತ್ರನು ತಪೋಭ್ರಷ್ಟನಾದದ್ದು ಯಾತರಿಂದ? ಇದೇ ಆಶೆಯಿಂದಲ್ಲವೇ? ಸಾರ್ವಭೌಮನಾದ ಕೌರವೇಂದ್ರನು ಮಣ್ಣಿಗೆ ಆಶೆಮಾಡಿ ಕಡೆಗೆ ತಾನೇ ಮಣ್ಣುಪಾಲಾದನು. ಇಂಥ ಸಾವಿರಾರು ಉದಾಹರಣೆಗಳು ನಮ್ಮೆದುರಿಗೆ ಇರುತ್ತಿದ್ದರೂ ನಾವು ಅವುಗಳನ್ನು ಲಕ್ಷಿಸದೆ ಮೃಗಜಲವನ್ನು ಕಂಡು ಓಡಿಹೋಗುವ ಪಶುಗಳಂತೆ ಓಡುತ್ತಿರುವೆವಲ್ಲಾ! ಅಂತೆಯೇ ಈ ವಿಷಯದಲ್ಲಿ ನಿತ್ಯಾತ್ಮನೆಂಬ ಕನ್ನಡ ಕವಿಸಾರ್ವಭೌಮನೊಬ್ಬನು ಹೀಗೆ ಹೇಳಿಕೊಂಡಿದ್ದಾನೆ:—

ಆಶೆಯೆಂಬುವ ಪಾಶ ಬಿಡದು ಮನುಜರಿಗೆ |
ಏಸು ಭಾಗ್ಯಂಗಳಿರ್ದರೆಯು ಮತ್ತು || ಪಲ್ಲ ||

ಇದರಂತೆಯೇ ನಮ್ಮ ಪುರಂದರ ದಾಸರಾಯರಾದರೂ ಎಚ್ಚರಿಕೆಯೊಂದನ್ನು ಕೊಟ್ಟಿರುವರು.

ಹೊನ್ನು ಹೆಣ್ಣು ಮಣ್ಣು ಎಂಬ ಮೋಹದೊಳಿದ್ದು |
ಬಣ್ಣಗೆಡಲಿಬೇಡ ಎಲೊ ರಾಮುಗ ||
ಸುಣ್ಣಪ ಸಡುವಂತೆ ಸುಡುತಿದೆ ಬೆಕ್ಕು ನಿನ್ನ |
ಕಣ್ಣು ತೆರದೆಚ್ಚೆತ್ತಿರಲೊ ರಾಮುಗ ||
ನೆಚ್ಚದಿರು ಬೆಕ್ಕು ನಿನ್ನ ನೋಡುತ್ತಿದೆ |
ಎಚ್ಚತ್ತಿರೆಚ್ಚತ್ತಿರಲ ರಾಮುಗ ||

ಏನಾದರೇನು, ಪರಮಾತ್ಮನ ಮಾಯೆಯೇ ಅಂಥಾದ್ದು. ಅದನ್ನು ಭೇದಿಸಿಕೊಂಡು ಹೋಗಲು ಶಕ್ತರಾರು? ಪ್ರತಿದಿನವೂ ಜನರು ಸಾಯುವದನ್ನು ಕಣ್ಣಾರೆ ನೋಡುತ್ತಿದ್ದರೂ ನಮ್ಮ ಗತಿಯೂ ಹೀಗೇ ಎಂಬುದನ್ನು ಯಾರಾದರೂ ತಿಳಿದುಕೊಳ್ಳುವೆವೋ? ಇಲ್ಲ. ಇಲ್ಲ. ಇನ್ನೂ ದುಡಿಯಬೇಕು; ಹೊಲ-ಮನೆಗಳನ್ನು ಸಂಪಾದಿಸಬೇಕು; ದುಡ್ಡು ಗಳಿಸಬೇಕು ಹೆಂಡಿರು-ಮಕ್ಕಳೊಡನೆ ಸುಖಪಡಬೇಕು. ಇವೇ ಮುಂತಾದ ಆಶಾಪಾಶಗಳು ನಮ್ಮನ್ನು ಸಂಸಾರ ಸಾಗರದಲ್ಲಿ ದೂಡಿ ಹಿಂದೇಸವನೆ ಬಳಲಿಸುತ್ತಿರುವವು. ಕಡೆಗೆ ಕ್ಷಣಮಾತ್ರ ಪರಮಾತ್ಮನ ಧ್ಯಾನ ಮಾಡುವದಕ್ಕೂ ಅವಕಾಶವನ್ನು ಕೊಡುವದಿಲ್ಲ. ಇಂಥ ಬಲಿಷ್ಠವಾದ ಆಶೆಯೆಂಬ ನೇ

ಯನ್ನು ಯಾವನು ಸುಲಭವಾಗಿ ದಾಟಬಲ್ಲನೋ ಅವನೇ ನಿಜವಾದ ಮನುಷ್ಯನು. ಅವನೇ ಯೋಗಿಯು. ಇರಲಿ.

ಯಾದವೇಂದ್ರರ ಅಪ್ಪಣೆಯಂತೆ ಶಿಷ್ಯರು:—ಗುರುಗಳು ತಮ್ಮನ್ನು ಕರೆಯುತ್ತಾರೆಂದು ಹೇಳಿ, ಶ್ರೀರಾಘವೇಂದ್ರಯತಿಗಳನ್ನು ಮೇಣೆಯಲ್ಲಿ ಕುಳ್ಳಿರಿಸಿಕೊಂಡು ಹೋಗಿ ಒಂದು ಹಳ್ಳದ ತಡಿಯ ಉಸುಕಿನಲ್ಲಿ ಆಕಂಠ ಪರ್ಯಂತರವಾಗಿ ಹೂಳಿಟ್ಟರು. ರಾಘವೇಂದ್ರಯತಿಗಳು ಬಹಳ ಸಾಧು ಸ್ವಭಾವದವರು. ಆಗ ಅವರು ಯಾರನ್ನೂ ದೂಷಿಸದೆ ಭಗವಂತನಿಗೇ ಪ್ರಾರ್ಥನೆ ಮಾಡಿಕೊಳ್ಳಹತ್ತಿದರು.

ರಾಗ | ಭೈರವಿ | ತ್ರಿವುಟ ತಾಳ.

* ಇಂದು ಎನಗೆ ಗೋವಿಂದಾ ನಿನ್ನಪಾದಾರ | ವಿಂದವ ತೋರೊ ಮುಕುಂದಾ || ಪಲ್ಲ || ಸುಂದರವದನನೆ ನಂದಗೋಪನಕಂದಾ | ಮಂದರೋದ್ಧರ ಆನಂದಾ ಇಂದಿರೆ ರಮಣಾ || ಅ. ಪ. ||

ನೊಂದೆನಯ್ಯಭವ | ಬಂಧನದೊಳು ಶಿಲುಕಿ | ಮುಂದೆ ದಾರಿ ಗಾಣದೆ | ಕುಂದಿದೆ ಜಗದೊಳು || ಕಂದನೆಂದು ಎನ್ನ | ಕುಂದುಗಳೆಣಿಸದೆ | ತಂದೆ ಕಾಯೊ ಕೃಷ್ಣಾ | ಕಂದರ್ಪ ಜನಕನೆ || ೧ ||

ಮೂಢತನದಲಿ ಬಲು | ಹೇಡಿ ಜೀವನನಾಗಿ | ದೃಢ ಭಕುತಿಯನು ಮಾಡಲಿಲ್ಲವೊ ಹರಿಯೇ || ನೋಡಲಿಲ್ಲವೊ ನಿನ್ನ | ಪಾಡಲಿಲ್ಲವೊ ಮಹಿಮೆ | ಗಾಡಿಕಾರ ಕೃಷ್ಣ | ಬೇಡಿಕೊಂಬೆನೊ ನಿನ್ನ || ೨ ||

ಧಾರುಣಿಯೊಳು ಭಾರಜೀವನನಾಗಿ | ದಾರಿತಪ್ಪಿ ನಡದೆ ಸೇರಿದೆ ಕುಜನರ| ಆರುಕಾಯುವರಿಲ್ಲ|| ಸೇರಿದೆ ನಿನಗೆಯ್ಯ|ಧೀರವೇಣು ಗೋಪಾಲ| ಪಾರುಗಾಣಿಸೊ ಹರಿಯೆ || ೩ ||

---

* ಸಂಸ್ಕೃತದಲ್ಲಿ ಘನಪಂಡಿತರಾಗಿ ಅನೇಕಾನೇಕ ಉದ್ಗ್ರಂಥಗಳನ್ನೂ--ಟೀಕಾಟಿಪ್ಪಣಿಗಳನ್ನೂ ರಚಿಸಿದ ಈ ಮಹಾತ್ಮರು ಕಾಯ್ಕಿಣಿಯ ಮೇಲಿನ ಪ್ರೀತಿಯಿಂದ ರಚಿಸಿದ ಇದೇ ಒಂದು ಕನ್ನಡ ಪದ್ಯವು ಸಿಕ್ಕಿರುವದು. ಇದರ ಮೇಲಿಂದ--ಇವರು ಇನ್ನೂ ಅನೇಕ ಪದಗಳನ್ನು ಮಾಡಿರಲಿಕ್ಕೆ ಸಾಕೆಂದು ತೋರುವದು. ಆದರೆ ನಮ್ಮ ಕನ್ನಡಿಗರ ದುರ್ದೈವದಿಂದ ಈ ಸತ್ಪುರುಷರ ಪದಗಳು ಎಲ್ಲಿ ಮಾಯವಾಗಿರುವವೋ ಏನೋ! ಪುರಾತನರ ಸಂಗ್ರಹದಲ್ಲಿದ್ದ ಸಾವಿರಗಟ್ಟಲೆ ಪದ್ಯಗಳನ್ನು ಹುಡುಕಿ ನೋಡಿದೆವು. ಎಷ್ಟೋ ದಾಸಕೂಟಸ್ಥರನ್ನು ವಿಚಾರಿಸಿದೆವು. ನಮಗಂತೂ ಈ ಒಂದು ಪದ್ಯದ ಹೊರತು ಇನ್ನೊಂದು ದೊರೆಯಲಿಲ್ಲ. ಶೋಧಕರು ಇವರ ಪದಗಳನ್ನು ಗೊತ್ತು ಹಚ್ಚಿ ಹುಡುಕಿ ತೆಗೆದರೆ ಕರ್ನಾಟಕಸ್ಥರ ಮೇಲೆ ಮಹದುಪಕಾರವಾಗುವದು.

ಇಷ್ಟು ಬೇಡಿಕೊಂಡದ್ದೊಂದೇ ತಡ. ಸ್ವಾಮಿಯ ಅಂತಃಕರಣದಿಂದ ಉಸುಕು ಮೆಲ್ಲ ಮೆಲ್ಲನೆ ಜಾರಿಹೋಯಿತು ಶ್ರೀಗಳವರು ಮೇಲಕ್ಕೆ ಎದ್ದರು. 'ದೇವ ಬಲವಿದ್ದವನಿಗೆ ಯಾವ ಬಲ ಬೇಕು'?

ಆಶೆಗೊಳಗಾದವನು ಜನರಿಗೆ | ದಾಸನೆನಿಸುವನಾಶೆಯನು ನಿಜ |
ನಾಶೆಗೈದಿಹ ಪುಂಸರೆಲ್ಲರು ದಾಸರೆನಿಸುವರು ||
ಶ್ರೀಶನಂಘ್ರಿಸರೋಜಯುಗಳ ನಿ| ರಾಶೆಯಿಂದಲಿ ಭಜಿಸೆವಲಿದುರ-|
ವಾಸಹಿತ ತನ್ನನೆ ಕೊಡುವ ಕರುಣಾಸಮುದ್ರ ಹರೀ ||
(ಜಗನ್ನಾಥದಾಸರು)

ಎಂಬ ಮಾತು ಅತ್ಯಂತ ನಿಜವಾದದ್ದು.

ಇತ್ತ ಶ್ರೀಮದ್ರಾಘವೇಂದ್ರರು ಮಠಕ್ಕೆ ಬಂದ ಸುದ್ದಿಯು ಹತ್ತಲು— ಯಾದವೇಂದ್ರರು ಬಂದು ಅವರನ್ನು ಸಂಸ್ಥಾನವನ್ನು ಕೊಡಬೇಕೆಂದು ಕೇಳಿದರು. ರಾಘವೇಂದ್ರರಿಗೆ ಇಂಥ ಆಶೆಯು ಇರಲಿಲ್ಲ. ಅವರು ಕೂಡಲೆ ಸರ್ವಸ್ವವನ್ನು ಕೊಟ್ಟುಬಿಡಲಿಕ್ಕೆ ಸಿದ್ಧರಾದರು. ಆದರೇನು? ಇದು ಮಠೀಯ ಶಿಷ್ಯರಿಗೆ ಸಮ್ಮತವಾಗಲಿಲ್ಲ. ಶ್ರೀಮದ್ರಾಘವೇಂದ್ರರೇ ಶ್ರೀರಾಮದೇವರ ಪೂಜೆಗೆ ಅರ್ಹರೆಂದೂ ಯಾದವೇಂದ್ರರಿಗೆ ಸಂಸ್ಥಾನವನ್ನು ಕೊಡುವದು ಸರಿಯಲ್ಲವೆಂದೂ ಬಲವಾಗಿ ವಿರೋಧಿಸಿದರು. ಆಗ ಈ ನ್ಯಾಯವು ತಂಜಾವರದ ಅರಸನ ಕಡೆಗೆ ಹೋಯಿತು. † ಯಾದವೇಂದ್ರರಾದರೋ—ಮೊದಲು ಯತ್ಯಾಶ್ರಮವು ನನಗೆ ದೊರೆತಿರುವದರಿಂದ ನಾನು ಹಿರಿಯನು ಸಂಸ್ಥಾನವು ನನಗೇ ಸಲ್ಲತಕ್ಕದ್ದು, ಎಂದು ಹೇಳಿದರು. ರಾಘವೇಂದ್ರರು ಕೊಟ್ಟೇ ಬಿಡಲಿಕ್ಕೆ ಸಿದ್ಧರಿದ್ದರೂ ಶಿಷ್ಯ

† ತಂಜಾವರದ ಅರಸನೆಂದರೆ ಹಿಂದೆ ಹೇಳಿದ ರಘುನಾಥ ಭೂಪಾಲನೇ ಆಗಿದ್ದನು. ಆತನು ಸ್ವಯಂ ಮಹಾ ಪಂಡಿತನಾಗಿದ್ದನಲ್ಲದೆ ಅನೇಕ ಪಂಡಿತರಿಗೂ ಆಶ್ರಯ ಕೊಟ್ಟಿದ್ದನು. ಈತನ ಹೆಂಡತಿಯಾದ ರಾಮಭದ್ರಾಂಬೆಯು "ರಘುನಾಥಾಭ್ಯುದಯ"ವೆಂಬ ೧೨ ಸರ್ಗದ ಕಾವ್ಯವನ್ನು ಬರೆದಿದ್ದಾಳೆ.

ರತ್ನಖೇಟ ದೀಕ್ಷಿತರೆಂಬ ಪ್ರಸಿದ್ಧ ಪಂಡಿತರ ಮಕ್ಕಳಾದ ರಾಜಚೂಡಾಮಣಿ ದೀಕ್ಷಿತರೂ ಮಹಾತ್ಮರಾದ ಗೋವಿಂದ ದೀಕ್ಷಿತರ ಮಕ್ಕಳಾದ ಯಜ್ಞನಾರಾಯಣ ದೀಕ್ಷಿತರೂ ಈ ಅರಸರ ಆಸ್ಥಾನ ಪಂಡಿತರಾಗಿದ್ದರು.

ಮಧುರವಾಣಿಯೆಂಬ ಕವಯಿತ್ರಿಯೊಬ್ಬಳು ಇದೇ ಅರಸನ ಆಸ್ಥಾನದಲ್ಲಿದ್ದಳು.

ಕೋಟೆಯವರು ಹಿಂದಕ್ಕೆ ಬಿದ್ದ ಸ್ವಪ್ನದ ವೃತ್ತಾಂತಗಳನ್ನೆಲ್ಲ ಪ್ರಮಾಣವಾಗಿಟ್ಟುಕೊಂಡು ಅವರ ಮಾತನ್ನು ನಿಷೇಧಿಸಿದರು ಆಗ ಅರಸನು ತುಸ ಹೊತ್ತು ಯೋಚಿಸಿ ಕಡೆಗೆ ಹೀಗೆ ಹೇಳಿದನು:—

ಯಾದವೇಂದ್ರೋ ದ್ವಾಪರೇ ತು ಧೇನೂನಾಂ ಪಾಲಕೋಽಭವತ್||
ತ್ರೇತಾಯಾಂ ರಾಘವೇಂದ್ರಸ್ತು ಸಾಮ್ರಾಜ್ಯಂ ಪಾಲಯನ್ ಬಭೌ||

ಎಂಬೀ ರೀತಿಯಾಗಿ ಶ್ರೀರಾಘವೇಂದ್ರರಿಗೆ ಸಾಮ್ರಾಜ್ಯಾಧಿಕಾರವು ಇದ್ದಂತೆ ಶ್ರೀಯಾದವೇಂದ್ರರಿಗೆ ಇದ್ದದ್ದು ಕಂಡು ಬರುವದಿಲ್ಲ ಕಾರಣ—ಯಾದವೇಂದ್ರರು ಸಕಲವನ್ನು ರಾಘವೇಂದ್ರರಿಗೆ ಒಪ್ಪಿಸುವದು ಯೋಗ್ಯವಾದದ್ದು, ಎಂದು ತೀರ್ಪು ಹೇಳಿದರು ಇದು ಎಲ್ಲರ ಮನಸ್ಸಿಗೂ ಬಂತು. ಯಾದವೇಂದ್ರರೂ ರಾಜನ ತೀರ್ಪಿಗೆ ಒಪ್ಪಿಕೊಂಡು ತಮಗೆ ದೊರೆತ ದೇವರು ಮೊದಲಾದವುಗಳನ್ನು ರಾಘವೇಂದ್ರರಿಗೆ ಒಪ್ಪಿಸಿ ಅಲ್ಲಿಂದ ಕೃಷ್ಣಾತೀರಕ್ಕೆ ತಪಸ್ಸಿಗಾಗಿ ಹೊರಟು ಹೋದರು ಮುಂದೆ ತುಸ ದಿವಸಗಳಲ್ಲಿ ಅಲ್ಲಿಯೇ ಅಂದರೆ—ಕೃಷ್ಣಾಷ್ಟೇಶನ್ನಿಗೆ ಎಂಟು ಮೈಲು ದೂರದಲ್ಲಿರುವ ‘ಮುಡುಮಾಲೆ’ಂಬ ಊರಹತ್ತರವೇ ಇವರು ವೃಂದಾವನಸ್ಥರಾದರು.

ಇತ್ತ ಶ್ರೀರಾಘವೇಂದ್ರರು ಕುಂಭಕೋಣಕ್ಕೆ ಬಂದು ಅಲ್ಲಿಯೇ ಎಷ್ಟೋ ದಿವಸ ಪಾಠಪ್ರವಚನಗಳನ್ನು ನಡೆಯಿಸುತ್ತ ನಿಂತು ಮುಂದೆ ದಿಗ್ವಿಜಯಾರ್ಥವಾಗಿ ಹೊರಟು ಅನೇಕಾನೇಕ ತೀರ್ಥ-ಕ್ಷೇತ್ರಗಳನ್ನು ಸಂದರ್ಶಿಸಿ ಸಜ್ಜನರಿಗೆ ಸಚ್ಛಾಸ್ತ್ರವನ್ನು ಉಪದೇಶಮಾಡುತ್ತ ಅಲ್ಲಲ್ಲಿದ್ದ ವಾದಿಗಳನ್ನು ಜಯಿಸುತ್ತ ಸಂಚರಿಸಿದರು. ಆ ಕಾಲಕ್ಕೆ ‘ಭಲ್ಲಪುರಿ’ ಎಂಬಲ್ಲಿ ಭೈರವಭಟ್ಟ, ವೀರಭದ್ರ ಎಂಬಿಬ್ಬರು ಪ್ರಸಿದ್ಧರಾದ ವಿದ್ವಾಂಸರಿದ್ದರು. ಅವರನ್ನು ಶ್ರೀಗಳವರು ಲೀಲಾಮಾತ್ರದಿಂದಲೇ ಜೈಸಿಬಿಡಲು, ಅಲ್ಲಿಯ ಅರಸನು ಇವರ ಪಾಂಡಿತ್ಯಕ್ಕೆ ಮೆಚ್ಚಿ ಒಂದು ಗ್ರಾಮವನ್ನೇ ಮಠಕ್ಕೆ ಇನಾಮಾಗಿ ಹಾಕಿಕೊಟ್ಟನು. (†) ಅಲ್ಲಿಂದ ಶ್ರೀಗಳವರು - ವಿಷ್ಣುಮಂಗಳ-ಕುಮಾರಕ್ಷೇತ್ರಗಳನ್ನು ನೋಡಿಕೊಂಡು ಉಡುಪಿಗೆ ಬಂದರು. ಅಲ್ಲಿ—

(†) ಭಲ್ಲಪುರಿಗೆ ಈಗ ಬಾಣಾವರವೆಂಬ ಹೆಸರು ಬಿದ್ದಂತೆ ತಿಳಿಯುತ್ತದೆ.

“ಸೋಽಥ ಭಲ್ಲಪುರಂ ಭೈರವಭಟ್ಟೋ ವೀರಭದ್ರ, ಇತಿ ವಿಶ್ರುತವಿದ್ವಾನ್ ||
ಪರ್ಯಗೃಣ್ಣಾ ಪರಿಭೂಯ ನರೇಂದ್ರಾಲ್ಲಬ್ಧ್ವಾ ಸ್ವಮಜೀರಾತ್ಸ್ವ-ಗೃಹಣ್ಣಾತ್”

(ರಾ. ವಿಜಯ.)

ಚಂದ್ರಿಕಾವಿವರಣ, ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಎಂಬ ಗ್ರಂಥಗಳನ್ನು ಬರೆದು ಶ್ರೀಕೃಷ್ಣನಿಗೆ ಅರ್ಪಿಸಿ, ಪಂಢರಾಪುರ-ಕರವೀರ-ಶ್ರೀಮುಷ್ಣ ಮುಂತಾದ ಕ್ಷೇತ್ರಗಳನ್ನು ಸುತ್ತಿಕೊಂಡು ಪುನಃ ಕುಂಭಕೋಣಕ್ಕೆ ಬಂದರು. ಆಗ ಪಟ್ಟಣವಾಸಿಗಳಿಗಾದ ಆನಂದವನ್ನು ಹೇಳಲಾಸಲ್ಲ. ಅವರು ಮಹಾ ವೈಭವದಿಂದ ಶ್ರೀಗಳವರನ್ನು ಊರಲ್ಲಿ ಮೆರವಣಿಗೆ ಮಾಡಿಸಿ ಕರೆತಂದರು. ಮುಂದೆ ಶ್ರೀಗಳವರು ಎಷ್ಟೋ ದಿವಸ ಅಲ್ಲಿಯೇ ಕಾಲಕಳೆದರು.

ಇನ್ನು ಇವರು ಮಂತ್ರಾಲಯವನ್ನು ಹೇಗೆ ಸಂಪಾದಿಸಿದರೆಂಬದನ್ನಿಷ್ಟು ಹೇಳಿ ಈ ಭಾಗವನ್ನು ಮುಗಿಸುತ್ತೇವೆ

ಆದವಾನಿಗೆ ಸಮೀಪವಾಗಿ ಮೊಗಲಾಯಿಯಲ್ಲಿ 'ಕಂದನಾತಿ' ಎಂಬುದೊಂದು ಊರುಂಟು ಆ ಊರಲ್ಲಿ ವೆಂಕಣ್ಣನೆಂಬೊಬ್ಬ ಬ್ರಾಹ್ಮಣ ಹುಡುಗನು ತಾಯೊಡನೆ ಕೂಡಿಕೊಂಡು ಅತ್ಯಂತ ದರಿದ್ರಾವಸ್ಥೆಯಲ್ಲಿ ಕಾಲಕಳೆಯುತ್ತಿದ್ದನು. ವೆಂಕಣ್ಣನಿಗೇನೋ ವಿದ್ಯೆ ಕಲಿಯಬೇಕೆಂಬಾಶೆ; ಆದರೆ ಮಾಡಬೇಕೇನು? ಮಧ್ಯಾಹ್ನದ ಊಟಕ್ಕೆ ಗತಿಯಿಲ್ಲದವನು ವಿದ್ಯೆ ಕಲಿಯುವದಿನ್ನೆಂತು? ಆ ಊರ ಗೌಡನ ಮನೆಯಲ್ಲಿ ಏನೇನೋ ಕೆಲಸ ಬೊಗಸೆಗಳನ್ನು ಮಾಡಿ ಮಧ್ಯಾಹ್ನದ ಹೊತ್ತಿಗೆ ಸೇರು ಜೋಳವನ್ನು ತಂದರೇ ಅವನಿಗೆ ಆ ಹೊತ್ತು ಊಟ. ಇಲ್ಲದಿದ್ದರೆ ಅಂದು ಏಕಾದಶಿಯಾಗುತ್ತಿತ್ತು. ಇಂಥಾ ಸ್ಥಿತಿಯಲ್ಲಿಯೂ ವೆಂಕಣ್ಣನು ಭಿಕ್ಷೆ ಬೇಡಿಕೊಂಡೋ ಇನ್ನಾವ ರೀತಿಯಿಂದೋ ಉಪಜೀವಿಸಿಕೊಂಡು ವಿದ್ಯೆಗಲಿಯಬೇಕೆಂದು ಹವಣಿಸಿ ನೋಡಿದನು. ಅದೂ ಒಗೆಹರಿಯಲಿಲ್ಲ ಯಾಕಂದರೆ ಮುದುಕಿಯಾದ ತಾಯಿಯೊಬ್ಬಳಿದ್ದಳು. ಅವಳನ್ನು ಬಿಟ್ಟುಹೋಗುವದೆಲ್ಲಿ? ಮಗನೇ ಬಿಟ್ಟುಹೋದರೆ ಆಕೆಯ ಸಂರಕ್ಷಣೆ ಮಾಡುವವರಾರು? ವೆಂಕಣ್ಣನು ಹುಡುಗನಾದರೂ ತಾಯಿಯ ಮೇಲೆ ಅವನ ಭಕ್ತಿ ಬಹಳ. 'ಮಾತೃದೇವೋ ಭವ' ಎಂಬಂತೆ ತಾಯಿಯೇ ತನ್ನ ಸರ್ವಸ್ವ ದೇವತೆಯೆಂದು ತಿಳಿದಿದ್ದನು. ಅವಳ ಸಂರಕ್ಷಣೆಯೇ ತಪಸ್ಸು-ಯಜ್ಞ-ಯಾಗಾದಿಗಳಿಗಿಂತಲೂ ಮಿಗಿಲಾದುದೆಂದು ಆತನ ಭಾವನೆ. ಇದರಿಂದ ತಿರಕೊಂಡು ಬಂದಾದರೂ ಆಕೆಯ ಹೊಟ್ಟೆಗೆ ಹಾಕಿ ತನ್ನ ಹೊಟ್ಟೆಯನ್ನು ಸಾಗಿಸಿಕೊಳ್ಳುತ್ತಿದ್ದನು; ಆದರೆ ವಿಧಾತನು ವೆಂಕಣ್ಣನ ಹಣೆಯಲ್ಲಿ ಎದ್ದು ಕಾಣುವಂಥ ಭಾಗ್ಯರೇಖೆ

ಯೊಂದನ್ನು ರೇಖಿಸಿದ್ದನು. "ಲಲಾಟ ಲಿಖಿತೇ ರೇಖಾ ಪರಿಮಾರ್ಷ್ಟುಂ ನ ಶಕ್ಯತೆ" | ಎಂಬಂತೆ ವಿಧಿ ಲಿಖಿತವು ಹೇಗೆ ಸುಳ್ಳಾದೀತು? ವೆಂಕಣ್ಣನು ಹೊಟ್ಟೆಯ ಪಾಡಿಗಾಗಿ ಎಷ್ಟೇ ಕಷ್ಟಪಡುತ್ತಿದ್ದರೂ ರಾತ್ರಿವೇಳೆಯಲ್ಲಿ ಆ ಊರೊಳಗಿನ ಅಯ್ಯನವರ ಶಾಲೆಗೆ ಹೋಗಿ ಕುಳಿತು ತುಸು ತುಸು ಕಲಿಯ ಹತ್ತಿದನು. ಬುದ್ಧಿಯು ಚತುರವಾದ್ದರಿಂದ ಬೇಗನೆ ಓದು-ಬರಹದಲ್ಲಿ ನಿಪುಣನಾಗಿ ಹಿಂದುಸ್ಥಾನೀ ಭಾಷೆಯಲ್ಲಿ ಪ್ರಾವೀಣ್ಯವನ್ನು ಸಂಪಾದಿಸಿದನು. ಹೀಗಿರುತ್ತಿರಲು ಅಕಸ್ಮಾತ್ತಾಗಿ ಶ್ರೀರಾಘವೇಂದ್ರ ಸ್ವಾಮಿಗಳವರು ಕಂದನಾತಿಗೆ ಬಂದರು. ಶ್ರೀಗಳವರು ದಯಮಾಡಿಸಿದ್ದನ್ನು ಕೇಳಿ ಊರೊಳಗಿನ ಪ್ರತಿಷ್ಠಿತ ಜನರು ಅವರನ್ನು ತಮ್ಮ ತಮ್ಮ ಮನೆಗೆ ಕರೆದೊಯ್ಯುವ ಸಿದ್ಧತೆ ಮಾಡಹತ್ತಿದರು; ಆದರೆ ಶ್ರೀಗಳವರು ಶ್ರೀಮಂತರ ಮನೆಗೆ ಹಣಿಕಿ ಸಹ ಹಾಕಲಿಲ್ಲ. ನೆಟ್ಟಗೆ ನಮ್ಮ ಬಡ ವೆಂಕಣ್ಣನ ಮನೆಯಲ್ಲಿ ಬಂದು ಕುಳಿತುಬಿಟ್ಟರು. ಹಿಂದಕ್ಕೆ ಶ್ರೀ ಕೃಷ್ಣನು ಸಂಧಾನಕ್ಕೆ ಹೋದ ವೇಳೆಯಲ್ಲಿ ರಾಜಾಧಿರಾಜನಾದ ಕೌರವೇಂದ್ರನು ಷಡ್ರಸೋಪೇತವಾದ ರಾಜಾನ್ನವನ್ನು ಸಿದ್ಧಪಡಿಸಿ ಕಾದುಕೊಂಡು ಕುಳಿತಿದ್ದರೂ ಸ್ವಾಮಿಯು, ಆತನ ಮನೆಗೆ ಹೋಗದೆ, ಬಡ ಪಾಯಿಯಾದ ವಿದುರನ ಮನೆಯನ್ನು ಹೊಕ್ಕು ಮುಕ್ಕು ಹಾಲನ್ನೇ ಕುಡಿದು ತೃಪ್ತನಾದನೆಂಬಂಶವನ್ನು ಭಾರತವನ್ನೋದಿದ ವಾಚಕರಿಗೆ ಬೇರೆ ಹೇಳಬೇಕಾಗಿಲ್ಲ. ಶ್ರೀಗಳವರು ಮಾಡಿದ್ದೂ ಹೀಗೆಯೇ ಆಯಿತು; ಆದರೆ ವೆಂಕಣ್ಣನೂ ಆತನ ತಾಯಿಯೂ ಚಡಪಡಿಸಹತ್ತಿದರು. ಮುಕ್ಕು ಅಕ್ಕಿಗೂ ಗತಿಯಿಲ್ಲದಂಥ ವೇಳೆಯಲ್ಲಿ ಮಾಹಾತ್ಮರಾದ ಶ್ರೀಗಳವರನ್ನು ಹೇಗೆ ಸಂತೋಷಬಡಿಸೇವೆಂಬುದು ಅವರಿಗೀಗ ಹೊರಲಾರದ ಯೋಚನೆಯಾಗಿ ಹೋಯಿತು. ಅಹಾ! ವೆಂಕಣ್ಣಾ; ಇಂಥ ಯೋಚನೆಯನ್ನು ಮಾಡಬೇಡ! ಶ್ರೀಗಳವರ ಯೋಗ್ಯತೆಯು ಸಾಮಾನ್ಯವಲ್ಲ. ಅವರು ನಿನ್ನ ಮನೆಯಲ್ಲಿ ಕಾಲಿಟ್ಟದ್ದರಿಂದ ನೀನು ಧನ್ಯನಾದಿ. ಪವಿತ್ರನಾದಿ. ನಿನ್ನ ಜನ್ಮವು ಸಾರ್ಥಕವಾಯಿತು. ಇಷ್ಟೇ ಅಲ್ಲ, ಇದೇ ನಿನ್ನ ಭಾಗ್ಯೋದಯದ ಚಿಹ್ನವೆಂದು ತಿಳಿದುಕೋ. ಇಂದಿಗೆ ನಿನ್ನ ದಾರಿದ್ರ್ಯವು ದೂರಾಯಿತು. ಅವರು ಯಾವ ರೀತಿಯಾಗಿ ನಿನ್ನ ಕಡೆಯಿಂದ ಸೇವೆಯನ್ನು ತೆಗೆದುಕೊಳ್ಳಲಿಕ್ಕೆ ಬಂದಿರುವರೋ ಏನೋ? ಆದ್ದರಿಂದ ತೀವ್ರವಾಗಿ ಅವರ ಆಶೀರ್ವಾದವನ್ನು ಸಂಪಾದಿಸು. ನಿನಗೆ

ರ್ಯಾವ ಮಾತಿನ ಕೊರತೆಯೂ ಆಗಲಿಕ್ಕಿಲ್ಲ.

ವಾಚಕರೇ! ನೀವಾದರೂ ಆಲೋಚನೆಮಾಡುತ್ತ ಕೂಡದೆ ಬೇಗನೆ ಕಂದನಾತಿಗೆ ಹೊರಡಿರಿ. ವೆಂಕಣ್ಣನ ಮನೆಯಲ್ಲಿ ಇಂದು ಶ್ರೀಗಳವರು ಶ್ರೀರಾಮದೇವರ ಪೂಜೆಮಾಡುವರು ಅದನ್ನು ಕಣ್ಣುತುಂಬಾ ನೋಡಿ ಆನಂದಪಡೋಣ. ಮಾಹಾತ್ಮರಿಂದ ಆಶೀರ್ವಾದವನ್ನು ಹೊಂದೋಣ. ನಡೆಯಿರಿ ಹಾಗಾದರೆ.

ವೆಂಕಣ್ಣನ ಮನೆಯಲ್ಲಿ ಜನಸಮ್ಮರ್ದವು ಕೂಡಿತು. ತಾಯಿ-ಮಕ್ಕಳಿಬ್ಬರೂ ಶ್ರೀಗಳವರಿಗೆ ಸಾಷ್ಟಾಂಗ ಹಾಕಿ, ಎದುರಿಗೆ ಕುಳಿತುಬಿಟ್ಟರು. ಪಾಪ! ಅವರಿನ್ನೇನು ಮಾಡಬೇಕು? ಮಾಹಾತ್ಮರ ಸತ್ವವು ಇನ್ನೆಂಥಾದ್ದೋ? ಅದನ್ನು ಪಾಮರರಾದ ನಾವೆಂತು ತಿಳಿದೇವು? ಮುಂದೆ ತುಸ ಹೊತ್ತಿನಲ್ಲಿಯೇ ಸಾವಿರಾರು ಜನರ ಸಿದಾ-ಸಾಮಗ್ರಿಯು ಎಲ್ಲಿಂದಲೋ ವೆಂಕಣ್ಣನ ಮನೆಗೆ ಬಂದು ಬಿದ್ದಿತು. ಅಡಿಗೆಯವರು ಅಡಿಗೆ ಮಾಡಲಿಕ್ಕೆ ಸಿದ್ಧರಾದರು ಪರಿಚಾರಕರು ಪೂಜಾಸಾಹಿತ್ಯಗಳನ್ನು ಸರಿಪಡಿಸ ಹತ್ತಿದರು. ವೆಂಕಣ್ಣನಿಗೂ ಆತನ ತಾಯಿಗೂ ಅತೀವ ಆಶ್ಚರ್ಯವಾಯಿತು. ಹಾಗಾದರೆ ಇಷ್ಟು ಸಾಮಾನುಗಳನ್ನು ಕಳಿಸಿದವರಾರು? ವೆಂಕಣ್ಣನು ಯಾವ ಗೌಡನಿಂದ ನಿತ್ಯ ಉಪಜೀವನವನ್ನು ಹೊಂದುತ್ತಿದ್ದನೋ ಆತನೇ ಈ ಸಾಮಾನುಗಳನ್ನು ಕಳಿಸಿದ್ದನು! ಲೋಕದಲ್ಲಿ ಪುಣ್ಯವಂತರೂ-ದಯಾಳುಗಳೂ ಎಷ್ಟು ಮಂದಿ ಇಲ್ಲ! ಅಂತೂ ಶ್ರೀಗಳವರ ಶ್ರೀರಾಮದೇವರ ಪೂಜೆಯು ದರಿದ್ರನಾದ ವೆಂಕಣ್ಣನ ಮನೆಯಲ್ಲಿಯೇ ಅತಿ ವಿಜೃಂಭಣೆಯಿಂದ ನಡೆದುಹೋಯಿತು ಊಟ-ಉಪಚಾರಗಳು ಮುಗಿದವು ಕಡೆಗೆ ಶ್ರೀಗಳವರು ವೆಂಕಣ್ಣನನ್ನೂ ಅವನ ತಾಯಿಯನ್ನೂ ಮುಂದಕ್ಕೆ ಕರೆದು ನಿಮ್ಮಿಂದ ನಮಗೊಂದು ಕೆಲಸವಾಗಬೇಕಾಗಿದೆ. ಅದನ್ನು ಮಾಡಿಕೊಡುತ್ತೇವೆಂದು ವಚನಕೊಟ್ಟರೆ, ನಮಗೆ ಪರಮ ಸಂತೋಷವಾಗುವದೆಂದು ಹೇಳಿದರು. ಅಹಾ! ಇದೇನು ವಿಚಿತ್ರ! ವೆಂಕಣ್ಣನೆಂದರೆ ಹಿಬ್ಬ ಕ್ಷುದ್ರಾದಪಿ ಕ್ಷುದ್ರ. ಇಂಥವನಿಂದ ತಾನೆ ಶ್ರೀಗಳವರು ಏನನ್ನು ಬಯಸುತ್ತಿದ್ದಾರು? ಅವರ ಮನೋಗತವೇನಿರಬಹುದು? ವೆಂಕಣ್ಣನಿಗೆ ಭಯ-ವಿಸ್ಮಯಗಳುಂಟಾದವು. ಸ್ವಾಮಿ! ನನ್ನಂಥ ಪಾಮರನಿಂದ ತಮಗೆ ಯಾವ ಕೆಲಸವಾಗಬೇಕಾಗಿರುವದು? ಎಂದು ದೀನವಾಣಿಯಿಂದ ಕೇಳಿದನು. ಮುದುಕಿ

ುಂತೂ ತನ್ನ ಕಂಗಾಲ ಸ್ಥಿತಿಯನ್ನು ನೆನೆದು ಕಣ್ಣೀರು ತಂದಳು. ಶ್ರೀ
ಳವರ ಅಂತಃಕರಣವು ಕರಗಿತು. ಅವರು ಮುದುಕಿಯು ಅಳುವದನ್ನು
ಂಡು:—"ಅಮ್ಮಾ ಚಿಂತೆ ಮಾಡಬೇಡ. ನಿನ್ನ ಮಗನು ಮುಂದೆ ದೊಡ್ಡ
ಧಿಕಾರವನ್ನು ಸಂಪಾದಿಸುವನು. ಆಗ ಆತನಿಂದ ಒಂದು ಕೆಲಸವಾಗ
ೇಕಾಗಿದೆ. ಅದಕ್ಕಾಗಿ ನೀನು ವಚನ ಕೊಡು. ಇದು ನಮ್ಮ ಪೂರ್ಣ
ಶೀರ್ವಾದವೆಂದು ತಿಳಿ." ಎಂದು ಹೇಳಿದರು. ಮಗನು ಭಾಗ್ಯಶಾಲಿ
ಾಗುವನೆಂಬ ಮಹಾತ್ಮರ ವಚನವನ್ನು ಕೇಳಿದೊಡನೆಯೇ ಮುದುಕಿಗೆ
ಪಾರವಾದ ಸಂತೋಷವಾಯಿತು. ಆ ಸಂತೊಷ ಭರದಲ್ಲಿ:—ತಮ್ಮ
ನುಗ್ರಹದಿಂದ ಮಗನು ಭಾಗ್ಯವಂತನಾದರೆ ತಾವು ಬೇಡಿದ್ದನ್ನು ಕೊಡ
ುವೆನೆಂದು ವಚನ ಕೊಟ್ಟಳು. ವೆಂಕಣ್ಣನು ತಾಯಿಯ ಮಾತನ್ನು ಅನು
ೋದಿಸಿದನು. ಆಯಿತು. ಶ್ರೀಗಳವರು ಮುಂದಕ್ಕೆ ನಡೆದರು.

ವೆಂಕಣ್ಣನು ಯಾವದೊಂದು ಮೇಲ್ತರದ ಪರೀಕ್ಷೆಯಲ್ಲಿ ಉತ್ತೀರ್ಣ
ಾದವನಲ್ಲ. ವಿಶ್ವ ವಿದ್ಯಾಲಯದ ಪದವಿಯನ್ನು ಸಂಪಾದಿಸಿದವನಲ್ಲ.
ಂಥವನು ದೊಡ್ಡ ಅಧಿಕಾರಿಯು ಹೇಗಾಗಬೇಕು? ಹಾಗಾದರೆ ಮಾಹಾ
್ಮರು ಸುಳ್ಳಾಡಿದರೇ? ಛೇ ಛೇ! ಅವರ ಬಾಯಿಂದ ಬಂದದ್ದು ವೇದ
ಾಣಿ. ಅದು ಎಂದಿಗೂ ಸುಳ್ಳಾಗಲಾರದು. ಹಾಗಿದ್ದ ಪಕ್ಷದಲ್ಲಿ ಅವ
ಗೆ ಮಾಹಾತ್ಮರೆಂಬ ಹೆಸರೇಕೆ? ಶ್ರೀಗಳವರು ಶಾಪಾನುಗ್ರಹ ಶಕ್ತಿಯು
್ಳವರು ಅವರ ಅನುಗ್ರಹದಿಂದ ವೆಂಕಣ್ಣನು ಮುಂದೆ ಆ ನಾಡಿನ ದೊಡ್ಡ
ಧಿಕಾರಿಯೇ ಆದನು. ಆದರೆ ಹೇಗಾದನೆಂಬುವು ಮಾತ್ರ ಬಹು ವಿಚಿತ್ರ
ಾಗಿರುವದು. ದೈವಲೀಲೆಯನ್ನು ತಿಳಿದವರಾರು?

ಆ ಕಾಲಕ್ಕೆ ಆದವಾನಿಯಲ್ಲಿ ಅಬ್ದುಲ್‌ಖಾನನೆಂಬ ದೊಡ್ಡ ಸರ
ಾರನಿದ್ದನು. ಅವನೇ ಆ ಪ್ರಾಂತಕ್ಕೆ ಧೊರೆ. ಆತನು ಒಂದಾನೊಂದು
ವಸ ಆನೆಯ ಮೇಲೆ ಕುಳಿತುಕೊಂಡು ಸವಾರಿ ಹೊರಟನು. ಸೃಷ್ಟಿ
ೌಂದರ್ಯವನ್ನು ನೋಡಿ ಸಂತೋಷಪಡಬೇಕೆಂಬುದೇ ಆತನ ಉದ್ದೇಶ
ಾಗಿತ್ತು. ನೆಟ್ಟಗೆ ಒಂದು ಅಡವಿಯನ್ನು ಸೇರಿದನು. ಅಷ್ಟರಲ್ಲಿಯೇ
ಂದಿನಿಂದ ಒಂಟಿಯ ಸ್ವಾರನೊಬ್ಬನು ಧಾವಿಸಿ ಬಂದು ಜರೂರಿ ಟಪಾ
ಿನ ಕಾಗದವೊಂದನ್ನು ಖಾನನ ಕೈಯಲ್ಲಿ ಕೊಟ್ಟನು. ಅಬ್ದುಲ್‌ಖಾನ
ೇನೋ ದೊಡ್ಡ ದೊರೆಯೇ ಹೌದು. ಆದರೇನು? ಆತನು ಅಕ್ಷರ ಶತ್ರು,

ಹೈದರನಂತೆ ರಟ್ಟೆಯ ಬಲದಿಂದಲೇ ಇಷ್ಟು ದೊಡ್ಡ ಪದವಿಗೇರಿದ್ದನು. ರುಜುವನ್ನು ಕೂಡಾ ಸರಿಯಾಗಿ ಕಲಿತಿರಲಿಲ್ಲ. ಹಿಂದಿನ ಕಾಲದಲ್ಲಿಯು ಜನರು ಈಗಿನವರಿನಂತೆ ಶಾರೀರಿಕ ಶಕ್ತಿಯನ್ನು ಹಾಳುಮಾಡಿಕೊಂಡು ಸ್ವಾತಂತ್ರ್ಯವನ್ನು ಹರಣಮಾಡುವಂಥ ಗುಲಾಮಗಿರಿಯ ವಿದ್ಯೆಯನ್ನು ಕಲಿಯುವದಕ್ಕೆ ಆಶೆಪಡುತ್ತಿರಲಿಲ್ಲ. ಕುದುರೆಯ ಮೇಲೆ ಸವಾರಿ ಮಾಡುವದು, ದಾಂಡ-ಪಟ್ಟೆಯಾಡುವದು, ಗುರಿಹೊಡೆಯುವದು, ಗರಡೀಸಾಧಕ ಮಾಡುವದು ಇತ್ಯಾದಿ ಮುಂಗೈ ಕಸುವಿನ ಕೆಲಸಗಳನ್ನೇ ಹೆಚ್ಚಾಗಿ ಅಭ್ಯಾಸ ಮಾಡುತ್ತಿದ್ದರು. ಅಂತೆಯೇ ಆ ಕಾಲದಲ್ಲಿ ಪರಾಕ್ರಮಶಾಲಿಗಳಾದ ದೊಡ್ಡ-ದೊಡ್ಡ ಸರದಾರರು ಅನೇಕರಾಗಿ ಹೋದರು. ತೀರ ಮೊನ್ನೆ ಮೊನ್ನೆ ಹಾವನೂರ ಹನುಮಂತಗೌಡನೆಂಬ ಬ್ರಾಹ್ಮಣ ಸರದಾರನೊಬ್ಬನು ಪ್ರಸಿದ್ಧನಾಗಿರಲಿಲ್ಲವೇ? ಇಂಥ ಧೀರರೂ-ವೀರರೂ ಈ ಕಾಲದಲ್ಲಿ ಎಲ್ಲಿ ಅಡಗಿರಬಹುದು? ಇನ್ನೆಂದಿಗೆ ಉದಯಿಸಬಹುದು? ಶಿಕ್ಷಣವಾದರೋ ಅತಿ ರಭಸದಿಂದ ನಡೆಯುತ್ತಿರುವದಂತೆ! ನಾವು ಎಷ್ಟೆಷ್ಟು ಶಿಕ್ಷಣದಲ್ಲಿ ಮುಂದುವರಿಯುತ್ತಿರುವೆವೋ ಅಷ್ಟಷ್ಟು ನಿರ್ವೀರ್ಯರಾಗುತ್ತಿರುವೆವು; ತೇಜೋಹೀನರಾಗುತ್ತಿರುವೆವು. ಪಾರತಂತ್ರ್ಯವೆಂಬ ನರಕದಲ್ಲಿ ಮುಳಿಗೇಳುತ್ತಿರುವೆವು. ಇದೇನು ಚಮತ್ಕಾರವಿರಬಹುದು? ಇಂಗ್ಲಂಡ ಅಮೇರಿಕಾ, ಜರ್ಮನಿ, ಜಪಾನ ಮುಂತಾದ ದೇಶಗಳೆಲ್ಲ ಶಿಕ್ಷಣದಿಂದಲೇ ಉನ್ನತಿಯ ಶಿಖರವನ್ನೇರ ಹತ್ತಿರುವಾಗ, ನಾವು ಅದೇ ಶಿಕ್ಷಣದಿಂದ ಕೆಳಗಿಳಿಯುತ್ತಿರುವದು ಆಶ್ಚರ್ಯವಲ್ಲವೇ? ಆಗಲಿ. ಕಾಲಾಯ ತಸ್ಮೈ ನಮಃ|

ಖಾನನು ಇಂಥ ವೀರಾಧಿವೀರರ ಮಾಲಿಕೆಯಲ್ಲಿಯೇ ಒಬ್ಬನಾಗಿದ್ದನು. ಕಾಗದವಾದರೋ ಬಹಳ ಜರೂರಿಯಿಂದ ಬಂದದ್ದು; ಆದರೆ ಅದನ್ನು ನಟ್ಟಡವಿಯಲ್ಲಿ ಓದಿ ಹೇಳುವರಾರು? ಖಾನನಿಗೆ ಯೋಚನೆಯಾಯಿತು. ಸುತ್ತುಮುತ್ತು ನೋಡಿದನು. ಕೆಲವು ದನಕಾಯುವ ಹುಡುಗರು ಮಾತ್ರ ಇದ್ದರು. ಅಷ್ಟರಲ್ಲಿ ದೈವವಶಾತ್ತಾಗಿ ಕಟ್ಟಿಗೆಯನ್ನು ತರಬೇಕೆಂದೋ, ಎಲೆಯನ್ನು ಒಯ್ಯಬೇಕೆಂದೋ ವೆಂಕಣ್ಣನು ಅದೇ ಅಡವಿಗೆ ಬಂದು ಬಿಡಬೇಕೇ? ಬಂದವನು ಖಾನನಿಗೆ ವಿನಯದಿಂದ ಮುಜುರೆಮಾಡಿ ನಿಂತುಕೊಂಡನು. ಖಾನನು ಈ ಹುಡುಗನನ್ನು ನೋಡಿ:—‘ಈ ಕಾಗದವನ್ನು ಓದಿ ಹೇಳಬಲ್ಲೆಯಾ?’ ಎಂದು ಅಚ್ಚ ಹಿಂದುಸ್ತಾನೀಭಾಷೆಯಿಂದ

ಕೇಳಿದನು. ವೆಂಕಣ್ಣನು ಹಿಂದೀಭಾಷೆಯಲ್ಲಿ ಪರಿಣತನಾದ್ದರಿಂದ:—ದೊರೆಗಳವರ ಅಪ್ಪಣೆಯಾದರೆ ತಕ್ಕಷ್ಟು ಹೇಳಬಲ್ಲೆನೆಂದನು. ಖಾನನ ಮೋರೆಯು ಇಷ್ಟಗಲವಾಯಿತು. ಅಚ್ಛಾ! ಅಚ್ಛಾ! ಅನುತ್ತ ಕಾಗದವನ್ನು ಆತನ ಕೈಗೆ ಕೊಟ್ಟನು ವೆಂಕಣ್ಣನು ಅದರ ಅಭಿಪ್ರಾಯವನ್ನೆಲ್ಲ ಹಿಂದೀ ಭಾಷೆಯಲ್ಲಿಯೇ ವಿವರವಾಗಿ ತಿಳಿಸಿದನು. ಇದರಿಂದ ಖಾನನ ಮನಸ್ಸು ಈತನ ಮೇಲೆ ಕೂತುಹೋಯಿತು. ಆಗ ಖಾನನು ಕೇಳಿದನು:—'ಅಪ್ಪಾ ಬಾಲಕಾ! ನೀನು ನಮ್ಮ ಸಂಗಡ ಬಂದರೆ ಚನ್ನಾಗಿ ವಿದ್ಯೆಕಲಿಸಿ ಮುಂದೆ ನಿನ್ನನ್ನು ದೊಡ್ಡ ಅಧಿಕಾರದಲ್ಲಿರಿಸುವೆವು. ಇದಕ್ಕೆ ಒಪ್ಪಿಕೊಳ್ಳುವಿಯಾ?' ವೆಂಕಣ್ಣನು ಮೊದಲೇ ತೈಲಬುದ್ಧಿಯ ಹುಡುಗನು. ಇಂಥ ಆಶ್ರಯವನ್ನು ಬಿಡುವನೇ? ಯಾಕಾಗಲೊಲ್ಲದು. ತಮ್ಮಂಥವರು ಇಷ್ಟು ಪ್ರೀತಿಯಿಂದ ಕರೆಯುತ್ತಿರಲು ನನ್ನದೇನೂ ಅಡ್ಡಿಯಿಲ್ಲ; ಆದರೆ ಮನೆಯಲ್ಲಿ ನನ್ನ ತಾಯಿಯೊಬ್ಬ ಮುದುಕಿಯಿರುವಳು. ಆಕೆಯನ್ನು ಕರಕೊಂಡು ಬರಲಿಕ್ಕೆ ಅಪ್ಪಣೆಯಾದರೆ ಈಗಲೇ ಬರುವೆನೆಂದು ಹೇಳಿದನು. ಖಾನನಿಗೇನು ಕಡಿಮೆ? ತಾಯಿ-ಮಕ್ಕಳಿಬ್ಬರನ್ನೂ ತನ್ನ ಸಂಗಡ ಕರಕೊಂಡೇ ನಡೆದು ಬಿಟ್ಟನು. ಮುಂದೆ ಎರಡು ಮೂರು ವರ್ಷಗಳಲ್ಲಿ ವೆಂಕಣ್ಣನು ಚನ್ನಾಗಿ ವಿದ್ಯೆಗಲಿಯಲು, ಖಾನನು ಆತನನ್ನೇ ತನ್ನ ದಿವಾಣನನ್ನಾಗಿ ನೇಮಿಸಿಕೊಂಡನು.

ವಾಚಕಮಹಾಶಯ! ನೋಡಿದಿರಾ ವೆಂಕಣ್ಣನ ಅದೃಷ್ಟವನ್ನು! ಈಗ ತುಸು ದಿವಸಗಳ ಹಿಂದೆ ಯಾವ ಹುಡುಗನು ಕಂದನಾತಿಯಲ್ಲಿ ಭಿಕ್ಷೆಬೇಡಿಕೊಂಡು ಉಪಜೀವಿಸುತ್ತಿದ್ದನೋ ಆತನೇ ಈಗ ಆ ಪ್ರಾಂತದ ದಿವಾಣನಾಗಿ ಕುಳಿತಿರುವನು. ಹಿಂದಕ್ಕೆ ಶ್ರೀಗಳವರು ಆಶೀರ್ವಾದಮಾಡಿ ವಚನತಕ್ಕೊಂಡದ್ದು ಇದೇ ಹುಡುಗನಿಂದಲ್ಲವೆ? ಮಹಾತ್ಮರ ಅನುಗ್ರಹದಲ್ಲಿ ಇನ್ನೆಷ್ಟು ಶಕ್ತಿಯಿರುವದೋ ಅದನ್ನು ತಿಳಿಯುವವರಾರು? ಗೋಪಾಲದಾಸರೆಂಬವರು (ಭಾಗಣ್ಣದಾಸರು) ತಮ್ಮ ಆಯುಷ್ಯದಲ್ಲಿಯ ನಾಲ್ವತ್ತು ವರ್ಷಗಳನ್ನು ಜಗನ್ನಾಥದಾಸರಿಗೆ ಕೊಟ್ಟು ಅನುಗ್ರಹಮಾಡಿದರೆಂದ ವಿಷಯವು ಸಾಮಾನ್ಯವೇ? ಅತಏವ ಜಗತ್ತಿನಲ್ಲಿ ಸತ್ಪುರುಷರಿಗೆ ಇಷ್ಟೊಂದು ಮರ್ಯಾದೆ; ಆದರೆ ಇಂಥ ಸತ್ಪುರುಷರ ವಿಷಯದಲ್ಲಿ ಮಹಾತ್ಮರಾದವರು ಏನು ಹೇಳಿಕೊಂಡಿರುತ್ತಾರೋ ನೋಡಿರಿ.

(೧) ಭಕುತರಿದ್ದಲ್ಲಿ ನೀನು ಭಕುತರಾಧೀನ ದೇವಾ ಭಕುತವತ್ಸ ನಮ್ಮ ಲಕುಮಿಯಾ ರಮಣ | ಯುಕಪತಿ ನಾಮಾ ಗೋಪಾಲ ವಿ ರಾಯಾ | ಭಕುತರ ಮುಂದೆ ನಿನ್ನ ಯುಕುತಿ ನಡೆಯದೊ ||

(೨) ನಿನ್ನ ಕಾಣಲು ಬಹುದು ನಿನ್ನವ | ರನ್ನು ಕಾಣಲಸಾಧ್ಯವೊ ಸಂ| ಪನ್ನಸದ್ಗುಣರನ್ನ ಹಿರಿಮೋಹನ್ನ ನೀ ಯೆನ್ನ || ಬಿನ್ನಪವ ಚಿತ್ತ ತಂದೆನು| ಗುಣ್ಯಮತಿಯನು ಕೊಟ್ಟು ಈಯು| ಚ್ಛಿನ್ನ ಭಕ್ತರ ಸಂ ಕೊಡು ಕಾರುಣ್ಯನಿಧಿ ಒಲಿದು ||

ಈ ರೀತಿಯಾಗಿ ಹರಿಭಕುತರ ಮಹಿಮೆಯು ಅಚಿಂತ್ಯವಾಗಿರುವ ರಿಂದ ದಿನವ್ಪೂಂದಕ್ಕೆ ಕ್ಷಣಕಾಲವಾದರೂ ಇಂಥವರ ಗುಣಾನುಕೀರ್ತನೆಮಾ ಧನ್ಯರಾಗೋಣ! ಪುನೀತರಾಗೋಣ! ಕಡೆಗೆ ಇವರ ಚರಿತ್ರಪಠನವನ ದರೂ ಮಾಡಿ ಆನಂದ ಪಡೋಣ! ಅಂದರೆ ನಾವು ಮನುಷ್ಯಜನ್ಮ ಬಂದದ್ದು ಸಾರ್ಥಕ ಆದೊಂದು ಬಾಳು. ಇಲ್ಲದಿದ್ದರೆ ಈ ಜನ್ಮವು ಹಾಳ

ವೆಂಕಣ್ಣನು ಯಾವಾಗ ದಿವಾಣಗಿರಿಗೆ ಬಂದನೋ ಆಗಲೇ ಶ್ರೀಗ ವರ ಮಾರ್ಗನಿರೀಕ್ಷಣ ಮಾಡಹತ್ತಿದನು. ಅವರಿಗೆ ಕೊಟ್ಟ ವಚನವನ ಎಂದಿಗೆ ಪೂರೈಸೇನೆಂದು ಅತನು ಒಂದೇಸವನೆ ತವಕಿಸುತ್ತಿದ್ದನು. ಅತ ತಾಯಿಗೂ ಇದೇ ಆತುರ. ಇಷ್ಟರಲ್ಲಿ ಶ್ರೀಗಳವರು ಕರೆಕಳುಹಿಸಿದಂತೆ ಆ ವಾನಿಗೆ ಬಂದೇ ಬಿಟ್ಟರು. ಆಗ ವೆಂಕಣ್ಣನಿಗಾದ ಆನಂದವನ್ನು ಎಷ್ಟೆಂ ಹೇಳೋಣ! ಕೂಡಲೆ ಖಾನನಿಂದ ಅಪ್ಪಣೆ ತಕ್ಕೊಂಡು ಚತುರಂಗ ಬ ಸಮೇತನಾಗಿ ಬಂದು ಗುರುಗಳನ್ನು ಪಲ್ಲಕ್ಕಿಯಲ್ಲಿ ಕೂಡಿಸಿ ಮೆರವಣ ಮಾಡಿಸುತ್ತ ಊರಲ್ಲಿ ಕರತಂದನು. ಶ್ರೀಗಳವರು ವೆಂಕಟಪಂತ (ವೆಂಕಣ್ಣನ) ಮನೆಯಲ್ಲಿ ಅತ್ಯಂತ ಉತ್ಸವದಿಂದ ಶ್ರೀರಾಮದೇವರನ ಪೂಜೆಮಾಡಿದರು. ದಿವಾನನು ತನ್ನ ಧೊರೆಯ ಹತ್ತರ ಗುರುಗುಣಾ ಕೀರ್ತನವನ್ನು ಮಾಡಹತ್ತಿದನು. ಖಾನನಿಗೆ ಶ್ರೀಗಳವರ ಮಾಹಾತ್ಮ ವನ್ನು ಕೇಳಿ ಬಲು ಸೋಜಿಗವೆನಿಸಿತು. ಈ ಮಾತನ್ನು ಪರೀಕ್ಷಿಸಿಯೇ ತ ಬೇಕೆಂದು ಯೋಚನೆಮಾಡಿದನು. ಹೀಗೆ ಯೋಚನೆ ಮಾಡಿದ ಖಾನ ಮರುದಿನವೇ ಶ್ರೀಗಳವರ ಪೂಜೆಯು ನಡೆದಿರುವಾಗ ಒಂದು ಬೆಳ್ಳಿ ತಾಟನಲ್ಲಿ ಮಾಂಸದ ಕಣಗಳನ್ನಿಟ್ಟು ಮೇಲೆ ಶುಭ್ರವಾದದ್ದೊಂ ವಸ್ತ್ರವನ್ನು ಮುಚ್ಚಿಸಿ ದೇವರ ನೈವೇದ್ಯಕ್ಕೆಂದು ತಂದು ಬಿಡಬಹುದೊ

ಈ ಪ್ರಕಾರ ಘೋರಿಯು ತಂದದ್ದನ್ನು ದಿವಾನನು ಗುರುಗಳಿಗೆ ತಿಳಿಸಿದನು. ಆದರೆ ಅದರಲ್ಲಿ ಮಾಂಸದ ಕರಣೆಗಳಿರುತ್ತವೆಂಬದು ಆತನಿಗೆ ಗೊತ್ತಿಲ್ಲ. ಮುಂದೇನು ಗತಿ? ಶ್ರೀಗಳವರು ಜ್ಞಾನದೃಷ್ಟಿಯಿಂದ ನೋಡಿದರು. ಖಾನನ ಮೋಸವೆಲ್ಲಅವರಿಗೆ ತಿಳಿದುಹೋಯಿತು ಆಗಲಿ. ಸೀತಾಪತಿಯಾದ ಪ್ರಭು ಶ್ರೀರಾಮಚಂದ್ರನು ಸಮರ್ಥನಿದ್ದಾನೆ. ಆತನೆದುರಿಗೆ ಇಂಥ ಖಾನ ಗೀನರು ಯಾವ ಗಿಡದ ತೊಪ್ಪಲೆಂದೆಂದುಕೊಂಡು ತಾಟನ್ನು ಹೊರಗಡಿ ಯಲ್ಲಿಯೇ ಇರಿಸಿ 'ಜಯ ರಘುವೀರ ಸಮರ್ಥ!' ಎಂಬ ಘೋಷದೊಡನೆ ಅದರ ಮೇಲೆ ಶಂಖೋದಕವನ್ನು ಪ್ರೋಕ್ಷಿಸಿ ವಸ್ತ್ರವನ್ನು ತೆಗೆಯಬೇಕೆಂದು ಖಾನನಿಗೆ ಸೂಚಿಸಿದರು ಗುರುಗಳ ಪರೀಕ್ಷಾರ್ಥವಾಗಿ ಮನಸ್ಸಿನಲ್ಲಿಯೇ ಮಂಡಿಗೆಯನ್ನು ಮುರಿಯುತ್ತಿದ್ದ ಖಾನನು ಮುಗುಳುನಗೆಯಿಂದ ಮೆಲ್ಲನೆ ವಸ್ತ್ರವನ್ನು ತೆಗೆದನು. ತಾಟನಲ್ಲಿ ಮಾಂಸದ ಚೂರುಗಳೊಂದಾದರೂ ಇಲ್ಲ; ತುಂಬಾ ಉತ್ಕೃಷ್ಟವಾದ ಹಣ್ಣುಹಂಪಲಗಳು. ಆಗ ಖಾನನ ಸೊಂಡೆಯು ಹಣಗಿ ಹೋಯಿತು. ಝರ್‍ರನೆ ಇಳಿದು ಹೋದನು. ಪ್ರತ್ಯಕ್ಷ ಮಾಂಸ ವನ್ನು ತಕ್ಕೊಂಡು ಬಂದು ಎದುರಿಗೆ ನಿಂತಿರಲಿಕ್ಕೆ ಹೀಗಾಗಬೇಕಾದರೆ ಮಹಾತ್ಮರ ಸತ್ವವು ಇನ್ನೆಂಥಾದ್ದೋ? ಇಂಥವರಲ್ಲಿ ಪಾಮರನಾದ ನಾನು ಎಂಥ ಭಯಂಕರವಾದ ದ್ರೋಹವನ್ನು ಆಚರಿಸಿದೆನಲ್ಲಾ! ಎಂದು ಆತನು ಪಶ್ಚಾತ್ತಾಪ ಪಡಹತ್ತಿದನು. ತಾನು ಜಾತಿಯಿಂದ ಮುಸಲ್ಮಾನನಾ ದರೂ ಶ್ರೀಗಳವರನ್ನು ದೇವರಂತೆ ಭಾವಿಸಿದನು. ಅಷ್ಟೊಂದು ಪೂಜ್ಯ ಬುದ್ಧಿಯು ಹುಟ್ಟಿತು. ಆಗಲೇ ಗುರುಗಳಿಗೆ ಸಾಷ್ಟಾಂಗವೆರಗಿ ತನ್ನ ತಪ್ಪನ್ನು ಕ್ಷಮಿಸಬೇಕೆಂದು ತಲೆಬಾಗಿ ಬೇಡಿಕೊಂಡನಲ್ಲದೆ:—ನಿಮ್ಮ ಗುರುಗಳ ಇಚ್ಛಿತವನ್ನು ಪೂರೈಸುವದಕ್ಕೆ ನಿನಗೇ ಸರ್ವಾಧಿಕಾರವನ್ನು ಕೊಟ್ಟಿರುತ್ತೇನೆಂದು ದಿವಾನನಿಗೆ ಹೇಳಿಬಿಟ್ಟನು! ಇದೇ ಸಮಯದಲ್ಲಿ ಶ್ರೀಗಳವರು:—ತುಂಗಭದ್ರಾತೀರದಲ್ಲಿರುವ ಮಂತ್ರಾಲಯ ಗ್ರಾಮವನ್ನು ಇನಾಮಾಗಿ ಕೊಡಿಸಬೇಕೆಂದು ದಿವಾನ ವೆಂಕಟಪಂತನನ್ನು ಕೇಳಿದರು. ಆ ಕಾಲದಲ್ಲಿ ಮಂತ್ರಾಲಯವು(ಮಂಚಾಲಿಯು)ಮುಸಲ್ಮಾನರಿಂದ ತುಂ ಬಿದ್ದ ಹಿಂದು ಸಣ್ಣ ಹಳ್ಳಿಯಾಗಿದ್ದು, ಖಾನನ ಗುರುವಿಗೆ ಅದು ಇನಾಮಾ ಗಿತ್ತು. ಗುರುವಿನ ಇನಾಮನ್ನು ಖಾನನಿಂದ ಕಿತ್ತು ಕೊಡಿಸುವದೇನೂ ವೆಂಕಟಪಂತನಿಗೆ ಅಷ್ಟು ಬಿಗಿಯಾಗಿರಲಿಲ್ಲ; ಆದರೆ ಇಂಥಾ ಸಣ್ಣ ಹಳ್ಳಿ

ಯನ್ನು ಗುರುಗಳು ತಿಳಿಯದೆ ಬೇಡಿದರಲ್ಲಾ! ಎಂದು ಅವನ ಭಾವನೆಯಾಯಿತು. ಆಗ ಆತನು:—ಸ್ವಾಮೀ ಗುರುಗಳೇ! ತಮ್ಮ ಪಾದಾನುಗ್ರಹದಿಂದ ಶಿಷ್ಯನಾದ ನನಗೀಗ ಈ ಪ್ರಾಂತದ ಸರ್ವಾಧಿಕಾರವೂ ಉಂಟಾಗಿದೆ. ತಾವು ಹಿಂದುವೇಳೆ ಖಾನನ ರಾಜಧಾನಿಯಾದ ಆದವಾನಿಯನ್ನೇ ಬೇಡಿದರೂ ಇನಾಮಾಗಿ ಕೊಡಿಸಬಲ್ಲೆನು. ಹೀಗಿದ್ದು ತಾವು ಎಲ್ಲಿಯೋ ಹಿಂದು ಮೂಲೆಯಲ್ಲಿದ್ದ ಮಂತ್ರಾಲಯವೆಂಬ ಕೆಟ್ಟ ಹಳ್ಳಿಯನ್ನು ಬೇಡುತ್ತಿರುವಿರಿ. ಇದು ತಮಗೆ ಯೋಗ್ಯವಾದದ್ದೆಂದು ನನಗೆ ತೋರುವದಿಲ್ಲ. ಇದರ ಮೇಲೆ ಚಿತ್ತಕ್ಕೆ ಬಂದಂತಾಗಲಿ, ಎಂದು ವಿನಯದಿಂದ ಬೇಡಿಕೊಂಡನು. ಶ್ರೀಗಳವರಿಗೆ ಬೇಕಾದದ್ದು ಮಂತ್ರಾಲಯ. ಅಂದಮೇಲೆ ಅವರು ಎರಡನೇ ಪಟ್ಟಣವನು ತಕ್ಕೊಂಡು ಏನು ಮಾಡ್ಯಾರು? ಹೇಳಿಬಿಟ್ಟರು. :—'ವೆಂಕಣ್ಣಾ ನಮಗೆ ಮಂತ್ರಾಲಯದ ಹೊರತು ಅನ್ಯ ಸ್ಥಳವು ಬೇಕಾಗಿಲ್ಲ. ಕೊಡಿಸುತ್ತಿದ್ದರೆ ಅದನ್ನು ಕೊಡಿಸು; ಇಲ್ಲದಿದ್ದರೆ ಬಿಟ್ಟು ಬಿಡು.' ವೆಂಕಟಪಂತನ ಬಾಯಿ ಕಟ್ಟ್ಯಾಯಿತು. ಶ್ರೀಗಳವರೆದುರಿಗೆ ಮರು ಮಾತಾಡಲು ಶಕ್ತಿಯಿಲ್ಲ. ತಮ್ಮ ಅಪ್ಪಣೆಯಂತಾಗಲಿ, ಎಂದಿಷ್ಟೇ ನುಡಿದನು. ತಿರುಗಿ ಹಿಂದೆರಡು ದಿವಸದಲ್ಲಿಯೇ ಖಾನನ ಮುದ್ರೆ ಹಾಕಿದ ಸನದು ಶ್ರೀಗಳವರ ಕೈಸೇರಿತು. ಖಾನನು ತನ್ನ ಗುರುವಿಗೆ ಬೇರೊಂದು ಗ್ರಾಮವನ್ನು ಕೊಟ್ಟು, ಇದನ್ನು ಶ್ರೀಗಳವರಿಗೆ ಒಪ್ಪಿಸಿದನು. ಶ್ರೀಗಳವರ ಸಂತೋಷಕ್ಕೆ ಪಾರವೇ ಇಲ್ಲ. ಕೂಡಲೆ ಮಂತ್ರಾಲಯಕ್ಕೆ ನಡೆದರು. ಈಗ ಇವರ ಮಠವಿದ್ದ ಸ್ಥಳದಲ್ಲಿ ಆ ಕಾಲಕ್ಕೆ ಮಂಚಾಲೆಮ್ಮಳೆಂಬ ದೇವತೆಯ ಗುಡಿಯೊಂದಿತ್ತು. ಆ ದೇವತೆಯು ಶ್ರೀಗಳವರನ್ನು ಕಂಡ ಕೂಡಲೆ ವಿನೀತಳಾಗಿ:—ನನ್ನ ಸ್ಮಾರಕವೊಂದನ್ನು ಇಲ್ಲಿ ಇಟ್ಟದ್ದಾದರೆ, ಅಪ್ಪಣೆಯಂತೆ ನಡಕೊಳ್ಳುವೆನೆಂದು ಸ್ವಪ್ನದಲ್ಲಿ ಬಂದು ಹೇಳಿದಳು. ಶ್ರೀಗಳವರು ಆಕೆಯನ್ನು ಮಠದ ಎಡಭಾಗದಲ್ಲಿಯೇ ಸ್ಥಾಪಿಸಿ, ಗುಡಿಯಿದ್ದ ಸ್ಥಳದಲ್ಲಿ ಮಠವನ್ನು ಕಟ್ಟಿಸಬೇಕೆಂದು ಸಿದ್ಧರಾದರು. ಮಂಚಾಲೆಮ್ಮನ ಗುಡಿಯು ಮಠದ ಎಡಭಾಗದಲ್ಲಿದ್ದದ್ದನ್ನೂ ಹಾಗೂ ಆಕೆಯ ಸ್ಮಾರಕವೆಂದು ವೃಂದಾವನದ ತಲೆಬಾಗಿಲ ಹತ್ತರ ಇಟ್ಟ ಕುರಿಯ ತಲೆಯ ಆಕಾರದ ಕಲ್ಲುಗಳನ್ನೂ ಈಗಲೂ ನೋಡಬಹುದು.

ಮುಂದೆ ವೃಂದಾವನವಾಗುವ ಸ್ಥಳದ ಭೂಶೋಧನೆಯು ನಡೆ

ಯಲು ಇದ್ದಲಿಯಿಂದ ತುಂಬಿದ ದೊಡ್ಡದೊಂದು ಕುಂಡವು ಹೊರಟಿತು. ವಾಚಕರೇ! ಶ್ರೀಗಳವರು ಮಂತ್ರಾಲಯವನ್ನೇ ಬೇಡಿದ ಕಾರಣವು ನಿಮಗೀಗ ಗೊತ್ತಾಯಿತೇನು? ಇದ್ದಲಿಯ ಕುಂಡವು ಹೊರಟ ಸ್ಥಳವನ್ನು ಏನೆಂದು ತಿಳಿದಿರುವಿರಿ? ಅದು ಮತ್ತೇನೂ ಅಲ್ಲ. ಪೂರ್ವದಲ್ಲಿ ಭಕ್ತಾಗ್ರೇಸರ ಚಕ್ರವರ್ತಿಯಾದ ಪ್ರಲ್ಹಾದರಾಜನು ಯಜ್ಞಮಾಡಿದ ಸ್ಥಳವು. † ನಮ್ಮ ಶ್ರೀಗಳವರು ಪ್ರಲ್ಹಾದಾಂಶರು. ಅಂತೆಯೇ ಈ ಸ್ಥಳವನ್ನು ಹಟದಿಂದ ಬೇಡಿದ್ದು. ಅಹಾ! ಮಹಾತ್ಮರ ಮನದಿಂಗಿತವನ್ನು ಕ್ಷುದ್ರರಾದ ನಾವೆಂತು ತಿಳಿದೇವು? ಇರಲಿ.

ಬಳಿಕ ಮಠವನ್ನು ಕಟ್ಟುವ ಕೆಲಸ ನಡೆಯಿತು. ವೆಂಕಟಪಂತನು ಗುರುಗಳಿಗೆ ತಿಳಿಯದಂತೆ ಉತ್ತಮವಾದ ಶಿಲೆಯೊಂದನ್ನು ತರಿಸಿ ಹಳ್ಳಿಯ ಕಾರಾಗೀರರಿಂದ ವೃಂದಾವನವನ್ನು ಮಾಡಿಸಿದನು. ಶ್ರೀಗಳವರು ಇದಕ್ಕೆ ಒಡಂಬಡಲಿಲ್ಲ. ಮಂತ್ರಾಲಯಕ್ಕೆ ಎರಡು ಹರದಾರಿಯ ಮೇಲಿರುವ 'ಮಾಧವಾರ' ಎಂಬ ಊರ ಹಳ್ಳದ ದಂಡೆಯ ಮೇಲೆ ಒಂದು ಶಿಲೆಯು ಇರುವದು. ಅದನ್ನು ತಕ್ಕೊಂಡು ಬಂದು ವೃಂದಾವನವನ್ನು ಮಾಡಿಸಬೇಕೆಂದು ಹೇಳಿದರು ಹೀಗೆ ಹೇಳಲಿಕ್ಕಾದರೂ ಕಾರಣವಿಲ್ಲದೆ ಇಲ್ಲ. ಆ ಶಿಲೆಯ ಐತಿಹ್ಯವನ್ನು ಹೀಗೆ ಹೇಳುತ್ತಿರುವರು.:-

ಹಿಂದಕ್ಕೆ ಶ್ರೀರಾಮಚಂದ್ರನು ವನವಾಸಕ್ಕೆ ಹೊರಟಾಗ ಇಲ್ಲಿ ಹಾದು ಹೋಗುತ್ತಿರಲು ಈ ಬಂಡೆಯನ್ನು ಕಂಡು ಅದರ ಮೇಲೆ ಕುಳಿತುಕೊಂಡನಂತೆ. ತಮ್ಮನಾದ ಲಕ್ಷ್ಮಣನು ನಿಂತು ನಿಂತು ಬೇಸತ್ತು:— ಸ್ವಾಮೀ ಅಣ್ಣಯ್ಯಾ, ಬಹಳ ಹೊತ್ತಾಯಿತು. ಮುಂದಕ್ಕೆ ದಯಮಾಡಿಸಬೇಕು, ಎಂದು ಸೂಚಿಸಿದನು. ಆದಕ್ಕೆ ಶ್ರೀರಾಮನು—ತಮ್ಮಾ, ಈ ಶಿಲೆಯ ಮೇಲೆ ನಾನು ಎಷ್ಟು ಗಳಿಗೆ ಕುಳಿತಿದ್ದೆನೋ ಅಷ್ಟು ನೂರು ವರ್ಷಗಳ ಪರ್ಯಂತರವೂ ಇದು ಭೂಲೋಕದಲ್ಲಿ ಪೂಜಿಸಲ್ಪಡುವದು, ಎಂದು ಹೇಳಿ ಹೊರಟುಹೋದನಂತೆ ಇದು ಹೇಗೇ ಇರಲಿ. ಶ್ರೀಗಳವರೇನೋ ಇದೇ ಶಿಲೆಯಿಂದ ವೃಂದಾವನವನ್ನು ತಯಾರಿಸಲಿಕ್ಕೆ ಹೇಳಿದರು. ವೆಂಕಟ

† ಈ ವಿಷಯವಾಗಿ ಗೋಪಾಲದಾಸರು—ತಾವು ಮಾಡಿದ ಮಂತ್ರಾಲಯಸುಳಾದಿಯಲ್ಲಿ ಹೀಗೆ ಹೇಳಿದ್ದಾರೆ.

"ಸ್ಥಿರವಾಗಿ ಮಂತ್ರಾಲಯ ಪುರದ ತುಂಗಾತೀರದಿ| ಹರಿಭಕ್ತ ಪ್ರಲ್ಹಾದವರಯಾಗ ಇಲ್ಲಿ ಮಾಡಿ| ಸುರರಿಗೆ ಅಮೃತ ಉಣಿಸಿ ಪರಿಶುದ್ಧಿಯಾದನೆಂದು| ಗುರುರಾಘವೇಂದ್ರರಾಯರು||

ಪಂತನು ಗುರುಗಳ ಅಪ್ಪಣೆಯನ್ನು ನಿರ್ವಹಿಸಲಿಕ್ಕೆ ಸಿದ್ಧನಾಗಿಯೇ ಇದ್ದನು. ಆತನು ತಾನು ಮೊದಲು ಮಾಡಿಸಿದ ವೃಂದಾವನವನ್ನು ಗುರ್ವಾಜ್ಞೆಯಂತೆ ವಾಜೇಂದ್ರರೆಂಬ ಶ್ರೀಗಳವರಿಗೆ ಕೊಟ್ಟು, ಹೊಸದಾಗಿ ವೃಂದಾವನವನ್ನು ಮಾಡಿಸಿದನು. ಈ ವೃಂದಾವನವನ್ನು ಮುಗಿಸಿ ಇನ್ನೂ ತುಸು ಬಂಡೆಯು ಉಳಿಯಲು, ಅದರಲ್ಲಿಯೇ ಶ್ರೀಪ್ರಾಣದೇವರ ಮೂರ್ತಿಯನ್ನು ಮಾಡಿಸಿ ಅದೇ ಮಾಧವಾರದ ಹಳ್ಳದ ಮೇಲೆ ಸ್ಥಾಪನೆಮಾಡಿಸಿದನು. ಈ ಪ್ರಾಣದೇವರ ಮೂರ್ತಿಯನ್ನು ಈಗಲೂ ಆ ಸ್ಥಳದಲ್ಲಿ ನೋಡಬಹುದು. ಶ್ರೀವಾಜೇಂದ್ರಸ್ವಾಮಿಗಳವರ ವೃಂದಾವನವನ್ನಾದರೂ ಶ್ರೀರಾಘವೇಂದ್ರರ ವೃಂದಾವನದ ಎಡ ಮಗ್ಗಲಿಗೆ ಈಗ ಕಾಣಬಹುದು. ಈ ಪ್ರಕಾರ ಶ್ರೀಗಳವರು ವೃಂದಾವನವು ಸಿದ್ಧವಾದ ಕೂಡಲೆ ವೆಂಕಟಪಂತನಿಗೆ ಹೇಳಿ, ಏಳು ನೂರು ಸಾಲಿಗ್ರಾಮಗಳನ್ನು ತರಿಸಿ, ಕುಂಡದಲ್ಲಿ ಹಾಕಿ, ಅದರ ಮೇಲೆ ವೃಂದಾವನವನ್ನು ಸ್ಥಾಪಿಸಲಿಕ್ಕೆ ಹೇಳಿದರು. ವೃಂದಾವನವು ಅಪ್ಪಿಗೆ ಹಚ್ಚಿದ ಕಲ್ಲಿನಂತೆ ಕಾಣುವದನ್ನು ವಾಚಕರು ಈಗಲೂ ನೋಡಬಹುದು. ಹೀಗೆ ವೃಂದಾವನವೂ ಮಠವೂ ಕಟ್ಟಲ್ಪಡುವ ವೇಳೆಯಲ್ಲಿ ಇವರಿಗೆ ಇನಾಮು ಹಾಕಿಕೊಟ್ಟ ಖಾನನು—ತಮ್ಮ ಮಠದಲ್ಲಿ ನನ್ನ ಸ್ಮಾರಕವೇನಾದರೂ ಇರುವಂತೆ ಮಾಡಬೇಕೆಂದು ಬೇಡಿಕೊಂಡನು. ಶ್ರೀಗಳವರು ಹಾಗೇ ಆಗಲೆಂದು ವೃಂದಾವನದ ಮೇಲ್ಗಡೆಯಲ್ಲಿ ಕಟ್ಟಿದ ಭವಂತಿಗೆ ನಾಲ್ಕು ಮಗ್ಗಲಿಗೆ ನಾಲ್ಕು ಗುಮುಟಗಳನ್ನು ಮುಸಲ್ಮಾನೀ ಪದ್ಧತಿಯಂತೆ ಮಾಡಿಸಿದರು. ಇವು ಆದ್ಯಾಪಿ ಕಾಣುತ್ತಿರುವವು.

ಹೀಗೆ ಶ್ರೀಗಳವರು ದಿವ್ಯವಾದ ಮಠವನ್ನು ಕಟ್ಟಿಸಿಕೊಂಡು ಅಲ್ಲಿಯೇ ನಿಂತುಬಿಟ್ಟರು ವೆಂಕಟಪಂತನು ಇವರ ಸೇವೆಮಾಡಿ ಧನ್ಯನಾದನು. ಕಡೆಗೆ ರಾಯರು ವೃಂದಾವನಸ್ಥರಾಗುವ ಸಮಯದಲ್ಲಿ ಈತನು ಹೀಗೆ ಬೇಡಿಕೊಂಡನು:—"ನಿಮ್ಮ ಹಸ್ತೋದಕವು (ಮಠದ ಹಸ್ತೋದಕವು) ಆದ ಕೂಡಲೆ ಮೊದಲು ನನ್ನ ಹಸ್ತೋದಕ-ನನ್ನ ಮಂಗಳಾರತಿ ಆಗಬೇಕು; ಹಾಗು ಇದು ಶಾಶ್ವತವಾಗಿ ನಡೆಯುವಂತೆ ಮಠದಿಂದಲೇ ನಾಲ್ಕು ರೂಪಾಯಿ ವರ್ಷಾಶನ ಹಾಕಿ ಕೊಡಬೇಕು." ಶ್ರೀಗಳವರು ತಥಾಸ್ತು! ಅಂದರು. ಈ ಪದ್ಧತಿಯು ಮಠದಲ್ಲಿ ಈಗಲೂ ನಡೆಯುತ್ತಿರುವದು.

ಈ ಪ್ರಕಾರ ಶ್ರೀಗಳವರು ಮಂತ್ರಾಲಯವನ್ನು ಸಂಪಾದಿಸಿ ಮಠವನ್ನು ಕಟ್ಟಿಸಿಕೊಂಡು ಕಡೆಗೆ ಅಲ್ಲಿಯೇ ವೃಂದಾವನಸ್ಥರಾದ್ದರಿಂದ ಇವರಿಗೆ ಮಂತ್ರಾಲಯ ಸ್ವಾಮಿಗಳೆಂತಲೂ ಇವರ ಮಠಕ್ಕೆ ಮಂತ್ರಾಲಯ ಮಠವೆಂತಲೂ ಹೆಸರು ಬಿದ್ದುಹೋದವು. ಮತ್ತು ಇವರು ಆಗಾಗ್ಗೆ ದೇಶಸಂಚಾರ ಮಾಡುತ್ತಿರುವಾಗ ಆಯಾ ಸ್ಥಳಗಳಲ್ಲಿ ಪರಮಾತ್ಮನು ಇವರಿಂದ ಲೀಲಾಮಾತ್ರವಾಗಿ ತೋರಿಸಿದ ಅನೇಕ ಮಹಾತ್ಮ್ಯಗಳು ತನಗೆ ತಾನೇ ಜನರ ನಿದರ್ಶನಕ್ಕೆ ಬಂದು ಹೋದವು ಅವುಗಳನ್ನೆಲ್ಲ ಸಾದ್ಯಂತವಾಗಿ ವಿವರಿಸುವದು ನನ್ನಂಥ ಪಾಮರನ ಯೋಗ್ಯತೆಯಲ್ಲವಾದರೂ ಶ್ರೀಗಳವರ ಮಾಹಾತ್ಮ್ಯವರ್ಣನೆಯ ಒಂದಕ್ಷರವೂ ಕೂಡ ಪರಮಪುಣ್ಯಕರವಾದದ್ದೆಂದು ನಂಬಿ, ಮುಂದಿನ ಭಾಗದಲ್ಲಿ ಕೆಲವನ್ನು ಯಥಾಮತಿ ವರ್ಣಿಸುವ ಯತ್ನ ಮಾಡಿರುವೆನು.

---



# ದ್ವಿತೀಯ ಗುಚ್ಛ.

ಓದಿಸುವ ಗುರುಗಳನು ಜರಿದು ಸ| ಹೋದರರಿಗುಪದೇಶಿಸಿದ ಮಹ|
ದಾದಿಕಾರಣ ಸರ್ವಗುಣ ಸಂಪೂರ್ಣ ಹರಿಯೆಂದ.||
ವಾದಿಸುವ ತ್ವತ್ಪತಿಯು ತೋರೆಂ| ದಾದನುಜಚಿಸಗೊಳಲು ಸ್ತಂಭದಿ|
ಶ್ರೀದನಾಕ್ಷಣ ತೋರಿಸಿದ ಪ್ರಲ್ಹಾದ ಸಲಹೆಮ್ಮ||

(ಹರಿಕಥಾಮೃತಸಾರ)

೧ನೆಯ ಕಥೆ

## ಇಚ್ಛಾಭೋಜನ

ಒಮ್ಮೆ ಉತ್ತರದೇಶದಿಂದ ಮೂರುಜನ ಬ್ರಾಹ್ಮಣರು ಶ್ರೀಗಳವರ ದರ್ಶನಕ್ಕೆಂದು ಹೊರಟರು. ಈಗಾಗಲೆ ಶ್ರೀಗಳವರ ಖ್ಯಾತಿಯು ಹನುಮಪ್ಪನ ಬಾಲದಂತೆ ಬೆಳೆದು ಆಸೇತು ಹಿಮಾಚಲದ ವರೆಗೆ ಹಬ್ಬಿ ಹೋಗಿತ್ತು. ಆದರೂ ಈ ಬ್ರಾಹ್ಮಣರಿಗೊಂದು ದುರಾಶೆಯು ಹುಟ್ಟಿತು. ಅದು ಮತ್ತೇನೂ ಅಲ್ಲ; "ಶ್ರೀಗಳವರು ಅಪರೋಕ್ಷ ಜ್ಞಾನಿಗಳೆಂದು ಬಹು ಜನರು ಹೇಳುತ್ತಿರುವರು. ಅದು ಸಟಿಯೋ ದಿಟವೋ ಪರೀಕ್ಷಿಸಿ ನೋಡಬೇಕೆಂಬುದು." ನೋಡಿದಿರೋ ಎಂಥ ಯೋಚನೆಯಿದು? 'ಹನುಮಪ್ಪನ ಮುಂದೆ ಹಾರಗುಬ್ಬಿ' ಎಂಬಂತೆ ಶ್ರೀಗಳವರೆದುರಿಗೆ ತಾವು ಯಾವ ಗಿಡದ ತೊಪ್ಪಲೆಂಬುದನ್ನು ಅವರು ಅರಿಯಲಾರದೆ ಹೋದರು. 'ಕಾಷಾಯ ದಂಡ ಮಾತ್ರೇಣ ಯತಿಃ ಪೂಜ್ಯೋ ನ ಸಂಶಯಃ |'ಅಂದರೆ ಮೈಯಲ್ಲಿ ಕಾವಿಯ ಕಾಟ ಕೈಯಲ್ಲಿ ದಂಡಮಾತ್ರ ಉಳ್ಳಂಥ ಯತಿಯೇ ಪೂಜ್ಯನೆಂದು ಹೇಳುತ್ತಿರುವಾಗ, ಪ್ರತ್ಯಕ್ಷ ದೇವಾಂಶರೂ ಮಹಾ ಮಹಿಮರೂ ಆದಂಥ ಶ್ರೀ ರಾಘವೇಂದ್ರ ಯತಿವರರನ್ನು ಇನ್ನೂ ಕೇಳಬೇಕೇ? ಬ್ರಾಹ್ಮಣರು ಇಷ್ಟೊಂದು ಆಳವಾದ ಯೋಚನೆಯನ್ನು ಮಾಡಲಿಲ್ಲ. ಬಂದೇ ಬಿಟ್ಟರು. ಸ್ವಾಮಿಗಳು ಸ್ನಾನ ಮಾಡಿದ್ದರು. ಶಿಷ್ಯನೊಬ್ಬನು ಅವರ ಕಾಟಿಯನ್ನು ತಕ್ಕೊಂಡು ಒಗೆಯಲಿಕ್ಕೆ ನದಿಗೆ ಹೋಗಿದ್ದನು.

ಬ್ರಾಹ್ಮಣರು ಊರಲ್ಲಿ ಹಿಂದು ಕಡೆಗೆ ಇಳಿದುಕೊಂಡು ಸ್ನಾನಮಾಡಲಿಕ್ಕೆಂದು ನೆಟ್ಟಗೆ ನದಿಗೆ ಹೋದರು. ಶಿಷ್ಯನು ಈ ಬ್ರಾಹ್ಮಣರನ್ನುನೋಡಿ:— ಏನು ರಾಮಾಚಾರ್ಯರೇ, ಈಗೆ ಬರೋಣವಾಯಿತೇನು? ಸ್ನಾನ ಮಾಡಿ ಬೇಗನೆ ಮಠಕ್ಕೆ ನಡೆಯಿರಿ. ನಿಮ್ಮ ದೆಶೆಯಿಂದ ಖೀರು ಸಿದ್ಧವಾಗಿದೆ. ಗುಂಡಾಚಾರ್ಯರಿಗೆ ಚಿತ್ರಾನ್ನವೂ, ಕೃಷ್ಣಾಚಾರ್ಯರಿಗೆ ಕರಿಗಡಬುಗಳೂ ಸಿದ್ಧವಾಗಿವೆ. ಎಲ್ಲರೂ ಜಾಗ್ರತೆಯಾಗಿ ನಡೆಯಿರಿ, ಎಂದು ಹೇಳಿದನು. ಬ್ರಾಹ್ಮಣರಿಗೆ ಪರಮಾಶ್ಚರ್ಯವಾಯಿತು. ಎಲಾ ಇದೇನು? ನಾವು ಮನಸ್ಸಿನಲ್ಲಿ ಯಾವ ಭೋಜನವನ್ನು ಯೋಚಿಸಿಕೊಂಡು ಬಂದಿದ್ದೆವೋ ಅದನ್ನೇ ಶ್ರೀಗಳವರಂತೂ ಇರಲಿ ಅವರ ಶಿಷ್ಯನೇ ಹೇಳಿ ಬಿಟ್ಟನಲ್ಲ! ನಾವು ಎಂಥ ಮೂರ್ಖರು? ಹರಿವಾಣವನ್ನು ಮಾಡಲಿಕ್ಕೆ ಬಾರದವನು ಹರಿಯ ಸಂಚಕಾರ ಹಿಡಿದಂತೆ, ಚೇಳಿನ ಮಂತ್ರವನ್ನರಿಯದವನು ಕೃಷ್ಣ ಸರ್ಪದ ಹುತ್ತಿನಲ್ಲಿ ಕೈಯಿಕ್ಕುವೆನೆಂದು ಹೇಳಿದಂತೆ ನಮ್ಮ ಸಮಾಚಾರವಾಯಿತು. ಅಹಾ! ದೊಡ್ಡವರನ್ನು ಪರೀಕ್ಷಿಸಬಂದದ್ದು ಬಹಳ ತಪ್ಪು. ಶ್ರೀಗಳವರೆದುರಿಗೆ ಹ್ಯಾಗೆ ಹೋಗೋಣ? ಎಂದು ಬಹಳವಾಗಿ ಯೋಚಿಸುತ್ತ ಶಿಷ್ಯನನ್ನು ಮತ್ತೊಮ್ಮೆ ಕೇಳಿದರು. ಅಷ್ಟರಲ್ಲಿ ಅವನು ಹೆಗಲಮೇಲಿದ್ದ ಶಾಟಿಯನ್ನು ನೀರಲ್ಲಿ ತೋಯಿಸಿ ಇಟ್ಟಿದ್ದನು. ಅದರಿಂದ ಆಗೆ ಅವನಿಗೆ ಏನೂ ತೋಚಲಿಲ್ಲ. ನನಗೇನೂ ಗೊತ್ತಿಲ್ಲವೆಂದು ಹೇಳಿಬಿಟ್ಟನು. ಪುನಃ ಶಾಟಿಯನ್ನು ಒಗೆದು ಹೆಗಲ ಮೇಲೆ ಹಾಕಿಕೊಂಡು ಬರುವಾಗ ಮತ್ತೆ ಮೊದಲಿನಂತೆ ಶಿಷ್ಯನ ಬಾಯಿಂದ ಮಾತು ಹೊರಟವು. ಬ್ರಾಹ್ಮಣರು ತಿಳಕೊಂಡರು. ಇದು ಶ್ರೀಗಳವರ ಶಾಟಿಯ ಮಾಹಾತ್ಮ್ಯವೇ ಹೊರತು ಬೇರೆಯಲ್ಲ. ಅಂದಮೇಲೆ ಅವರು ದೇವಾಂಶರೆಂದು ಹೇಳಲು ಸಂದೇಹವೇನು? ಒಳ್ಳೇದು. ಇಂಥ ಮಾಹಾತ್ಮರನ್ನು ಸಂದರ್ಶಿಸುವ ಯೋಗವು ನಮಗೆ ಒದಗಿದ್ದೊಂದು ಸುದೈವವೇ ಸರಿ. ಹೀಗೆಂದು ಮಾತಾಡುತ್ತಾ ಸ್ನಾನ ಮಾಡಿಕೊಂಡು ಮಠಕ್ಕೆ ಬಂದರು.

ಶ್ರೀಗಳವರ ದೇವತಾರ್ಚನೆಯು ಮುಗಿಯಿತು. ಸಾಷ್ಟಾಂಗವಾಗಿ ವಂದಿಸಿದರು. ಸ್ವಾಮಿಗಳು ಇವರನ್ನು ಮೇಲಕ್ಕೆ ಕರೆದು ಕುಳ್ಳಿರಿಸಿ ತೀರ್ಥವನ್ನು ಕೊಟ್ಟು ಭೋಜನಕ್ಕೆ ಕೂಡ್ರಿಸಿದರು; ಹಾಗೂ ಬಡಿಸುವವರನ್ನು ಕರೆದು, ಈ ಮೊದಲು ಶಿಷ್ಯನು ಹೇಳಿದಂತೆ ಒಬ್ಬರಿಗೆ ಖೀರನ್ನೂ

ಮತ್ತೊಬ್ಬರಿಗೆ ಚಿತ್ರಾನ್ನವನ್ನೂ, ಇನ್ನೊಬ್ಬರಿಗೆ ಕರಿಗಡಬನ್ನೂ ಬಡಿಸಲಿಕ್ಕೆ ಹೇಳಿದರು. ಬ್ರಾಹ್ಮಣರು ನಾಚಿದರು. ಮೋರೆ ಕೆಳಗಾಯಿತು ಅವರ ಬಾಯಿಂದ ಏನೊಂದು ಮಾತೂ ಹೊರಡಲಿಲ್ಲ ಊಟವಾದ ಕೂಡಲೆ ಶ್ರೀಗಳವರ ಕಾಲು ಹಿಡಿದುಕೊಂಡು ಕ್ಷಮಿಸಬೇಕೆಂದು ಬೇಡಿಕೊಂಡರು. ಆಗ ಶ್ರೀಗಳವರು ವಿನೋದದಿಂದ:—ವಿಪ್ರೋತ್ತಮರೇ! ಹೀಗೆ ನೀವು ನಮ್ಮನ್ನು ಪರೀಕ್ಷಿಸಿದ್ದಕ್ಕಾಗಿ ನಿಮಗೊಂದು ಶಿಕ್ಷೆಮಾಡುತ್ತೇವೆನ್ನಲು, ಬ್ರಾಹ್ಮಣರ ಎದೆ ಝಲ್ಲೆಂದಿತು. ಹೌಹಾರಿ ಹೋದರು. ಶ್ರೀಗಳವರು ಮಹಾತ್ಮರಾದವರು. ಶಾಪವನ್ನು ಕೊಟ್ಟುಬಿಡುವರೋ ಮತ್ತೇನುಮಾಡು ವರೋ ಎಂಬ ಹೆದರಿಕೆಯಿಂದ ಗದಗದ ನಡುಗಹತ್ತಿದರು. ಸ್ವಾಮಿಗಳು ಅವರನ್ನು ನೋಡಿ ನಕ್ಕು:—ಬ್ರಾಹ್ಮಣರೇ, ಅಂಜಬೇಡಿರಿ. ನಾವು ಕೊಡುವ ಶಿಕ್ಷೆಯು ಮತ್ತೇನೂ ಅಲ್ಲ.—ಜನ್ಮ ಜನ್ಮದಲ್ಲಿಯೂ ನೀವು ಬ್ರಾಹ್ಮಣರಾಗಿ ಹುಟ್ಟಿ ಕಡೆತನಕ ನಮ್ಮ ಪೂಜೆ ಮಾಡತಕ್ಕವರಾಗಿರಿ. ಅಂದರೆ ಈಗ ನೀವು ಇಚ್ಛಿಸಿದ ಭೋಜನವು ಪ್ರತಿದಿನವೂ ತಪ್ಪದೆ ನಿಮಗೆ ಸಿಗುವದು. ಬ್ರಾಹ್ಮಣರಿಗೆ ಪರಮಾನಂದವಾಯಿತು. ದೊಡ್ಡವರ ಮನಸ್ಸು ದೊಡ್ಡದೆಂದು ಅನೇಕ ರೀತಿಯಿಂದ ಗುರುಗಳನ್ನು ಕೊಂಡಾಡಿ, ಅವರಿಂದ ಅಪ್ಪಣೆ ಪಡೆದು ತಮ್ಮ ಊರಿಗೆ ಹೊರಟು ಹೋದರು.

ಈ ಬ್ರಾಹ್ಮಣಸಂತತಿಯುವರೆ ಪೂಜಾರರಾಗಿ ಹುಟ್ಟಿ ಈಗಲೂ ಶ್ರೀಗಳವರ ಪೂಜೆಯನ್ನು ಮಾಡುತ್ತಿರುವರು.

ಮಹಾತ್ಮರ ಚಿತ್ರ ಚರಿತ್ರವನ್ನು ತಿಳಿದವರಾರು? 'ನಾಥಪ್ರೋ ದೀನ ವತ್ಸಲಾಃ' ಎಂಬಂತೆ ಅವರು ಯಾವಾಗಲೂ ಕರುಣಾಸಮುದ್ರರು. ಪರರು ತಮಗೆ ಬೇಕಾದಷ್ಟು ಅಪಕಾರವನ್ನು ಮಾಡಲಿ ಅದಕ್ಕೆ ಬದಲಾಗಿ ತಾವು ಉಪಕಾರವನ್ನೇ ಮಾಡುವದು ಅವರ ಸ್ವಭಾವ. ನಿಂದಾ-ಸ್ತುತಿಗಳಿಗೆ ಕುಗ್ಗುವದೂ ಇಲ್ಲ; ಹಿಗ್ಗುವದೂ ಇಲ್ಲ. ಇಂಥವರಿಗೇ ಸತ್ಪುರುಷರು,-ಸಾಧುಗಳು ಎಂಬ ಹೆಸರು ಒಪ್ಪುವದು. ಇಂಥವರ ಗುಣವನ್ನು ಒಬ್ಬ ಕವಿಯು ಹೀಗೆಂದು ವರ್ಣಿಸಿರುತ್ತಾನೆ:—

ನಿಂದೆಗಳ ತಾವಾಡರಾಡುವ|, ನಿಂದೆಯುವ ತಾವ್ ಕೇಳಿ ತಮನೇ|
ನಿಂದಿಸಲು ಸಂತೋಷವಾಹರು ಹಿಗ್ಗಿ ಹರಸುವರು||

ಕುಂದು ಬಂದರೆ ಕುಸಿಯದಿಹರು| ನಿಂದಕರ ಬದಿ ನಿಲ್ಲರೈ ಮನ-
ಬಂದ ಸ್ಥಳದಲಿ ಕೂಡುವರು ಇದು ಸಾಧುಗುಣವೆಂದಾ

ಇದೇ ವಿಷಯುವನ್ನೇ ಮಹಾತ್ಮರಾದ ಶ್ರೀಪುರಂದರದಾಸರ ಇನ್ನೂ ಹೆಚ್ಚಾದ ಪ್ರೌಢಿಮೆಯಿಂದ ವರ್ಣಿಸಿ ಕನ್ನಡ ಸಾಹಿತ್ಯಕ್ಕೆ ಪುಷ್ಟಿ ಯುನ್ನುಂಟುಮಾಡಿರುವರು. ಅವರು ಹೇಳಿದ್ದನ್ನು ಕೇಳಿರಿ:—

ವಿಷವುಣಿಸಿದವಗೆ ಅಮೃತಾನ್ನವುಣಿಸಲಿಬೇಕು| ದ್ವೇಷಮಾಡಿದವ ಪೂಜಿಸಲಿಬೇಕು|| ಹುಸಿದು ಮುಳಿಗುಂಬುವನ ಹಾಡಿಹರಸಲಿಬೇಕು| ವ್ಯಸ ಬಡಿಸುವನ ಮಗನ್ನೆ ಸರಿಡಲಿಬೇಕು||೧||

ಧರ್ಮವೇ ಜಯವೆಂಬೋದಿದು ದಿವ್ಯಮಂತ್ರಾ|
ಮರ್ಮವೆತ್ತಿ ಕೆಡುವದು ಹಿಳಿತಲ್ಲ ಕೇಳಿ || ಪಲ್ಲ ||

ಇದು ವೈರಾಗ್ಯದ ತೀರ ಕೊನೆಯು ಮಾತು.

---

## ೨ನೆಯ ಕಥೆ

## ಮೂವರು ಜ್ಯೋತಿಷಿಗಳು.

ಹಿಂದಾನೊಂದು ದಿವಸ ಮೂವರು ಜ್ಯೋತಿಷಿಗಳು ಶ್ರೀಗಳವ ಹತ್ತಿರ ಬಂದರು. ಶಾಸ್ತ್ರದಲ್ಲಿ ಪಾಂಡಿತ್ಯವನ್ನು ತೋರಿಸಿ ಸಂಭಾವನೆಯುನ್ನು ಹೊಂದಬೇಕೆಂಬುವದೇ ಇವರ ಉದ್ದೇಶವಾಗಿತ್ತು. ಅದರಂತೆ ಶ್ರೀಗ ವರಿಗೆ ಅರಿಕೆಮಾಡಿಕೊಂಡರು. ನಿಜವನ್ನೇ ಹೇಳಬೇಕೆಂದರೆ, ಶ್ರೀಗಳವರ ಜ್ಯೋತಿಷ್ಯವನ್ನು ಸುತರಾಂ ಬಲ್ಲವರಲ್ಲ. ಪಂಡಿತರನ್ನು ಪರೀಕ್ಷಿಸುವದ ಹೇಗೆ? ವಾಚಕಮಹಾಶಯ! ಇದು ನಮ್ಮಂಥ ಅಜ್ಞರ ಮಾತು ಸತ್ಪು ರುಷರಿಗೆ ಯಾವದೂ ದೊಡ್ಡದಲ್ಲ. ಅವರು ಏನು ಮಾಡ್ಯಾರು ಏನ ಮಾಡಲಿಕ್ಕಿಲ್ಲೆಂಬದರ ನೆಲೆಯೇ ಹತ್ತದು. ಆಗ ಶ್ರೀಗಳವರು ಮುಗುಳ ನಗೆ ನಕ್ಕು ಹೇಳಿಬಿಟ್ಟರು; "ಶಾಸ್ತ್ರಿಗಳೇ, ನೀವು ಮೂರು ಮಂದಿಯೂ ಬೇರೆ ಬೇರೆ ನಮ್ಮ ಜಾತಕವನ್ನು ಬರೆದುಕೊಂಡು ಬನ್ನಿರಿ" ಜ್ಯೋತಿಷಿ ಗಳಿಗೆ ಇದು ಸಹಜವಾದ ಮಾತಾಯಿತು. ಯಾಕಂದರೆ ಜ್ಯೋತಿಷಶಾಸ್ತ್ರವು ಅತ್ಯಂತ ಗಹನವಾದದ್ದು. ಅದರಲ್ಲಿ ಎಷ್ಟು ಅಭ್ಯಾಸಮಾಡಿದರೂ ಕಡಿಮೆ.

ಮಾಹಾತ್ಮರಾದ ಸ್ವಾಮಿಗಳವರು ಏನನ್ನು ಪ್ರಶ್ನಮಾಡುವರೋ? ಅದಕ್ಕೆ ಸರಿಯಾದ ಉತ್ತರವು ನಮ್ಮಿಂದ ಹೊರಡುವದೋ ಇಲ್ಲವೋ? ಸಂಭಾವನೆಯು ಹೇಗೆ ದೊರಕೀತು? ಇವೇ ಮೊದಲಾದ ಅನೇಕ ಯೋಚನೆಗಳಿಂದ ಅವರು ಕುಳಿತಿದ್ದರು. ಶ್ರೀಗಳವರ ಬಾಯಿಂದ ಇಷ್ಟು ಹೊರಡುವದೊಂದೇ ತಡ; ಮೂವರೂ ಒತ್ತೊತ್ತಟ್ಟಿಗೆ ಹೋಗಿ ಜಾತಕವನ್ನು ಬರೆಯಹತ್ತಿದರು. ಕೆಲವು ಹೊತ್ತಿನಲ್ಲಿ ಎಲ್ಲರೂ ಜಾತಕವನ್ನು ಬರೆದದ್ದಾಯಿತು. ಶ್ರೀಗಳವರೆದುರಿಗೆ ಬಂದು ಸಾಷ್ಟಾಂಗವಾಗಿ ವಂದಿಸಿ ತಮ್ಮ ತಮ್ಮ ಪತ್ರಿಕೆಯನ್ನಿಟ್ಟರು. ಅಲ್ಲಿಯಾದರೋ ಅನೇಕ ಜನ ಪಂಡಿತರೂ, ಪಾಮರರೂ ನೆರೆದಿದ್ದರು. ಅವರಲ್ಲಿ ಮುಖ್ಯಸ್ಥನಾದವನೊಬ್ಬನು ಈ ಪತ್ರಿಕೆಗಳನ್ನು ತಕ್ಕೊಂಡು ಶ್ರೀಗಳವರಿಗೆ ಓದಿತೋರಿಸಿದನು. ಜಾತಕವನ್ನು ಓದಿದ ಕೂಡಲೆ ಸಭೆಯಲ್ಲಿ ಕುಳಿತವರೆಲ್ಲರೂ ಘೊಳ್ಳೆಂದು ನಕ್ಕುಬಿಟ್ಟರು. ಜ್ಯೋತಿಷಿಗಳೂ ಒಬ್ಬರ ಮೋರೆಯನ್ನೊಬ್ಬರು ನೋಡುತ್ತ ಆಶ್ಚರ್ಯ ಪಡಹತ್ತಿದರು

ಅಹಾ! ಜಾತಕದಲ್ಲಿ ಅಂಥಾದ್ದೇನು ಹೊರಟಿರಬಹುದು? ಜ್ಯೋತಿಷಿಗಳೇನು ಸಾಮಾನ್ಯರೆಂದು ಹೇಳಬಹುದೇ? ಒಬ್ಬರಿಗಿಂತಲೂ ಒಬ್ಬರು ಘನಪಂಡಿತರು. ವರಾಹಮಿಹಿರ-ಭಾಸ್ಕರಾಚಾರ್ಯರಂಥವರನ್ನೂ ಕೂಡ ತಾಸೆರೆಡು ತಾಸಾದರೂ ವಾದದಲ್ಲಿ ಎದುರಿಸತಕ್ಕಂಥವರು. ಇಂಥವರು ಬರೆದ ಬರಹಕ್ಕೆ ಪಂಡಿತ-ಪಾಮರರೂ ನಕ್ಕರೇಕೆ? ಜ್ಯೋತಿಷಿಗಳಲ್ಲಿಯೇ ಒಬ್ಬೊಬ್ಬರಿಗೂ ಆಶ್ಚರ್ಯವುಂಟಾದುದೇತಕ್ಕೆ? ಅದರಲ್ಲಿ ಹೆಚ್ಚಿನದೇನೂ ಇರಲಿಲ್ಲ. ಮೂವರು ಬರೆದ ಜಾತಕಗಳೂ ಬಹುತರ ಒಂದೇ ರೀತಿಯಾಗಿದ್ದವು; ಆದರೆ ಕಡೆಯ ನಿರ್ಣಯದಲ್ಲಿ ಒಂದು ಚಮತ್ಕಾರವಾಗಿತ್ತು. ಒಬ್ಬರು ಶ್ರೀಗಳವರ ಆಯುಃ ಪ್ರಮಾಣವು ನೂರು ವರ್ಷವೆಂದೂ, ಇನ್ನೊಬ್ಬರು ಮುನ್ನೂರು ವರ್ಷವೆಂದೂ, ಮತ್ತೊಬ್ಬರು ಏಳುನೂರು ವರ್ಷವೆಂದೂ ಬರೆದಿದ್ದರು. †

† ಜಾತಕಾನಿ ಗೃಹೀತ್ವಾ ಚ ರಾಘವೇಂದ್ರೋ ದದರ್ಶ ಸಃ ॥
ಪ್ರಥಮೇ ಜಾತಕೇ ಸ್ವಸ್ಯ ಹ್ಯಾಯುರಬ್ದಶತಂ ತತಃ ॥
ದ್ವಿತೀಯೇ ಜಾತಕೇ ದೃಷ್ಟ್ವಾ ಹ್ಯಾಯುರಬ್ದಶತತ್ರಯಂ ।
ತೃತೀಯೇ ಜಾತಕೇ ಹ್ಯಾಯುರಬ್ದಸಪ್ತಶತಂ ಕ್ಷಿತಿ ॥

( ರಾ. ಅಣುವಿಜಯ )

ವಾಚಕರೇ, ಇದೇ ಎಲ್ಲರ ನಗುವಿಗೂ ಆಶ್ಚರ್ಯಕ್ಕೂ ಕಾರಣವೆಂದು ತಿಳಿಯಿರಿ. ಮನುಷ್ಯನ ಆಯುಃ ಪ್ರಮಾಣವು ನೂರು ವರ್ಷವಿರುವದು ಸಹಜವಾಗಿದ್ದರೂ ಮುನ್ನೂರು-ಏಳುನೂರು ವರ್ಷ ಬರೆದದ್ದನ್ನು ನೋಡಿ ಅನೇಕರಿಗೆ ಹಾಸ್ಯವೆನಿಸಿತು. ಇಷ್ಟೇ ಯಾಕೆ, ಸ್ವತಃ ಜ್ಯೋತಿಷಿಗಳಿಗೇ ಈ ಮಾತು ದಿಗಿಲು ಬಿದ್ದಿತು. ಪಾಪ! ಅವರೇನು ಮಾಡಬೇಕು? ಗಣಿತ ದಿಂದ ಹೊರಟದ್ದನ್ನು ಬರೆದು ಬಿಟ್ಟಿದ್ದರು. ಎಷ್ಟು ವಿಚಾರಿಸಿದರೂ ಗಣಿತದಲ್ಲಿ ಲೇಶಮಾತ್ರ ತಪ್ಪಿಲ್ಲ. ಹಾಗಾದರೆ ಏನಾಗಿರಬಹುದು? ಆಗ ಶ್ರೀಗಳವರು ಹೇಳಿದರು ನೀವು ಮೂವರೂ ಘನ ಪಂಡಿತರು. ನೀವು ಬರೆದ ಜಾತಕಗಳಲ್ಲಿ ತಿಲಾಂಶವಾದರೂ ತಪ್ಪಿಲ್ಲ. ಹೀಗೆಂದ ಕೂಡಲೆ ಜನರಿಗೆ ಅತೀವ ಆಶ್ಚರ್ಯವಾಯಿತು. ಒಂದರ ಹೊರತು ಉಳಿದೆರಡು ಜಾತಕಗಳೂ ತಪ್ಪೆಂದು ಅವರು ನಿರ್ಣಯಿಸಿ ಬಿಟ್ಟಿದ್ದರು. ಅಂದಮೇಲೆ ಶ್ರೀಗಳವರು ಸರಿಯಾಗಿದೆಯೆಂದು ಹೇಳಿದರೆ ಕೇಳುವರೇ? ಕೇಳಲಿಲ್ಲ. ಈ ಕಲಿಕಾಲದಲ್ಲಿ ಮನುಷ್ಯನು ಎಲ್ಲಾದರೂ ಮುನ್ನೂರು-ಏಳು ನೂರು ವರ್ಷ ಬದುಕಿದ್ದುಂಟೇ? ಎಂದು ಶ್ರೀಗಳವರನ್ನೇ ಕೇಳಿದರು. ಗುರುಗಳಲ್ಲಿ ಅಚಲವಾದ ಭಕ್ತಿಯನ್ನಿಟ್ಟ ಕೆಲ ಕೆಲವರು ಅವರ ಬಾಯಿಂದ ಬಂದದ್ದೇ ವೇದವಾಕ್ಯವೆಂದು ನಂಬಿ ಸುಮ್ಮನಿದ್ದರು. 'ವಿಸ್ತೀರ್ಣಾಃ ಪೃಥಿವೀ ಜನೋಽಪಿ ವಿವಿಧಾಃ' ಎಂಬ ಮಾತು ಸುಳ್ಳಲ್ಲ.

ಆಗ ಸ್ವಾಮಿಗಳು:—ಎಲೈ ಸಭಿಕರಿರಾ, ಜ್ಯೋತಿಷಿಗಳು ಸಾಮಾನ್ಯರೆಂದು ತಿಳಿಯಬೇಡಿರಿ. ಅವರು ಬರೆದ ಜಾತಕಗಳು ಒಳ್ಳೇ ಸರಿಯಾದವು; ಆದರೆ ಅವುಗಳ ಅಂತರ್ಯವನ್ನು ನೀವು ತಿಳಿಯಲಿಲ್ಲ ಮೊದಲನೇಯವರು ಬರೆದಂತೆ ನೂರು ವರ್ಷವೆಂಬುದು ನಮ್ಮ ಆಯುಃಪರಿಮಿತಿಯಾಗಿರುವದು. ಇನ್ನೊಬ್ಬರು ಬರೆದ ಮುನ್ನೂರು ವರ್ಷವೆಂಬುದು ನಮ್ಮ ಗ್ರಂಥದ ಆಯುಃಪರಿಮಿತಿಯು. ಏಳುನೂರೆಂದು ಮತ್ತೊಬ್ಬರು ಬರೆದದ್ದು ನಮ್ಮ ವೃಂದಾವನದ ಮಾಹಾತ್ಮ್ಯೆಯ ಆಯುಃಪರಿಮಿತಿಯು, ಎಂದು ಹೇಳಿದರು *

* ಪ್ರಥಮೇನ ಬ್ರಾಹ್ಮಣೇನ ಲಿಖಿತಂ ಜಾತಕಂ ಮಮ ॥
ಆಯುರಬ್ದ ಶತಂ ಯತ್ತು ಶರೀರಸ್ಯ ವಿವಕ್ಷಯಾ ॥
ಲಿಖಿತಂ ದ್ವಿತೀಯೇನ ಟಿಪ್ಪಣಾನಾಂ ವಿವಕ್ಷಯಾ ॥

ಜನರೆಲ್ಲರೂ ಬೆರಗಾಗಿ ಬೆಟ್ಟು ಕಚ್ಚಿದರು. ಜ್ಯೋತಿಷಿಗಳಿಗಾದ ಆನಂದವನ್ನಂತೂ ಹೇಳಲಾಸಲ್ಲ. ಅವರು ಶ್ರೀಗಳವರನ್ನು ಪ್ರತ್ಯಕ್ಷ ದೇವಾಂಶರೆಂದೇ ಕೊಂಡಾಡಿದರು ಸಂಭಾವನೆ ಮೊದಲಾದವು ಅವರಿಗೆ ಬೇಡಾದವು. ಸ್ವಾಮಿಗಳವರ ಪಾದಸೇವೆಯೊಂದು ದೊರೆತದ್ದು ಅಪೂರ್ವ ಪುಣ್ಯವೆಂದೆನಿಸಿ ಅವರ ಅನುಗ್ರಹವನ್ನು ಸಂಪಾದಿಸಿಕೊಂಡು ಹೊರಟು ಹೋದರು.

ಭಕ್ತರಿದ್ದಲ್ಲಿ ಭಗವಂತನಿರುವನೆಂಬ ಮಾತು ಸುಳ್ಳಲ್ಲ. ಅಂತೆಯೇ ಅವರ ಬಾಯಿಂದ ಹೊರಟ ವಾಕ್ಯ ಪರಮಾತ್ಮನ ಬಾಯಿಂದ ಹೊರಟ ವಾಕ್ಯಗಿಂತಲೂ ಹೆಚ್ಚು ಮಹತ್ವದ್ದಾಗುತ್ತಿರುವದು. ಪರಮಾತ್ಮನು ತನ್ನ ಮಾತನ್ನಾದರೂ ಬದಿಗಿಟ್ಟು ಭಕ್ತರ ಮಾತನ್ನು ನಡಿಸುತ್ತಿರುವದೇ ಇದಕ್ಕೆ ಕಾರಣ. ಹಿಂದಕ್ಕೆ ಶ್ರೀಕೃಷ್ಣಮೂರ್ತಿಯು ಭಾರತ ಯುದ್ಧದಲ್ಲಿ ಚಕ್ರವನ್ನು ಹಿಡಿಯಲಿಕ್ಕಿಲ್ಲೆಂದು ಪ್ರತಿಜ್ಞೆ ಮಾಡಿದ್ದನಾದರೂ ಅತ್ಯಂತ ಭಕ್ತನಾದ ಭೀಷ್ಮನ ಪ್ರತಿಜ್ಞೆಯನ್ನು ನೆರವೇರಿಸುವದಕ್ಕಾಗಿ ಕಡೆಗೆ ಚಕ್ರವನ್ನು ಹಿಡಿದು ಬಿಡಲಿಲ್ಲವೇ? ಆಹಾ! ಭಕ್ತರಲ್ಲಿ ಇನ್ನೆಷ್ಟು ಕರುಣವೋ? ತಿಳಿಯದು.

---

ಮದ್ಗ್ರಂಥಾನಾಂ ಪ್ರಚಾರಸ್ತು ವರ್ತತೇಬ್ದಶತತ್ರಯಂ ||
ದೈವಜ್ಞೇನ ತೃತೀಯೇನ ಲಿಖಿತಂ ಜಾತಕೇಂಚ ಯತ್ ||
ಅಬ್ದಸಪ್ತ ಶತಂ ತಚ್ಚ ವೃಂದಾವನ ವಿವಿಕ್ಷಯಾ ||
ಮಮವೃಂದಾವನೇ ವಾಸೇ ವರ್ಷ ಸಪ್ತ ಶತಾವಧಿ ||

(ರಾ. ಅ. ವಿಜಯ.)

ಈ ವಿಷಯವು — ಮಹನ್ನೀಯರಾದ ವಿಜಯ ದಾಸರ ಹಾಗೂ ಗೋಪಾಲದಾಸರ ಪದ್ಯಗಳಿಂದಲೂ ಸ್ಪಷ್ಟವಾಗುವದು

"ನೂರು ಪರ್ವತ ವರುಷ ಬಿಡದೆ | [illegible] ವೃಂದಾವನದಲೀವಿ |
ಸ್ತೋತ್ರ ಆರಾಧನೆಯು ತೊಲಗದೆ | ವಾರ ವಾರಕೆ ಆಗುತಿಪ್ಪವು |
ಸಾರೆ ಕಾರುಣ್ಯದಲಿ...... ......... ಕೀರ್ತಿಯುತ ತಂವಿಷ್ಣುನನುದಿನ" |
ನೋಡಿದೇ ಯತಿಗಳ ನೋಡಿದೆ || ಪ ||

(ವಿಜಯದಾಸಗುರು.)

"ಒಂದಾರುನೂರು ಸಂವತ್ಸರದ ವೃಂದಾವನದಲ್ಲಿ | ನಿಂದು ಮೆರೆವ ಕೃಪಾಸಿಂಧು
ದೇವಾಂಶರಾದ ||
ಗುರು ರಾಘವೇಂದ್ರ ಚರಣ ಕಮಲವನ್ನು | ಸ್ಮರಿಸುವ ಮನುಜರಿಗೆ || ಪ ||

(ಗೋಪಾಲ ದಾಸರು.)

ಧನ್ಯರು. ಭಕ್ತಿಯಿಂದ ಭಗವಂತನನ್ನು ಒಲಿಸಿಕೊಂಡ ಭಕ್ತರು ಧನ್ಯರು!

ಮನದಿ ಕಣ್ಣಿಂದಮಾ ಹರಿಯ ನೋಡುತಜ್ಞಾನಿ |
ಯೆನಿಸಿ ಭಕ್ತಿಯ ಮಾಡುತಿರುತ ||
ಅರಿತು ಸಾಧನಗಳ ಪ್ರೀತಿಪಹರಿಪದ |
ವನಜದಾಸನೆ ಧನ್ಯನಿಳೆಯೊಳ್ ||

೩ನೆಯ ಕಥೆ

## ಮೃತ್ತಿಕಾ ಮಹಿಮೆ.



ಒಂದಾನೊಂದು ದಿವಸ ಶ್ರೀಗಳವರು ಸ್ನಾನ ಮಾಡತಕ್ಕ ಸಮಯ. ಅವರ ಪರಿಚಾರಕರಲ್ಲೊಬ್ಬನು ಎದುರಿಗೆ ಕೈಜೋಡಿಸಿ ನಿಂತುಕೊಂಡು:— ಸ್ವಾಮೀ! ಗುರುಗಳೇ! ನನಗೆ ಲಗ್ನವಾಗಬೇಕೆಂಬ ಇಚ್ಛೆಯುಂಟಾಗಿರುವದು ಬಳಿಯಲ್ಲಾದರೋ ಒಂದು ಒಡಕು ಕಾಸು ಸಹ ಇಲ್ಲ. ತಮ್ಮಿಂದೇನಾದರೂ ದ್ರವ್ಯ ಸಹಾಯವು ದೊರೆತ ಪಕ್ಷದಲ್ಲಿ ಮಾತ್ರ ನನ್ನ ಲಗ್ನವಾಗುವಂತಿರುವದು. ಇಲ್ಲದೆ ಹೋದಲ್ಲಿ ಅದರ ಆಶೆಯನ್ನೇ ಮಾಡುವಂತಿಲ್ಲ. ತಮ್ಮಿಂದ ಬಡವನ ಮನೋರಥವು ಪೂರೈಸಿದಲ್ಲಿ ಗಂಡ-ಹೆಂಡರಿಬ್ಬರು ಆಜನ್ಮ ಪರ್ಯಂತರವಾಗಿ ತಮ್ಮ ಪಾದಸೇವೆಯನ್ನು ಮಾಡಿಕೊಂಡಿದ್ದು ಧನ್ಯರಾಗುವೆವು, ಎಂದು ಬೇಡಿಕೊಂಡನು. ಹೀಗೆ ಬೇಡಿಕೊಂಡ ಪರಿಚಾರಕನು ಏನೋ ನಾಲ್ಕು ಔಪಚಾರಿಕ ಮಾತುಗಳನ್ನಾಡಿ ಅಥವಾ ಇಲ್ಲದ ಮುಖಸ್ತುತಿ ಮಾಡಿ ಕಾರ್ಯಾಂತ್ಯದಲ್ಲಿ ಕಣ್ಣಿಗೆ ಬೀಳದಂತೆ ಹೊರಟು ಹೋಗುವ ಧೂರ್ತ ಕೋಟಿಯೊಳಗಿನವನಲ್ಲ. ಶ್ರೀಗಳವರಲ್ಲಿ ಅವನಿಗೆ ಪರಮ ವಿಶ್ವಾಸ. ಪೂಜ್ಯ ಬುದ್ಧಿ. ಅವರು ಬೆಂಕಿಯಲ್ಲಿ ಹಾರೆಂದರೂ ಹಾರತಕ್ಕವನೇ ಹೊರತು ಹಿಂದೆ ಮುಂದೆ ನೋಡತಕ್ಕವನಲ್ಲ. ಅನನ್ಯೊಂದು ದೃಢಚಿತ್ತ. ಇದೆಲ್ಲ ಶ್ರೀಗಳವರಿಗೆ ಗೊತ್ತು. ಆದರೂ ಈತನ ಮನಸ್ಸನ್ನು ಇನ್ನೊಮ್ಮೆ ಪರೀಕ್ಷಿಸಬೇಕೆಂದು ಅವರು ಹತ್ತರದಲ್ಲಿಯೇ ಇದ್ದ ತುಸ ಮೃತ್ತಿಕೆ(ಮಣ್ಣು)ಯನ್ನು ತೆಗೆದು ಅವನ

ಕೈಯಲ್ಲಿ ಕೊಟ್ಟುಬಿಟ್ಟರು ಅಯ್ಯೋ! ದುರ್ದೈವವೇ! ಯಾವನು ದ್ರವ್ಯಾ ಪೇಕ್ಷೆಯಿಂದ ಇಷ್ಟೊಂದು ಬಾಯಿ ತೆರೆದು ಅಂಗಲಾಚಿಬೇಡಿಕೊಂಡನೋ, ಅವನಿಗೆ ವೃತ್ತಿಕೆಯು ದೊರೆಯಬೇಕೇ? ವೃತ್ತಿಕೆಯನ್ನು ನೋಡಿ ಯಾರಾ ದರೂ ಹೆಣ್ಣು ಕೊಟ್ಟಾರೋ? ಅವನ ಲಗ್ನವಾದೀತೇ? ವೃತ್ತಿಕೆಯಿಂದಲೇ ಲಗ್ನವಾಗುತ್ತಿದ್ದ ಪಕ್ಷದಲ್ಲಿ ಹಿಂದು ಹಿಡಿಯಷ್ಟೇಕೆ, ದೊಡ್ಡದೊಂದು ಬುಟ್ಟಿತುಂಬ ಅವನೇ ತಂದು ಬಿಡುತ್ತಿದ್ದನಲ್ಲ? ಶ್ರೀಗಳವರನ್ನಾದರೂ ಯಾತಕ್ಕೆ ಬೇಡಬೇಕಾಗಿತ್ತು. ಅಂತೂ ಪರಿಚಾರಕನು ಮಾಡಿದ ಖಟಾ ಟೋಪವೆಲ್ಲವೂ ಶಶ ವಿಷಾಣ! ಆಕಾಶ ಪುಷ್ಪ!

ವಾಚಕವೃಂದ! ಇವೆಲ್ಲ ಚಂಚಲ ಚಿತ್ತರೂ-ಅಸ್ಥಿರ ಮನಸ್ಸಿನವರೂ ಆದ ನಮ್ಮಂಥವರ ವಿಚಾರಗಳು ನಮ್ಮಂಥ ಬಾಯಿಬಡುಕರ ಹಾಗೂ ಅವಿಶ್ವಾಸಿಗಳ ಬಲೆಯಲ್ಲಿ ನೀವು ಮಾತ್ರ ಬೀಳಬೇಡಿರಿ. ಹಾಗಾದರೆ ಕೇವಲ ವಿಶ್ವಾಸಿಕರಾದ ನೀವು ಈಗಲೇ ಆ ಪರಿಚಾರಕನ ಬೆನ್ನುಹತ್ತಿ ನಡೆ ಯಿರಿ. ಅಂದರೆ ವೃತ್ತಿಕೆಯ ಮಹಿಮೆಯು ಮುಂದೆ ತಾನೇ ನಿಮಗೆ ತಿಳಿದು ಬರುವದು.

ಲೋಕದಲ್ಲಿ ಯಾರ ಯಾರ ಭಕ್ತಿ ಭಾವವು ಹೇಗೆ ಹೇಗೆ ಇರು ವದೋ ಅದನ್ನಾರು ಬಲ್ಲರು! ಹಿಂದಕ್ಕೆ ಶ್ರೀವ್ಯಾಸರಾಯ ಸ್ವಾಮಿಗಳ ವರ ಹತ್ತರ ಹಿಬ್ಬ ಇಪ್ಪತ್ತೈದು-ಮೂವತ್ತು ವರ್ಷದ ಟೊಣಪ ಬ್ರಾಹ್ಮ ಣನು ಬಂದು ನನಗೆ ಜ್ಞಾನೋಪದೇಶ ಮಾಡಬೇಕೆಂದು ಬೇಡಿಕೊಳ್ಳಲು, ಸ್ವಾಮಿಗಳು ಆತನನ್ನು ನೋಡಿ:-'ಯಾಯಿ ಮಾಹಿಷ'(ಕೋಣಾ ಹೋಗು) ಎಂದು ನುಡಿದು ಬಿಟ್ಟರು. ಬ್ರಾಹ್ಮಣನು ಸಂಸ್ಕೃತದ ವಾರಿಯನ್ನೇ ಅರಿಯದವನಾದ ಕಾರಣ ಇದೇ ಗುರುಮಂತ್ರವೆಂದು ಭಾವಿಸಿಕೊಂಡು, ಅತೀವ ಪೂಜ್ಯ ಬುದ್ಧಿಯಿಂದ 'ಯಾಯಿ ಮಾಹಿಷ' ಎಂಬುದನ್ನೇ ಜಪಿ ಸುತ್ತ ಕುಳಿತುಕೊಂಡನು ಆಗ ಇವನ ಭಕ್ತಿಭಾವಕ್ಕೆ ಮೆಚ್ಚಿ ಸಾಕ್ಷಾತ್ ಯಮದೇವರ ವಾಹನವಾದ ಕೋಣವೇ ಇವನ ಹತ್ತರ ಬಂತು. ಅದನ್ನು ನೋಡಿ ಬ್ರಾಹ್ಮಣನು ವಿಸ್ಮಿತನಾಗಿ ಶ್ರೀವ್ಯಾಸರಾಯರಲ್ಲಿಗೆ ಬಂದು ಬಿಟ್ಟನು. ಕೋಣವೂ ಅವನ ಬೆನ್ನ ಬಿಡಲೇ ಇಲ್ಲ. ಸ್ವಾಮಿಗಳು ಈ ಅದ್ಭುತವನ್ನು ನೋಡಿ:-ಆಹಾ! ಈ ಬ್ರಾಹ್ಮಣನು ಏನು ಭಕ್ತಿವಂತನೋ! ಎಂಬದಾಗಿ ಸೋಜಿಗಪಟ್ಟು, ಆ ಕೋಣನಿಂದ ತಾವು ಕಟ್ಟಿಸಿದ ಕೆರೆಯ

ತುಂಬಿಗೆ ಅಡ್ಡವಾಗಿದ್ದ ದೊಡ್ಡದೊಂದು ಬಂಡೆಗಲ್ಲನ್ನು ಹಿಡಿಯಿಸಿಕೊಂಡು, ಅದಕ್ಕೆ ಅಪ್ಪಣೆಕೊಟ್ಟು ಬ್ರಾಹ್ಮಣನಿಗೆ ಜ್ಞಾನೋಪದೇಶ ಮಾಡಿದರಂತೆ. ಇದೂ ಹಾಗೆಯೇ.

ಮಹಾನುಭಾವರಾದ ಶ್ರೀದ ವಿಠ್ಠಲರು ಹೇಳಿದಂತೆ:—

"ವೃಂದಾವನಗತ ಮೃತ್ತಿಕೆ ಜಲ ಪಾನಾ | ಮುಕ್ತಿಗೆ ಸೋಪಾನಾ|
ಸಂದರ್ಶನ ಮಾತ್ರದಲಿ ಮಹತ್ಪಾಪ | ಪರಿದೋಡಿಸಲಾಪಾ |
ಮಂದ ಭಾಗ್ಯರಿಗೆ ದೊರೆಯದಿವರ ಸೇವಾ | ಶರಣರಸಂಜೀವಾ||"

ರಾಘವೇಂದ್ರ ಗುರು ರಾಯರ ಸೇವಿಸಿರೋ |
ಸೌಖ್ಯದಿ ಜೀವಿಸಿರೊ || ಪಲ್ಲ ||

ಮುಕ್ತಿಯನ್ನೇ ಕೊಡತಕ್ಕ ಸಾಮರ್ಥ್ಯವುಳ್ಳ ರಾಯರ ಮೃತ್ತಿಕೆ ಯಿಂದ ಕ್ಷುದ್ರಾದ್ರದಪಿ ಕ್ಷುದ್ರವಾದ ಐಹಿಕ ಸುಖ ಭೋಗಗಳು ದೊರೆ ಯುವದೇನಾಶ್ಚರ್ಯ? ನಮ್ಮಲ್ಲಿ ಅಂತಹ ದೃಢಚಿತ್ತವೂ ಭಕ್ತಿಭಾವವೂ ಮಾತ್ರ ಬೇಕು.

ಮೃತ್ತಿಕೆಯನ್ನು ಕೊಟ್ಟದ್ದೊಂದೇ ತಡ; ಪರಿಚಾರಕನು ಅದನ್ನು ಕಣ್ಣು-ಮೂಗಿಗೆ ಹಚ್ಚಿಕೊಂಡು ಕೂಡಲೆ ಶುಭ್ರವಾದದ್ದೊಂದು ಮಡಿಯ ವಸ್ತ್ರದಲ್ಲಿ ಕಟ್ಟಿ ತಲೆಯ ಮೇಲಿಟ್ಟುಕೊಂಡು ಗುರ್ವಾಶೀರ್ವಾದವನ್ನು ಹೊಂದಿ ನಡೆದನು ಅದೊಂದು ಅವನಿಗೆ ಭಂಗಾರದ ಘಟ್ಟಿ. ರತ್ನಾ ಲಂಕಾರ. ಗುರುಗಳು ಸಾವಿರಾರು ರೂಪಾಯಿಗಳನ್ನು ಕೊಟ್ಟಿದ್ದರೂ ಇಷ್ಟೊಂದು ಆನಂದವಾಗುತ್ತಿರಲಿಲ್ಲ ಅಮೃತೋಪ್ಯಧಿಕ ವಸ್ತುವಾಗಿ ಹೋಯಿತು ಪರಿಚಾರಕನು ಯಾವದೋ ಒಂದು ಹಳ್ಳಿಗೆ ಹೋಗಿ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಇಳಿದುಕೊಂಡನು. ಆ ಬ್ರಾಹ್ಮಣನ ಮನೆಗೆ ಪೂರ್ವ ಜನ್ಮಾರ್ಜಿತ ಕರ್ಮದಿಂದ ಬ್ರಹ್ಮರಾಕ್ಷಸವೊಂದು ಗಂಟುಬಿದ್ದು ಆತನಿಗೆ ಹುಟ್ಟಿದ ಮಕ್ಕಳನ್ನೆಲ್ಲ ನುಂಗಿ ನೀರುಕುಡಿಯುತ್ತಿತ್ತು. ಹೀಗೇವೇ ಆ ಬ್ರಾಹ್ಮಣನು ಏಳು ಮಕ್ಕಳನ್ನು ಕಳೆದುಕೊಂಡಿದ್ದನು. ಈಗ ಎಂಟನೇ ದನ್ನು ಕಳೆಮುಕೊಳ್ಳುವ ಸಮಯ. ಅಂದರೆ ಅ ಹೊತ್ತೇ ಆತನ ಹೆಂಡ ತಿಯು ಗಂಡುಮಗುವನ್ನು ಹೆತ್ತಿದ್ದಳು. ಏನಾದರೇನು? ದಂಪತಿಗಳಿಗೆ ದುರಂತವಾದ ಯೋಚನೆ. ಅಯ್ಯೋ! ಈ ರೀತಿ ಮಕ್ಕಳನ್ನು ಕೊಟ್ಟು ಕಸುಕೊಳ್ಳುವದಕ್ಕಿಂತ ಕೊಡುವದನ್ನೇ ಬಿಟ್ಟು ಬಿಟ್ಟದ್ದರೆ ಸುಖವಾಗಿರು

ತ್ತಿದ್ದೆವಲ್ಲ! ಇದ್ದರೂ ಮಕ್ಕಳಿಲ್ಲವೆಂಬುದೊಂದೇ ದುಃಖವಿರುತ್ತಿತ್ತು. ಇದನ್ನು ನೋಡಿದಿಯಾ! ಒಂಬತ್ತು ತಿಂಗಳು ಹೊಟ್ಟೆಯಲ್ಲಿಟ್ಟುಕೊಂಡು, ಸಹಿಸಲಾಗದ ಅನೇಕ ಸಂಕಟಗಳನ್ನು ಸಹಿಸಿ, ಕಡೆಗೆ ಪ್ರಸವವೇದನೆಯನ್ನು ತಾಳಿಕೊಂಡು ಮಕ್ಕಳ ಮುಖಾವಲೋಕನ ಮಾಡುವಷ್ಟರಲ್ಲಿಯೇ ನಮ್ಮ ಎದೆಗೆ ಕಲ್ಲು ಬಡಿದು ಪುತ್ರರನ್ನು ಪರಲೋಕಕ್ಕೆಳೆದೊಯ್ಯುವಿಯಲ್ಲ? ಇದೇ ನಿನ್ನ ನ್ಯಾಯವೇನು? ಆದದ್ದು ಆಗಿಹೋಯಿತು ಸಂತಾನಕ್ಕೆ ಇದೊಂದೇ ಒಂದು ಮಗುವನ್ನಾದರೂ ಕಾಪಾಡಬಾರದೇ? ನಿನಗೆ ಅನಂತಾನಂತ ವಂದನೆಗಳನ್ನು ಸಮರ್ಪಿಸುವೆವು —ಹೀಗೆಂದು ಮರ ಮರನೆ ಮರಗುತ್ತ ಕಣ್ಣೀರನ್ನು ಸುರಿಸುತ್ತಿದ್ದರು ಆದರೂ ಬ್ರಾಹ್ಮಣನು ಅತಿಥಿಯಾಗಿ ಮನೆಗೆ ಬಂದ ಪರಿಚಾರಕನನ್ನು ಅನಾದರಿಸದೆ, ಅತೀವ ವಿಶ್ವಾಸದಿಂದ ಉಪಚರಿಸಿದನು ಪರಿಚಾರಕನು ರಾತ್ರಿ ಊಟಮಾಡಿ ಆ ಬ್ರಾಹ್ಮಣನಿಗೆ ನಾಲ್ಕು ಸಮಾಧಾನದ ಮಾತುಗಳನ್ನು ಹೇಳುತ್ತ ಹೊರಗೆ ಹೊಸ್ತಿಲಕ್ಕೆ ತಲೆಗೊಟ್ಟು ಮಲಗಿದನು ನಡುರಾತ್ರಿಸಮಯಕ್ಕೆ ನಿಯಮಾನುಸಾರ ಬ್ರಹ್ಮರಾಕ್ಷಸವು ಬಂದುಬಿಟ್ಟಿತು ಮಾರ್ಗದಲ್ಲಿ ಪರಿಚಾರಕನು ಮೃತ್ತಿಕೆಯನ್ನು ತಲೆಗಿಂಬಿಗಿಟ್ಟುಕೊಂಡು ಗುರಿಕೆಹೊಡೆಯುತ್ತಿದ್ದನು. ಆಗ ಒಮ್ಮಿಂದೊಮ್ಮೆ ಬ್ರಹ್ಮರಾಕ್ಷಸಕ್ಕೆ ಏನಾಯಿತೋ ಏನೋ ದೊಡ್ಡ ದನಿಯಿಂದ ಚಿಟ್ಟನೇ ಚೀರಹತ್ತಿತು ಮಲಗಿದ್ದ ಪರಿಚಾರಕನು ಎಚ್ಚತ್ತು ನೋಡುತ್ತಾನೆ; ಎದುರಿಗೆ ಮೂಲೆಯಲ್ಲಿ ಬ್ರಹ್ಮರಾಕ್ಷಸವು! ಗಡಗಡನೆ ನಡಗುತ್ತ ನಿಂತುಕೊಂಡಿತ್ತು. ಆದರ ನಡುಗುವಿಕೆಯಿಂದಲೇ ಪರಿಚಾರಕನು ತುಸ ಧೈರ್ಯತಂದುಕೊಂಡು ಎದ್ದುನಿಂತನು ಆಗಂತೂ ಬ್ರಹ್ಮರಾಕ್ಷಸನ ಎದೆಯೊಡೆದುಹೋಯಿತು ಇನ್ನು ನಾನು ಬದುಕುವದಿಲ್ಲೆಂದೂ ತಿಳಿದುಕೊಂಡಿತು. ಆದರಿಂದ ಕೂಡಲೆ ಆತನಿಗೆ ನಮಸ್ಕರಿಸಿ:— ಮಹಾರಾಜಾ! ತಲೆಯಲ್ಲಿ ಕಿಚ್ಚನ್ನು ಧರಿಸಿಕೊಂಡು ಬಂದ ನೀನಾರು? ಮುಂದಕ್ಕೆ ಮಾತ್ರ ಬರಬೇಡ. ಬಂದರೆ ವ್ಯರ್ಥವಾಗಿ ನಾನು ಸುಟ್ಟು ಹೋಗುವೆನು. ಇಕೋ ನೀನು ಹೇಳಿದಂತೆ ಕೇಳುತ್ತಿದ್ದೇನೆ. ನನಗ ಜೀವ ದಾನಕೊಡು. ಬ್ರಹ್ಮರಾಕ್ಷಸನ ಈ ಮಾತುಗಳಿಂದ ಪರಿಚಾರಕನು ತಿಳಿದುಕೊಂಡನು. ಎಲಾ! ನಾನು ತಲೆಯ ಮೇಲೆ ಧರಿಸಿಕೊಂಡ ಮೃತ್ತಿಕೆಯಿಂದಲೇ ಈ ರಾಕ್ಷಸವು ಇಷ್ಟು ಹೆದರಿಕೊಂಡಿರುವದ್ದು. ಅಹಾ! ಗುರು

ರಾಜ ಸಾರ್ವಭೌಮಾ! ಏನು ನಿನ್ನ ಮಹಿಮೆಯಿದು? ಮೃತ್ತಿಕೆಯಲ್ಲಿಯೂ ನಿನ್ನಾ ದಿವ್ಯ ತೇಜಸ್ಸು ತುಂಬಿರುವದನ್ನು ಇಂದು ನಾನು ಮನಗಂಡೆನು. ಧನ್ಯನಾದೆನು. ಪುನೀತನಾದೆನು, ಎಂದು ಗುರುವರರನ್ನು ಕೊಂಡಾಡಿ, ಮೃತ್ತಿಕೆಯನ್ನು ಮೈಗೆಲ್ಲ ಲೇಪಿಸಿಕೊಳ್ಳಹತ್ತಿದನು. ಇದನ್ನು ನೋಡಿ ಬ್ರಹ್ಮರಾಕ್ಷಸನ ಕೈಕಾಲೇ ಹೋದವು ರಾವುಹೊಡೆದು ನಿಂತಿತು. ಇನ್ನೇನು ಉಪಾಯವನ್ನು ಕಾಣದೆ ತತ್ ಕ್ಷಣವೇ ಅದು ಹಿಂದು ಹೊನ್ನುತುಂಬಿದ ಕೊಡವನ್ನು ಪರಿಚಾರಕನ ಮುಂದೆ ಸುರುವಿ ಅಂಗಾಲಾಚಿ ಬೇಡಿಕೊಳ್ಳ ಹತ್ತಿತು. ಪರಿಚಾರಕನು ಹಣವನ್ನೆಲ್ಲ ತಕ್ಕೊಂಡು ಹಿಂದಿಷ್ಟು ಮೃತ್ತಿಕೆಯನ್ನು ಅದರ ಮೈಮೇಲೆ ಎಸೆದನು. ರಾಯರ ಮೃತ್ತಿಕೆಯ ಮಹಿಮೆಯು ಇನ್ನೆಂಥಾದ್ದೋ! ಅದರಲ್ಲಿ ಸಾಮರ್ಥ್ಯವೆಷ್ಟಿರುವದೋ ತಿಳಿಯದು. ಆಗಲೆ ಬ್ರಹ್ಮರಾಕ್ಷಸನ ರೂಪವು ಹೋಗಿ ದಿವ್ಯ ತೇಜಸ್ಸಿನಿಂದ ಅದು ಸ್ವರ್ಗಕ್ಕೆ ಹಾರಿತು.

ಬೆಳಗಾಗುತ್ತಲೇ ಮನೆಯ ಯಜಮಾನನು ಕೂಸಿನ ಹತ್ತರ ಹೋಗಿ ನೋಡಿದನು. ಅದು ಕಣ್ಣುತಕ್ಕೊಂಡು ಆಡುತ್ತಿರುವದನ್ನು ಹೆಂಡತಿಯು ತೋರಿಸಿದಳು. ಆಗ ಅವರಿಗಾದ ಆನಂದವನ್ನು ಹೇಳತೀರದು. ದೇವರು ಇದೊಂದು ಪುತ್ರರತ್ನವನ್ನು ಕರುಣಿಸಿ ಬಿಟ್ಟಿರುವನೆಂದು ತಿಳಿದುಕೊಂಡರು ಬಾಗಿಲ ತೆಗೆದು ಹೊರಗೆ ನೋಡುತ್ತಾರೆ! ಪರಿಚಾರಕನು ದುಡ್ಡಿನ ರಾಶಿಯನ್ನು ಹಾಕಿಕೊಂಡು ಕುಳಿತಿದ್ದನು. ಇದೇನು ಚಮತ್ಕಾರವೆಂದು ವಿಚಾರಿಸಲು, ಎಲ್ಲವೂ ಬೈಲಿಗೆ ಬಿತ್ತು. ಅಹಾ! ಶ್ರೀಗಳವರ ಮೃತ್ತಿಕೆಯ ಮಹಿಮೆಯಿಂದಲೇ ಇದು ನಮ್ಮ ಕೂಸು ಬದುಕಿತಲ್ಲದೆ ಈವರೆಗೆ ಮೃತ್ಯುಸ್ವರೂಪವಾಗಿದ್ದ ಬ್ರಹ್ಮರಾಕ್ಷಸನ ಕಾಟವೂ ತಪ್ಪಿಹೋಯಿತು. ಅಪ್ಪಾ! ಪರಿಚಾರಕ ಬ್ರಾಹ್ಮಣಾ! ಮುತ್ತು-ರತ್ನಗಳಿಗಿಂತಲೂ ಕಿಂಬಹುನಾ ಅಮೃತಕ್ಕಿಂತಲೂ ದುರ್ಲಭವಾದ ರಾಯರ ಮೃತ್ತಿಕೆಯನ್ನು ಸಂಪಾದಿಸಿದ ನಿನ್ನಂಥ ಪುಣ್ಯವಂತರಿನ್ನಾರು? ಇದೆಲ್ಲ ನಿನ್ನ ಪುಣ್ಯದಿಂದಲೇ ಉಂಟಾಗಿರುವದು ಇಗೋ ನಮ್ಮ ಅಣ್ಣನಮಗಳೊಬ್ಬ ಕನ್ಯೆಯಿರುವಳು. ಆಕೆಯನ್ನು ನಿನಗೆ ಕೊಟ್ಟು ವಿವಾಹವನ್ನು ಮಾಡುವೆವು. ನಮ್ಮ ಪ್ರಾರ್ಥನೆಯನ್ನು ಅಂಗೀಕರಿಸು, ಎಂದು ಬೇಡಿಕೊಂಡರು. ಪರಿಚಾರಕನ ಲಗ್ನವು ಆಗಿಹೋಯಿತು. ಅವನು ರಾಯರ ಮಹಿಮೆಯನ್ನು

ಹೊಗಳುತ್ತ ಅವರ ಸನ್ನಿಧಿಗೆ ಹೋಗಿ ಸಾಷ್ಟಾಂಗವಾಗಿ ವಂದಿಸಿ ಸರ್ವ ವೃತ್ತಾಂತವನ್ನು ನಿವೇದಿಸಿದನು. ಶ್ರೀಗಳವರು ಸಂತೋಷದಿಂದ:— ಅಪ್ಪಾ! ನಮ್ಮ ವೃತ್ತಿಕೆಯಲ್ಲೇನೂ ಮಹತ್ವವಿಲ್ಲ. ಮುಖ್ಯವಾಗಿ ನಿನ್ನಲ್ಲಿದ್ದ ಭಕ್ತಿ-ವಿಶ್ವಾಸಗಳೇ ಇದಕ್ಕೆಲ್ಲ ಕಾರಣವೆಂದು ತಿಳಿ, ಎಂದು ಆತನನ್ನು ಅನುಗ್ರಹಿಸಿ ಕಳುಹಿಸಿದರು. ಪರಿಚಾರಕನು ಕಡೆತನಕ ಹೆಂಡತಿಯಿಂದ ಕೂಡಿಕೊಂಡು ರಾಯರ ಸೇವೆಯನ್ನು ಮಾಡಿದನು.

ಮಾಹಾತ್ಮ್ಯರ ಮಾತೇನೋ ಕಥೆಯೇನೋ? ಅದನ್ನಾರು ಬಲ್ಲರು? ಅವರು ತೋರುವದಷ್ಟು ವಿಚಿತ್ರವೇ ಆಗಿರುವದು ಹಿಂದಕ್ಕೆ ಶ್ರೀಮದಾಚಾರ್ಯರು ತಮ್ಮ ತಂದೆಯು ಮಾಡಿದ ಸಾಲವನ್ನು ಕೇಳಬಂದ ಸಾವುಕಾರನಿಗೆ ಹುಣಸೇಬಕ್ಕಗಳನ್ನು ಕೊಟ್ಟು ಸಾಲವನ್ನು ತೀರಿಸಿದರಂತೆ. ಉಡುಪಿಯ ಹತ್ತರ ಇರುವ ಆಚಾರ್ಯರ ಸ್ಥಳದಲ್ಲಿ(ವಾಜರಕ್ಷೇತ್ರದಲ್ಲಿ) ಈ ಹುಣಸೇಬಕ್ಕಗಳನ್ನು ಎಣಿಸಿದ ಸ್ಥಳವನ್ನು ಇಂದಿಗೂ ತೋರಿಸುತ್ತಿರುವರು.

ಶೌಚಂ ನಿಮಜ್ಜನವಿಧಿಂ ಹರಿಪೂಜನಂ ವಾ ತದ್ಭಕ್ತಿ ಮಚ್ಯುತ
ಕಥಾಮಪಿ ತಾಂ ನಜಾನೆ ||
ತಸ್ಮಾದ್ವಿಭೀತ ಮನಸಃ ಕೃಪಯಾರ್ತಬಂಧೋ ಶ್ರೀರಾಘವೇಂದ್ರ
ಮಮದೇಹಿಕರಾವಲಂಬಂ ||
(ರಾಘವೇಂದ್ರ ಕರಾವಲಂಬನ ಸ್ತೋತ್ರ)

೬ನೆಯ ಕಥೆ.

## ನೀರಿನವನಿಗೆ ಮೋಕ್ಷ ಕೊಟ್ಟದ್ದು.

ಪ್ರಕಟಿಸಿ ತೋರಿದಿ ಮುಕುತಿಯ ಬೇಡಿದ |
ಭಕತನ ಯೋಗ್ಯತೆ ನಿಖಿಲ ಜನರಿಗೆ ||
ರಾಘವೇಂದ್ರರಾಜಿತ ಗುಣಸಾಂದ್ರಾ ||
(ಜಗನ್ನಾಥ ದಾಸರು.)

ಮೈಸೂರ ಸೀಮೆಯಲ್ಲಿ ಚಿತ್ರಕಲ್‌ದುರ್ಗವೆಂಬುದೊಂದು ಊರುಂ

ಟು. ಅಲ್ಲಿ ಒಂದು ರಾಯರ ಮಠವೂ ಇದೆ. ಅದೇ ಊರ ವೆಂಕಣಭಟ್ಟ ನೆಂಬ ನೀರಿನವನೊಬ್ಬನು ರಾಯರ ಸೇವೆಯನ್ನು ಏಕನಿಷ್ಠೆಯಿಂದ ಮಾಡುತ್ತ ಅವರ ಸಂಗಡಲೇ ಬೆನ್ನು ಹತ್ತಿದ್ದನು. ರಾಯರು ಆತನ ಭಕ್ತಿಯುಕ್ತವಾದ ಸೇವೆಗೆ ಮೆಚ್ಚಿ ಒಂದಾನೊಂದು ದಿವಸ ಸುಖಸಲ್ಲಾಪ ದಲ್ಲಿದ್ದಾಗ:—ವೆಂಕಣ್ಣಾ ನಿನಗೆ ಏನು ಬೇಕು? ಯಾವ ಅಪೇಕ್ಷೆಯಿಂದ ನಮ್ಮನ್ನಿಷ್ಟು ಸೇವಿಸುತ್ತೀ? ಎಂದು ಕೇಳಿದರು. ಅದಕ್ಕೆ ವೆಂಕಣ್ಣನು ಎದ್ದು ನಿಂತು ಕೈಜೋಡಿಸಿಕೊಂಡು:—ಸ್ವಾಮೀ! ಗುರುಗಳೇ ! ಐಹಿಕ ಸುಖೋಪಭೋಗಗಳಲ್ಲಿ ಯಾವುದೊಂದರ ಆಶೆಯನ್ನೂ ನಾನು ಮಾಡಿದವ ನಲ್ಲ. ನನಗೆ ಬೇಕಾದದ್ದು ಮುಕ್ತಿ. ದಯಮಾಡಿ ಅದನ್ನು ನನಗೆ ಕೊಡಬೇಕು, ಎಂದು ಬೇಡಿಕೊಂಡನು. ರಾಯರು ನಕ್ಕರು. ಎಲಾ ನೀರಿನವನಾದ ನಿನಗೆ ಮುಕ್ತಿಯ ಅಪೇಕ್ಷೆಯಾಯಿತೇನೋ? ಮುಕ್ತಿಯೆಂ ದರೆ ಏನೆಂದು ತಿಳಿದಿರುವಿ? ಅದೊಂದು ಹಣ್ಣು ಹಂಪಲವಲ್ಲ ಹೊಲ ಮನೆಯಲ್ಲ

> ಪಾಪ ಕೋಪವ ಬಿಡಬೇಕು | ಸದಾ |
> ಗೋಪಾಲ ಕೃಷ್ಣನ ಸ್ಮರಿಸಬೇಕು ||
> ತಾಪಕಂಜದೆ ಇರಬೇಕು | ಭವ |
> ಕೂಪ ದಾಟಿಸುವ ಗುರುವ ನಂಬಬೇಕು ||
> ಸುಮ್ಮನೆ ಬಾಹೋದೆ ಮುಕ್ತಿ ||
>
> (ಪುರಂದರ ದಾಸರು.)

ಎಂಬಂತೆ ಅದರ ಸಾಧನವು ಬಹು ಕಠಿಣವಾದದ್ದು. ಯಾವ ಸಾಧನ ವನ್ನೂ ಮಾಡಿಕೊಳ್ಳದೆ ಹಿರಿಯರಾದ ಯೋಗಿಗಳಿಗೂ ದುರ್ಲಭವಾದ ಮೋಕ್ಷ ಸಾಮ್ರಾಜ್ಯವನ್ನು ಬಯಸಿದರೆ ನಿನಗೆ ಅದು ಹೇಗೆ ಬಂದೀತು? ಎಂಬದಾಗಿ ಹೀಗಳೆದು ಸಿಟ್ಟು ಮಾಡಿದರು. ವೆಂಕಣ್ಣನು ಗುರುಗಳಿಗೆ ಎದುರು ಮಾತಾಡದೆ ಸುಮ್ಮನಾದನು. ಆ ಮಾತಿಗೆ ಕೆಲವು ದಿವಸ ಕಳೆಯಿತು. ರಾಯರು ಚಿತ್ರಕಲ್‍ದುರ್ಗಕ್ಕೆ ಬಂದರು. ಆಗ ಆಷಾಢ ಮಾಸ. ಚಾತು ರ್ಮಾಸ್ಯಕ್ಕೆ ಕೂಡತಕ್ಕ ಸಮಯ. ರಾಯರು ಮತ್ತೊಮ್ಮೆ ವೆಂಕಣ್ಣನನ್ನು ಕೇಳಿದರು:—'ವೆಂಕಣ್ಣಾ! ನಿನ್ನ ಸೇವೆಯಿಂದ ತೃಪ್ತರಾಗಿರುವೆವು. ನಿನಗೆ ಏನಾದರೂ ಬೇಕಾಗಿದ್ದರೆ ಹೇಳು'. ವೆಂಕಣ್ಣನು ಮೊದಲಿನಂತೆಯೇ

ಬೇಡಿಕೊಂಡನು. ರಾಯರು ಮತ್ತೂ ಆತನಿಗೆ ತಿಳಿ ಹೇಳಿ, ಛೀ ಹಾಕಿದರು. ಮುಂದೆ ಮೂರು ನಾಲ್ಕು ತಿಂಗಳು ಹೋದವು. ಕಾರ್ತಿಕ ಶುದ್ಧ ದ್ವಾದಶಿಯ ದಿವಸ ಶ್ರೀಗಳವರು ಮತ್ತೊಮ್ಮೆ ವೆಂಕಣ್ಣನನ್ನು ಅದೇ ಪ್ರಶ್ನೆ ಕೇಳಿದರು. ವೆಂಕಣ್ಣನಲ್ಲಿ ಬದಲು ಮಾತೇ ಇಲ್ಲ, ಮೋಕ್ಷವನ್ನೇ ಕೇಳಿಕೊಂಡನು. ಅವರಿಗೆ ಆಶ್ಚರ್ಯವಾಯಿತು. ನೀನು ಇಂದೇ ಮೋಕ್ಷಕ್ಕೆ ಹೋಗಲು ಸಿದ್ಧನಾಗಿರುವಿಯಾ? ಎಂದರು. ವೆಂಕಣ್ಣನು ಅತೀವ ಆನಂದದಿಂದ:—ಸ್ವಾಮೀ! ಈಗಲೇ ಸಿದ್ಧನಿರುವೆನೆಂದನು ಶ್ರೀಗಳವರು ಜ್ಞಾನದೃಷ್ಟಿಯಿಂದ ನೋಡಿ ಇವನು ಮೋಕ್ಷಕ್ಕೆ ಯೋಗ್ಯನೇ ಇರುವನೆಂದು ತಿಳಿದು:—ಹಾಗಾದರೆ ಮೋಕ್ಷವನ್ನು ಕೊಟ್ಟೆವು; ನಡಿಯೆಂದು ಹೇಳಿದರು. ಚಿತೆಯು ಸಿದ್ಧವಾಯಿತು. ವೆಂಕಣ್ಣನಿಗೆ ಯಾವ ಆಶೆಯೂ ಇಲ್ಲ. ಯಾತರ ಅಂಜಿಕೆಯೂ ಇಲ್ಲ. ತತ್‌ಕ್ಷಣ ಚಿತೆಯ ಮೇಲೆ ಹೋಗಿ ಮಲಗಿದನು. ಇನ್ನೇನು? ಅಗ್ನಿದೇವನು ತನ್ನ ಕ್ರೂರವಾದ ಏಳು ನಾಲಿಗೆಗಳನ್ನೂ ಹೊರಗೆ ಚಾಚಿ ಆಹಾರವನ್ನು ಸವರ ಹತ್ತಿದನು. ಆಗಲೂ ಶ್ರೀಗಳವರು ಮೋಕ್ಷವು ಸುಲಭಸಾಧ್ಯವಾದದ್ದಲ್ಲ. ನಿನಗೆ ಮತ್ತೇನಾದರೂ ಅಪೇಕ್ಷೆಯಿದ್ದರೆ ಹೇಳು. ಈಗಲೇ ಕೊಡುವೆವೆಂದು ವೆಂಕಣ್ಣನನ್ನು ಮಾತಾಡಿಸಿದರು. ಏನಾದರೇನು? ಆತನು ತನ್ನ ಮುಂಚಿನ ಮಾತಿನಲ್ಲಿ ಚಾ-ಚೂ ತಪ್ಪಲಿಲ್ಲ ಅಂಥಾ ಸಮಯದಲ್ಲಾದರೂ ಮೋಕ್ಷವನ್ನೇ ಕೇಳಿಕೊಂಡನು. ತಥಾಸ್ತು ಅಂದರು. †

---

† ರಾಯರಿಗೆ ಮೋಕ್ಷ ಕೊಡುವ ಅಧಿಕಾರ ಉಂಟೇ ಹೇಗೆಂಬದಾಗಿ ವಾಚಕರು ಸಂಶಯ ತಕ್ಕೊಳ್ಳಬಹುದು. ಆದರೆ ———

"ವಿಷ್ಣುರ್ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ" ||

ಎಂಬಂತೆ—ವಾಯುದೇವರಿಗೂ ವಿಷ್ಣುವಿನ ಆಜ್ಞೆಯಿಂದ ಮೋಕ್ಷ ಕೊಡುವ ಅಧಿಕಾರವುಂಟು. ಆದರಿಂದ ವಾಯ್ವಂಶರಾದ ರಾಯರಿಗೂ ಈ ಅಧಿಕಾರವುಂಟೆಂದು ತಿಳಿಯಬೇಕು. ಇನ್ನು ರಾಯರು ವಾಯ್ವಂಶರೆಂಬುದು

ಹಿರಣ್ಯಕಶಿಪೋಃ ಪುತ್ರಃ ಪ್ರಲ್ಹಾದೋ ಭಗವತ್ಪರಃ ||
ವಾಯುನಾಚ ಸಮಾವಿಷ್ಟಃ ಮಹಾಬಲ ಸಮನ್ವಿತಃ ||

ಇದರಿಂದ ತಿಳಿಯಬರುವದು. ಅಲ್ಲದೆ—ಕೇವಲ ಅಪರೋಕ್ಷ ಜ್ಞಾನಿಗಳಾದ ಶ್ರೀಪ್ರಾಣೇಶ ವಿಠ್ಠಲ ದಾಸರೂ ಕೂಡ ತಮ್ಮದೊಂದು ಪದ್ಯದಲ್ಲಿ——

ಕೂಡಲೆ ವೈಕುಂಠ ಲೋಕದಿಂದ ವಿಮಾನವು ಬಂತು. ವಿಷ್ಣು ದೂತರು ಅವನನ್ನು ಚಿತೆಯಿಂದೆಳೆದು ವಿಮಾನದಲ್ಲಿ ಕೂಡ್ರಿಸಿಕೊಂಡು ಹೋದರು. ವೆಂಕಣ್ಣನು ಶ್ರೀಗಳವರಿಗೆ ವಂದಿಸಿ:—ಹೋಗಿ ಬರುತ್ತೇನೆ; ಅಪ್ಪಣೆ ಕೊಡಬೇಕೆಂದು ಬೇಡಿಕೊಂಡು ವಿಮಾನಕ್ಕೆ ಕಟ್ಟಿದ ಗಂಟೆಯನ್ನು ಬಾರಿಸಿದನು. ನಿಮಿಷಾರ್ಧದಲ್ಲಿ ವಿಮಾನವು ಹಾರಿ ಹೋಯಿತು. ನೆರೆದವರೆಲ್ಲರೂ ಗಂಟೆಯ ಶಬ್ದವನ್ನು ಕೇಳಿ ಆಶ್ಚರ್ಯಗೊಂಡರು. ಸ್ವಾಮಿಗಳವರು:—ಚಿತೆಯಲ್ಲಿ ಅಸ್ಥಿಗಳನ್ನು ನೋಡಿ ಬನ್ನಿರೆನಲು, ಹೋಗಿ ನೋಡುತ್ತಾರೆ! ಒಂದಾದರೂ ಅಸ್ಥಿ ಇಲ್ಲ. ಆಗ ಗುರುಗಳು ವೆಂಕಣ್ಣನ ಯೋಗ್ಯತೆಯನ್ನೂ ಅವನು ಮೋಕ್ಷಕ್ಕೆ ಹೋದ ಸಂಗತಿಯನ್ನೂ ಸವಿಸ್ತಾರವಾಗಿ ವಿವರಿಸಿ ಹೇಳಿದರು. ಕೂಡಲೆ ಎಲ್ಲ ಕಡೆಗೂ ಗುರುಗಳ ಜಯ ಜಯಕಾರ ಧ್ವನಿಯು ತುಂಬಿ ಹೋಯಿತು. ನೋಡಿದಿರಾ, ನೀರಿನವನ ಯೋಗ್ಯತೆಯನ್ನು! ಆತನು ಮನುಷ್ಯಜನ್ಮಕ್ಕೆ ಬಂದದ್ದು ಇಂದಿಗೆ ಸಾರ್ಥಕವಾಯಿತು.

ಪರಮಾತ್ಮನು ನಮಗೆ ಮನುಷ್ಯ ಜನ್ಮವನ್ನು ಕೊಟ್ಟು ವಿಚಿತ್ರವಾದ ದೇಹ ಸಂಪತ್ತನ್ನೂ ಅಗಾಧವಾದ ಬುದ್ಧಿ ಸಾಮರ್ಥ್ಯವನ್ನೂ ದಯಪಾಲಿಸಿದನೇತಕ್ಕೆ? 'ಆಹಾರ ನಿದ್ರಾ ಭಯ——— 'ಎಂಬಂತೆ ಆಹಾರ ವಿಹಾರಾದಿಗಳಲ್ಲಿಯೇ ಆಸಕ್ತರಾಗಿ ಕೇವಲ ಪಶುಗಳಂತೆ ಬಾಳಬೇಕೆಂಬುದಕ್ಕಲ್ಲ. ಆತನ ಪಾದಾರವಿಂದವನ್ನು ಭಜಿಸಿ ಪರಮ ಪುರುಷಾರ್ಥವಾದ ಮೋಕ್ಷವನ್ನು ಹೊಂದಬೇಕೆಂಬುದೇ ಆಗಿರುವದು. ಇಂಥಾ ಮೋಕ್ಷವನ್ನು ಸಂಪಾದಿಸಲು ಅತ್ಯಂತ ಸುಲಭವಾದ ದಾರಿಯಾವುದೆಂಬುದನ್ನು ಶ್ರೀವೇದವ್ಯಾಸ ಋಷಿಗಳು ಹೀಗೆ ಹೇಳಿರುವರು:—

"ಮಹತ್ಸೇವಾಂ ದ್ವಾರಮಾಹುರ್ವಿಮುಕ್ತೇ ಸ್ತಮೋದ್ವಾರಂ |
ಯೋಷಿತಾಂ ಸಂಗಿ ಸಂಗಂ"||
(ಭಾಗವತ.)

ಆದ್ದರಿಂದ—ಮಹಾತ್ಮರಾದವರ, ಸತ್ಪುರುಷರಾದವರ ಸೇವೆಯನ್ನುಮಾಡಿ ಧನ್ಯರಾಗೋಣ! ಅವರ ಸ್ತೋತ್ರಮಾಡಿ ಪುನೀತರಾಗೋಣ!

---

ಪವನಾಂಶರಿವರು ಕವಲಿಲ್ಲಖ್ಯಾತರಾಗಿ | ಅವನಿಯು ಸುರರಿಂದರ್ಚನೆ ಗೊಂಬುವರು ||
|| ಸಂಪ್ರಿ || ಹೀಗೆ ಸ್ತು ಸಿದ್ದಾಗಿ.

ಶ್ರೀಭೂಮ್ಯಬ್ಜ ಭವಾರ್ಚಿತಂ ಯದುಪತೇಃ ಪಾದಾಂಬುಜಂಪಾವನಂ|
ಭಕ್ತಾನಂದ ಮತಿಪ್ರದಂ ಭವನುತಂ ಭಕ್ತಿಪ್ರದಂ ಮುಕ್ತಿದಂ ||
ಚಿತ್ತೇನೋಷಸಿ ಸಂತತಂ ಕೃತ ಮುಖ ಪ್ರಕ್ಷಾಲನಾದಿಃ ಸ್ಮರಂ |
ಸ್ತುತ್ಯೋಮೇ ಗುರು ರಾಘವೇಂದ್ರ ಯತಿರಾಡ್ವಿದ್ಯಾದಲಂ ಮಂಗಲಂ||
(ರಾಘವೇಂದ್ರಾಷ್ಟಕ)

ಈ ವಿಷಯವಾಗಿ ಶ್ರೀ ಜಗನ್ನಾಥದಾಸರ ಶಿಷ್ಯರಾದ ಪ್ರಾಣೇಶ ವಿಠ್ಠಲದಾಸರು ತಾವು ಮಾಡಿದ ಸುಪ್ರಾಲೆಯಲ್ಲಿ ಹೀಗೆಅಂದಿರುತ್ತಾರೆ:—

ಹಿಂದೆ ಮಾಡಿದ ದುಷ್ಕರ್ಮ ತೀರಬಂದುದನು ನೋಡಿ |
ಬಂದಾಕ್ಷಣದಲ್ಲಿ ಅವನ ವಿಚಾರಿಸಿ || ಸುಪ್ರಿ ||
ಇಂದಿರೇಶನ ಕಾರುಣ್ಯಬಲದಿಂದೆ ಜನನೋಡೆ|
ಸಂದೇಹವಿಲ್ಲದೆ ಸುಲೋಕವ ನಿತ್ತರು|| ಸುಪ್ರಿ ||
ಸುಪ್ರಿ ಸುಪ್ರಾಲೆ| ಸುಪ್ರಿ ಸಾಧ್ವಿಯರು ರಾಘವೇಂದ್ರರ ಪಾಡಿ|| ಸುಪ್ರಿ||

ಇದಲ್ಲದೆ ಮಂಚಾಲಿಯ ದಾಸಾಚಾರ್ಯರೂ ಕೂಡ:—

ಭಕುತಿಯಿಂದಲಿ ಬಂದನೋರ್ವನು |
ಭಕತನಾನೆಂದೆನುತ ಭೂಸುರ |
ನಿಖಿಲ ಜನ ನೋಡುತಿರೆ ಬೇಡಿದ ಮುಕುತಿ ಕೊಡು ಎಂದು ||
ಸಕಲ ಜನರಿಗೆ ಭಕತನ್ಯೋಗ್ಯತೆ |
ಪ್ರಕಟಿಸುತ ಪ್ರೇಮದಲಿ ಆತಗೆ|
ಮುಕುತಿ ನೀಡಿದ ಮಹ ಮಹಿಮ ಸಕಲೇಷ್ಟಪ್ರದಾಯಕನು ||

ಈ ರೀತಿ ವರ್ಣಿಸಿರುತ್ತಾರೆ.

೨೧ನೆಯ ಕಥೆ

## ರತ್ನಮಾಲಿಕೆಯನ್ನು ಅಗ್ನಿಕುಂಡದಲ್ಲಿಟ್ಟು ರಕ್ಷಿಸಿದ್ದು



ಹುತವಹ ಗುಣಿಸಿದ ರತುನ ಮಾಲಿಕೆಯ | ಕ್ಷಿತಿಪಗೆ ತಂದಿತ್ತ ತುಳ ಮಹಿಮನೆ||

ರಾಘವೇಂದ್ರರಾಜಿತ ಗುಣಸಾಂದ್ರಾ||

(ಜಗನ್ನಾಥದಾಸರು)

ಶ್ರೀಗಳವರ ಖ್ಯಾತಿಯು ದಿನದಿನಕ್ಕೆ ಬೆಳೆಯಹತ್ತಿ ಅನೇಕರು ಇವರಿಗೆ ಶಿಷ್ಯರಾದರು. ಒಮ್ಮೆ ವಿಜಾಪುರದ ಬಾದಶಹನು ಇವರ ಮಹಿಮೆಗಳನ್ನು ನೋಡಿ ಆಶ್ಚರ್ಯಪಟ್ಟು ಪೂಜ್ಯಬುದ್ಧಿಯಿಂದ ಅತ್ಯಂತ ಬೆಲೆಯುಳ್ಳ ರತ್ನಮಾಲಿಕೆಯೊಂದನ್ನು ಕಾಣಿಕೆಯಾಗಿ ಕೊಟ್ಟುಹೋದನು. ಲೌಕಿಕದೃಷ್ಟಿಯಿಂದ ಇದು ಎಷ್ಟೋ ಬೆಲೆಯುಳ್ಳದ್ದಾದರೂ ಪಾರಮಾರ್ಥಿಕ ದೃಷ್ಟಿಯಿಂದ ಒಂದು ಮಣ್ಣುಹೆಂಟೆಗೂ ಕಡೆಯೇ ಸರಿ. ಸ್ವಾಮಿಗಳವರು ಅದನ್ನು ತಕ್ಕೊಂಡು ಅಗ್ನಿಕುಂಡದಲ್ಲಿ ಚಲ್ಲಿಬಿಟ್ಟರು! ಮಹಾತ್ಮರ ಕೃತಿಗಳು ಮಹಾತ್ಮರಿಗೇ ತಿಳಿಯುವವಲ್ಲದೆ ನಮ್ಮಂಥ ಪಾಮರರಿಗೆ ತಿಳಿಯಬಲ್ಲವೇ? ಸ್ವಾಮಿಗಳವರ ಈ ಕೃತಿಯನ್ನು ನೋಡಿ ಎಷ್ಟೋ ಜನರಿಗೆ ಪಶ್ಚಾತ್ತಾಪವೆನಿಸಿತು. ಪೂರ್ವದಲ್ಲಿ ಸೀತಾದೇವಿಯು ರತ್ನದುಂಗುರವೊಂದನ್ನು ಹನುಮಂತನಿಗೆ ಕೊಡಲು ಆತನು ಅದನ್ನು ಹಲ್ಲಿನಿಂದ ಕಡಿದು ನೋಡಿ ಸಮುದ್ರದಲ್ಲಿ ಬಿಸಾಟಬಿಟ್ಟನಂತೆ! ಶ್ರೀಗಳವರು ಮಾಡಿದ್ದೂ ಇದೇ ರೀತಿಯಾಯಿತೆಂದು ಮನದಲ್ಲಿಯೇ ಮರಮರನೆ ಮರುಗಿದರು. ಬರಬರುತ್ತ ಮೂರು ನಾಲ್ಕು ದಿವಸಗಳಲ್ಲಿ ನಾ ಕೇಳು-ನೀ ಕೇಳು ಎನ್ನುತ್ತ ಬಾದಶಹನ ಕಿವಿಗೂ ಈ ಸುದ್ದಿಯು ಮುಟ್ಟಿತು. ಆತನು ಕೋಪಾವಿಷ್ಟನಾದನು. ಅಮೌಲ್ಯವಾದ ರತ್ನಮಾಲಿಕೆಯನ್ನು ಅನ್ಯಾಯವಾಗಿ ಹಾಳುಮಾಡಿದಂತಾಯಿತಲ್ಲ? ಎಂದು ಬಹಳ ವ್ಯಸನಪಟ್ಟನು. ಶ್ರೀಗಳವರಲ್ಲಿದ್ದ ಮೊದಲಿನ ಪೂಜ್ಯ ಬುದ್ಧಿಯು ಕ್ಷಣಾರ್ಧದಲ್ಲಿ ಹಾರಿಹೋಯಿತು. ಈ ಚಿತ್ತಚಾಂಚಲ್ಯದೋಷವೇ ಲೌಕಿಕರನ್ನು ಕೆಡಿಸುವದಲ್ಲವೇ? ಲೌಕಿಕರಾದ ನಾವು ನಮ್ಮ ಇಚ್ಛೆಯಂತೆ ಫಲವಾದಾಗಮಾತ್ರವೇ ದೇವರನ್ನಿಷ್ಟು ಕೊಂಡಾಡುತ್ತೇವೆ.

ಇಲ್ಲದೆ ಹೋದಲ್ಲಿ ದೇವರನ್ನು ನಿಂದಿಸುವದಕ್ಕೂ ಹಿಂದುಮುಂದು ನೋಡು ವದಿಲ್ಲ. ಮಹಾತ್ಮರ ಮಾತು ಬೇರೆ. "ಕರ್ಮಣ್ಯೇ ವಾಧಿಕಾರಸ್ತೆ ಮಾ ಫಲೇಷು ಕದಾಚನ|" ಎಂಬ ಭಗವದುಕ್ತಿಗನುಸಾರವಾಗಿ ಯಾವ ಫಲಾ ಪೇಕ್ಷೆಯನ್ನೂ ಮಾಡದೆ ಕೇವಲ ನಿಷ್ಕಾಮ ಕರ್ಮಾಸಕ್ತರಾಗಿರುವರು. ಅಂತೆಯೇ ಅವರಿಗೆ ಅಂಜಿಕೆ ಸಹ ಇಲ್ಲ. ಹಿಬ್ಬಾನೊಬ್ಬ ದಾಸರು ದೇವರಿಗೆ ಯಾವ ರೀತಿ ಅಂದಿರುತ್ತಾರೆ ನೋಡಿರಿ:—

ಸೃಷ್ಟಿಗೊಡೆಯ ಕೇಳೊ ಎಷ್ಟು ನಾ ನುತಿಸಲು| ದೃಷ್ಟಿಯಿಂದಲಿ ಎನ್ನ ಕಡೆಯು ನೋಡಲು ವಲ್ಲಿ| ಅಷ್ಟ ಸೌಭಾಗ್ಯವೆಂಬ ಎಷ್ಟು ಮದವೋ ನಿನಗೆ| ಘಟ್ಯಾಗಿ ನೀನಲ್ಲದನ್ಯರಿಲ್ಲವೆಂದರೆ| ಸೊಟ್ಟ ತಿರುಹಿ ಮೊಗ ಅಟ್ಟವೇರುತಲಿದೆ| ಎಷ್ಟಿಲ್ಲಾವೆಂದು ಎನ್ನ ಬಿಟ್ಟರಂಜು ವನಲ್ಲಾ| ಘಟ್ಟ ಭಕುತಿಪಾಶದಲಿ ಕಟ್ಟಿ ಎನ್ನುದರದೊಳಿಟ್ಟುಕೊಂ ಬುವೆನೊ ಜಿಷ್ಣುಸಖನೆ ಕೃಷ್ಣ||

(ಗೋಪಾಲದಾಸರು)

ಇಂತಹ ದೃಢಚಿತ್ತರಾಗುವದು ಸಾಮಾನ್ಯವಾದ ಮಾತಲ್ಲ. ಬಾದ ಶಹನೂ ಇದೇ ಕೋಟಿಯಲ್ಲಿ ಒಬ್ಬನಾಗಿದ್ದನು. ಅವನಿಗೆ ಮೊದಮೊದಲು ಶ್ರೀಗಳವರಲ್ಲಿ ಎಷ್ಟು ವಿಶ್ವಾಸವಿತ್ತೋ ಈಗ ಅಷ್ಟು ಅವಿಶ್ವಾಸವುಂಟಾ ಯಿತು. ಆದರೂ ತಟ್ಟನೆ ಶ್ರೀಗಳವರನ್ನು ಕೇಳುವಷ್ಟು ಮಾನಸಿಕ ಧೈರ್ಯವು ಅವನಿಗಾಗಲಿಲ್ಲ. ಆಗ ಆತನು ವಿನಯುವುಳ್ಳವನಂತೆ ನಟಿಸುತ್ತ:— "ಸ್ವಾಮೀ! ಈ ಮೊದಲು ತಮ್ಮ ಕೈಯಲ್ಲಿ ಕೊಟ್ಟ ರತ್ನಾಹಾರದಂಥ ಇನ್ನೊಂದು ಹಾರವನ್ನು ಮಾಡಿಸಬೇಕಾಗಿದೆ ಕಾರಣ ಅದನ್ನಿಷ್ಟು ನೋಡ ಲಿಕ್ಕೆ ಕೊಡೋಣಾಗಬೇಕು." ಎಂದು ಬೇಡಿಕೊಂಡನು. ಬಾದಶಹನ ಮಾತಿನ ಮೇಲಿಂದಲೇ ಶ್ರೀಗಳವರು ಆತನ ಅಂತರ್ಯವನ್ನು ಊಹಿಸಿ ಬಿಟ್ಟರು. ಈತನು ಹಾರವನ್ನು ನಿಜವಾಗಿ ಬೇಡಲಿಕ್ಕೆ ಬರದೆ, ನಾವು ಅಗ್ನಿಕುಂಡದಲ್ಲಿ ಚಲ್ಲಿದ್ದನ್ನು ಕೇಳಿ ಈ ನೆವವನ್ನು ಹೂಡಿರುತ್ತಾನೆಂದು ಅವರು ತರ್ಕಿಸಿದರು; ಆದರೆ ಇದರಿಂದ ಅವರಿಗೆ ಸಿಟ್ಟುಬರಲಿಲ್ಲ. ನಗೆಯು ಬಂದಿತು. ಲೌಕಿಕರ ಮಾತು ಮೊದಲೇ ಅವರಿಗೆ ಗೊತ್ತು. ಅದರಿಂದ ಅವರು ಮುಗುಳ್ನಗೆ ನಗುತ್ತ ಅಗ್ನ್ಯಂತರ್ಯಾಮಿಯಾದ ಪರಶುರಾಮದೇ ವರನ್ನು ಧ್ಯಾನಿಸಿ ಅಗ್ನಿಕುಂಡದಿಂದ ರತ್ನಮಾಲಿಕೆಯನ್ನು ತೆಗೆದು ಆತನ

ಕೈಗೆ ಕೊಟ್ಟರು; ಬಾದಶಹನು ನೋಡಿದನು. ಮಾಲಿಕೆಯು ಥಳ ಥಳ ಹೊಳೆಯುತ್ತಲಿತ್ತು. ಸ್ವಲ್ಪವಾದರೂ ಕುಂದಿಲ್ಲ. ಮಾಸಿಲ್ಲ. ಇಷ್ಟೇ ಅಲ್ಲ; ಮೊದಲಿನಕಿಂತಲೂ ಹೆಚ್ಚಾದ ತೇಜವುಂಟಾಗಿದೆ. ಬಾದಶಹ ನೀಗ ಇದ್ದವನೂ ಅಲ್ಲ; ಸತ್ತವನೂ ಅಲ್ಲ. ನಿಶ್ಚೇಷ್ಟಿತನಾಗಿ ನಿಂತು ಬಿಟ್ಟನು. ಶ್ರೀಗಳವರಲ್ಲಿ ಎಂಥಾ ಭಯಂಕರ ದ್ರೋಹಮಾಡಿದೆನಲ್ಲಾ: ಎಂದು ಗಾಬರಿಯಾದನು. ಮಾತಾಡಲಿಕ್ಕೆ ಬಾಯಿ ಬರಲೊಲ್ಲದು. ಕಡೆಗೆ ಗುರುಗಳಿಗೆ ಸಾಷ್ಟಾಂಗ ಹಾಕಿ ಚಂಚಲ ಚಿತ್ತನಾದ ತನ್ನನ್ನು ಕ್ಷಮಿಸಬೇಕೆಂದು ಬೇಡಿಕೊಂಡನು. ಇದನ್ನೆಲ್ಲ ನೋಡಿದ ಜನರಂತೂ ಗುರು ಮಾಹಾತ್ಮ್ಯವನ್ನು ಪರಿಪರಿಯಿಂದಕೊಂಡಾಡಿದರು. ಶ್ರೀಗಳವರುಬಾದಶಹ ನನ್ನು ಸಮಾಧಾನದ ಮಾತುಗಳಿಂದ ಉಪದೇಶಿಸಿ ಆತನ ಬಲಾತ್ಕಾರ ದಿಂದ ಪುನಃ ಆ ಮಾಲಿಕೆಯನ್ನು ಸ್ವೀಕರಿಸಿದರು. ಬಾದಶಹನಾಗ ಸಂ ತುಷ್ಟನಾದನು. ಆನಂದಿತನಾದನು. ಗುರ್ವಾಶೀರ್ವಾದವನ್ನು ಹೊಂದಿದನು.

ಮಹನೀಯರಾದವರು ಯಾವ ಯಾವ ಕಾಲದಲ್ಲಿ ಏನೇನು ಲೀಲೆಗಳನ್ನು ತೋರಿಸುತ್ತಾರೋ ತಿಳಿಯದು.

ಹಿಂದಕ್ಕೆ ಒಬ್ಬ ಸತ್ಪುರುಷರು ಕೆಂಪಗೆ ಕಾದ ಕಬ್ಬಿಣದ ರಸವನ್ನೇ ಕುಡಿದು ಬಿಟ್ಟರಂತೆ!

ಹೆಳವನಕಟ್ಟೆ ಗಿರಿಯಮ್ಮನೆಂಬ ಸಾಧ್ವಿಯಾದ ಹೆಂಗುಸೊಬ್ಬಳು ಹಿಮ್ಮೆ ಉರುವಲು ಇಲ್ಲದಾಗ ತನ್ನ ಕಾಲನ್ನೇ ಒಲೆಗೆ ಹಚ್ಚಿ ಅಡಿಗೆ ಮಾಡಿ ತೋರಿಸಿದಳಂತೆ!

ಆದ್ದರಿಂದಲೇ ಹರಿಶರಣರ ಮಹಿಮೆಯನ್ನು ಸಾಧುಗಳೊಬ್ಬರು ಹೀಗೆ ಒಕ್ಕಣಿಸಿರುವರು:--

ಅರಿಗಳೇ ಸಖರಹ್ಹು ಅತಿವಿಷಾಮೃತವಹ್ಹು |
ಉರಗ ಪೂಮಾಲೆಕ್ಕು ಉರಿ ತಣ್ಣನಕ್ಕು ||
ಶರಧಿ ಗೋಷ್ಪದವಕ್ಕು ಶರಘಾತ ಚೆಂಡಕ್ಕು |
ನರಹರಿಯ ನಾಮಗಳ ನಂಬಿ ಪಠಿಪರ್ಗೆ ||

(ಪ್ರಸನ್ನ ವೆಂಕಟದಾಸರು)

೬ನೆಯ ಕಥೆ

## ಒನಿಕೆಯು ಚಿಗಿತು ಮಾವಿನ ಗಿಡವಾಗಿದ್ದು.

ಕ್ಷಿಪ್ರದಿ ತೋರಿದಿ ವಿಪ್ರರ ಮಹಿಮೆಯ | ಆ ಪೃಥಿವೀಶಗೆ
ಅಪ್ರತಿ ಗುರುವೇ || ರಾಘವೇಂದ್ರ ರಾಚಿತ ಗುಣಸಾಂದ್ರಾ ||

(ವಿಜಯದಾಸಗುರು)

ಪ್ರಖ್ಯಾತರಾದ ಶಿರಸಂಗಿಯ ದೇಸಾಯರ ಹೆಸರನ್ನು ಕೇಳದ ವಾಚಕರು ವಿರಳ. ಇವರು ಲಿಂಗವಂತರು. ಹಿಂದಕ್ಕೆ ನಮ್ಮ ಕರ್ಣಾಟಕದಲ್ಲಿ ಲಿಂಗಾಯತರ ದೇಸಗತಿಗಳು ಅನೇಕವಾಗಿದ್ದವು. ಅರಸು ಮನೆತನಗಳೂ ಇದ್ದವು; ಆದರೆ ಈಗಿನಂತೆ ಬ್ರಾಹ್ಮಣ-ಬ್ರಾಹ್ಮಣೇತರವೆಂಬ ಶುಷ್ಕವಾದವು ಮಾತ್ರ ಆಗಿನ ಕಾಲದಲ್ಲಿರಲಿಲ್ಲ. ಒಬ್ಬರಿಗೊಬ್ಬರು ಐಕ್ಯಭಾವದಿಂದಲೂ-ಅನ್ಯೋನ್ಯ ಪ್ರೀತಿಯಿಂದಲೂ ಇದ್ದರು. ಈ ಮಾತಿಗೆ ಲಿಂಗಾಯತರಿಂದ ಬ್ರಾಹ್ಮಣರಿಗೂ ಬ್ರಾಹ್ಮಣರಿಂದ ಇತರರಿಗೂ ದೊರೆತ ಅನೇಕ ಇನಾಮು-ಭೂಮಿ-ಮನೆಗಳೇ ಸಾಕ್ಷಿಯಾಗಿವೆ. ಅದರಂತೆ ಶಿರಸಂಗಿಯ ದೇಸಾಯರಾದರೂ ತಮ್ಮ ದೇಸಗತಿಯಲ್ಲಿ ಬ್ರಾಹ್ಮಣರಿಗೆ ಎಷ್ಟೋ ಇನಾಮುಗಳನ್ನು ಹಾಕಿಕೊಟ್ಟಿದ್ದರು. ಸದ್ಯಕ್ಕೆ ಈ ದೇಸಗತಿಯು ನಾಶವಾಗಿ ಇದರ ಉತ್ಪನ್ನವೆಲ್ಲ ಲಿಂಗಾಯತ ಫಂಡಿಗೆ ಸೇರಿಹೋಗಿದ್ದರೂ ಅವರು ಹಾಕಿಕೊಟ್ಟ ಇನಾಮುಗಳು ಮಾತ್ರ ಅವರ ಶಾಶ್ವತವಾದ ಕೀರ್ತಿಧ್ವಜವನ್ನು ನಿಲ್ಲಿಸಿದಂತೆ ನಿಂತುಬಿಟ್ಟಿರುತ್ತವೆ. ಮನುಷ್ಯನು ಪ್ರಾಣತ್ಯಾಗ ಮಾಡಲು ಆವನ ಹಿಂದೆ ಬರತಕ್ಕದ್ದೇನು? ಹೊಲ-ಮನೆ, ಹೆಂಡಿರು-ಮಕ್ಕಳು ದುಡ್ಡು-ದುಗ್ಗಾಣಿ-ಆಪ್ತೇಷ್ಟರು ಇವರಲ್ಲಿ ಯಾರಾದರೂ ಬರುವರೇ? ಇಲ್ಲ. 'ಧರ್ಮ ಕೀರ್ತಿ ದ್ವಯಂ ಸ್ಥಿರಂ |' ಎಂಬಂತೆ ಧರ್ಮ ಕೀರ್ತಿಗಳೆರಡೇ ಆಲ್ಲವೇ ಬರತಕ್ಕವು? ಇಂಥಾ ಸ್ಥಿರಆಸ್ತಿಯನ್ನೇ ಸಂಪಾದನೆ ಮಾಡಿಕೊಂಡು ಹೋದ ದೇಸಾಯರು ಧನ್ಯರೆಂದು ಯಾರು ಹೇಳಲಿಕ್ಕಿಲ್ಲ? ಇರಲಿ.

ಒಂದಾನೊಂದು ಸಮಯದಲ್ಲಿ ದೇಸಾಯರಿಗೆ ಶ್ರೀರಾಘವೇಂದ್ರಸ್ವಾಮಿಗಳವರ ಮಾಹಾತ್ಮ್ಯೆಯನ್ನು ಕಣ್ಣಾರೆ ಕಾಣಬೇಕೆಂಬ ಆಶೆ ಹುಟ್ಟಿತು. ಆದರೆ ಅದು ನೆರವೇರುವದೆಂತು? ಅದಕ್ಕೋಸ್ಕರ ಅವರು ಒಂದು ಹಂಚಿಕೆಯನ್ನು ತೆಗೆದರು. ಅದು ಮತ್ತೇನೂ ಅಲ್ಲ. ತಮ್ಮ ದೇಸಗತಿಯಲ್ಲಿಯ

ಬ್ರಾಹ್ಮಣರ ಇನಾಮುಗಳನ್ನೆಲ್ಲ ಜಪ್ತುಮಾಡಿ ಬಿಡಬೇಕೆಂಬುದು. ಕೂಡಲೆ ಎಲ್ಲರ ಇನಾಮುಗಳೂ ಹೊರಟು ಹೋದವು. ಬ್ರಾಹ್ಮಣರು ದೇಸಾಯರನ್ನು ಕೇಳಿದರು. ಅದಕ್ಕೆ ಅವರು:—"ನಿಮ್ಮ ಗುರುಗಳ ಮಾಹಾತ್ಮೆಯನ್ನು ಮನಬಂದಂತೆ ಹೊಗಳುತ್ತೀರಿ. ಅಂಥಾ ಗುರುಗಳಾದರೆ ತಮ್ಮ ಮಹಿಮೆಯನ್ನು ತೋರಿಸಿ ನಿಮ್ಮ ಭೂಮಿ ಕಾಣಿಕೆಗಳನ್ನು ತಿರುಗಿ ಸಂಪಾದಿಸಲಿ; ಇಲ್ಲದಿದ್ದರೆ ನೀವು ಹೇಳುವದೆಲ್ಲ ಸುಳ್ಳೆಂದು ಸಿದ್ಧವಾಗುತ್ತದೆ. ಇನಾಮು ಕಳಕೊಳ್ಳುವಿರಿ" ಎಂದುಬಿಟ್ಟರು. ಆಗ ಬ್ರಾಹ್ಮಣರೆಲ್ಲರೂ ಕೂಡಿಕೊಂಡು ಬಂದು ಅಲ್ಲಿ ನಡೆದ ವರ್ತಮಾನವನ್ನೆಲ್ಲ ರಾಯರಿಗೆ ನಿವೇದಿಸಿದರು. ಹಾಗೂ—ನಮ್ಮ ಭೂಮಿಗಳನ್ನು ನಮಗೆ ಕೊಡಿಸಿದರೆ ಇಷ್ಟು ಕುಟುಂಬ ಪೋಷಣಮಾಡಿದ ಪುಣ್ಯವು ಲಭಿಸುವದೆಂದೂ ವಿಜ್ಞಾಪನೆ ಮಾಡಿಕೊಂಡರು. ರಾಯರು ಯೋಚಿಸಿದರು. ಇಷ್ಟು ಜನ ಬ್ರಾಹ್ಮಣರು ನಿರಾಧಾರಿಗಳಾಗುವರೆಂದು ತಿಳಿದು ಅವರ ಅಂತಃಕರಣವು ಉಕ್ಕೇರಿ ಬಂತು. ಒಳ್ಳೇದು. ದೇವರ ಮನಸ್ಸಿಗೆ ಬಂದಂತಾಗಲೆಂದು ದೇಸಾಯರ ಊರಿಗೆ ಹೋದರು. ದೇಸಾಯರು ಶ್ರೀಗಳವರನ್ನು ಮಾನಮರ್ಯಾದೆಯಿಂದ ಊರಲ್ಲಿ ಕರಕೊಂಡುಹೋಗಿ:—ಸ್ವಾಮಿ! ತಮ್ಮ ಮಾಹಾತ್ಮೆಯನ್ನು ಇಲ್ಲಿಯ ಬ್ರಾಹ್ಮಣರು ಅತ್ಯಂತವಾಗಿ ಹೊಗಳುತ್ತಿದ್ದಾರೆ. ಆದ್ದರಿಂದ ಈಗ ಅದನ್ನು ಕಣ್ಣಾರೆ ನೋಡಬೇಕೆಂಬಾಶೆಯಿಂದ ಇಗೋ ಈ ಹಿನಿಕೆಗೆ ಉಕ್ಕಿನ ಕಟ್ಟನ್ನುಹಾಕಿಸಿ ಇಟ್ಟಿರುತ್ತೇವೆ. ಇದನ್ನುಚಿಗಿಯುವಂತೆಮಾಡಿದ್ದೇ ಆದರೆ, ಬ್ರಾಹ್ಮಣರ ಕಸುಕೊಂಡ ಭೂಮಿಗಳನ್ನೆಲ್ಲ ತಿರುಗಿ ಕೊಡುವದಲ್ಲದೆ ಇನ್ನೂ ಹೆಚ್ಚಾಗಿ ಅವರಿಗೂ ತಮಗೂ ಭೂದಾನವನ್ನು ಮಾಡುವೆವೆಂದು ಹೇಳಿದರು. ಅದಕ್ಕೆ ಶ್ರೀಗಳವರು:—ಲಕ್ಷ್ಮೀಪತಿಯು ಸಮರ್ಥನಿದ್ದಾನೆ. ನೋಡೋಣವೆಂದು ಹೇಳಿ, ದಿನಾಲು ದೇವತಾರ್ಚನೆಮಾಡಿ ಆ ಹಿನಿಕೆಗೆ ಪಾದೋದಕವನ್ನು ಹಾಕುತ್ತ ಹೋದರು. ತುಸು ದಿವಸದಲ್ಲಿಯೇ ಅಂಥಾ ಕಟ್ಟು ಹಾಕಿದ ಹಿನಿಕೆಯು ಚಿಗಿತು ಮಾವಿನ ಗಿಡವಾಯಿತು. † ಅಹಾ! ರಾಯರ ಮಹಿಮೆಯಿನ್ನೆಷ್ಟೋ! ಅದನ್ನು ಸಹಸ್ರಾಂಶ-ಲಕ್ಷಾಂಶ

† ಹಿಂದಕ್ಕೆ ಶ್ರೀವಿದ್ಯಾಧೀಶ ಸ್ವಾಮಿಗಳವರು ಗಯಾಕ್ಕೆ ಹೋದಾಗ್ಗ ಇದೇ ರೀತಿ ಬರಡು ಮರವನ್ನು ಚಿಗಿಸಿ ತೋರಿಸಲು —ಗಯಾವಾಡರೆಲ್ಲರೂ ಇವರಿಗೆ ಶರಣಾಗತರಾಗಿ ಕ್ಷಮೆಯನ್ನು ಬೇಡಿಕೊಂಡದ್ದಲ್ಲದೆ--ಮುದ್ರಾಧಾರಣ ಸಹ ತಕ್ಕೊಂಡರಂತೆ.

ವನ್ನಾದರೂ ತಿಳಿಯಬಲ್ಲವರಾರು? ದೇಸಾಯರು ನೋಡಿದರು. ಅವರಿಗೆ ದಿಕ್ಕು ತಪ್ಪಿದಂತಾಯಿತು. ಇಂಥ ಮಹಾತ್ಮರು ಲೋಕದಲ್ಲಿ ಬೇರೆ ಯಾರಾದರೂ ಉಂಟೇ? ಇವರು ಪ್ರತ್ಯಕ್ಷ ದೇವತೆಗಳೇ ಹೊರತು ನರಮನುಷ್ಯರಲ್ಲ. ಇಂಥವರನ್ನು ನಾವು ಪರೀಕ್ಷೆಮಾಡಹೋದದ್ದು ಅಕ್ಷಮ್ಯವಾದ ತಪ್ಪು. ಅಯ್ಯೋ! ಮುಂದೆ ಗತಿಯೇನೆಂಬದಾಗಿ ಬಹಳ ವ್ಯಾಕುಲಪಟ್ಟು ಪಶ್ಚಾತ್ತಾಪದಿಂದ ರಾಯರಿಗೆ ವಿಜ್ಞಾಪನೆ ಮಾಡಿಕೊಂಡರು; ಮತ್ತು ಮೊದಲು ಹೇಳಿಧಂತೆ ಯಾವತ್ತೂ ಬ್ರಾಹ್ಮಣರ ಭೂಮಿಗಳನ್ನು ಅವರವರಿಗೆ ಒಪ್ಪಿಸಿದ್ದಲ್ಲದೆ ಹೆಚ್ಚಾಗಿ ಎಷ್ಟೋ ದಾನ-ಧರ್ಮಗಳನ್ನೂ ಮಾಡಿದರು. ರಾಯರು ದೇಸಾಯರಿಗೆ ಹಲವು ಉಪದೇಶದ ಮಾತುಗಳನ್ನು ಹೇಳಿ ಸಂತೋಷದಿಂದ ಮುಂದೆ ಸಂಚಾರಾರ್ಥವಾಗಿ ಹೊರಟರು.

ವಿಖ್ಯಾತಶ್ರೀಸುಧೀಂದ್ರ ವ್ರತಿಸುತಭವತಾ ಸಾಧುಗೀತೇಸುತರ್ಕೇ |
ಸದ್ಯಃಪ್ರತ್ಯರ್ಥಿಕೃದ್ಯೈಮುನಿಮಣಿರಚಿತೇತಾಂಡವೇಯೋಜಿತಾರ್ಥೇ ||
ಪ್ರತ್ಯಾಖ್ಯಾತಃಪ್ರಕಾಶಃಸುಜನಿಭುವನೇಹಂತಚಿಂತಾಮಣಿಸ್ತ್ವಂ |
ಬ್ರೂಹಿ ಶ್ರೀರಾಘವೇಂದ್ರವ್ರತಿವಿಬುಧಮಣೇಕಸ್ತ್ವದನ್ಯೋವದಾನ್ಯಃ ||
(ಗುರುಗುಣಸ್ತವ)

ಜಗತ್ತಿನಲ್ಲಿ ಮಹಾನುಭಾವರಿಗೆ ಇಷ್ಟೊಂದು ಪೂಜ್ಯತೆಯು ದೊರೆಯುವದಕ್ಕೆ ಅವರ ಅಗಾಧವಾದ ಮಹಿಮೆಯೇ ಕಾರಣವಾಗಿರುವದು. ಸುಳ್ಳಲ್ಲ.

'ಚಾರಿತ್ರ್ಯಾತಿಶಯಂ ಮಹಾಂತರೊಳಗಾಘಂತೀರ್ಥಮಾಹಾತ್ಮ್ಯವೋಲ್' ||

ಎಂದು ಕವಿಯು ಹೇಳಿಕೊಂಡದ್ದು ಸುಳ್ಳಲ್ಲ.

## ೭ನೆಯ ಕಥೆ

## ಗರ್ವಭಂಗ

—(೧)—

ಕನಲಿವಜನಪನ ಅನುಸಯದಲಿ ನಿ |
ನ್ನಣುಗನ ಮಾಡಿದಿ ಘನತರಚರಿತಾ ||
ರಾಘವೇಂದ್ರರಾಜಿತ ಗುಣಸಾಂದ್ರಾ ||
(ಜಗನ್ನಾಥ ದಾಸರು)

ಈಗಿನ ಬೆಳಗಾವ ಜಿಲ್ಹೆಯಲ್ಲಿ ಕಿತ್ತೂರು ಎಂಬುದೊಂದು ಊರುಂಟು. ಇದಾದರೂ ಮೊದಲು ಲಿಂಗಾಯತರ ದೇಸಗತಿಯ ಗ್ರಾಮವಾಗಿತ್ತು. ಆ ಕಾಲದಲ್ಲಿ ರಾಯರು ಹಿಮ್ಮೆ ಸಂಚಾರ ಮಾಡುತ್ತ ಮಾಡುತ್ತ ಅಲ್ಲಿಗೆ ಹೋದರು. ಕೂಡಲೆ ಅಲ್ಲಿಯ ಬ್ರಹ್ಮವೃಂದವು ಗುರುಗಳನ್ನು ಎದುರುಗೊಂಡು ಕರೆತರಬೇಕೆಂದು ಹಳ್ಳೀ ವಿಜೃಂಭಣೆಯಿಂದ ಹೊರಟಿತು. ಅಷ್ಟರಲ್ಲಿ ಅಲ್ಲಿಯ ಯಜಮಾನರಾದ ದೇಸಾಯರು ಅದೇಕೋ ರಾಯರ ಮೇಲೆ ಮುನಿಸುಗೊಂಡಂತೆ ನಟಿಸಿ ಕರತರುವದಕ್ಕೆ ನಿರ್ಬಂಧ ಪಡಿಸಿ ಬಿಟ್ಟರು. ಇಷ್ಟೇ ಅಲ್ಲ; ಅವರಿಗೆ ಊರಲ್ಲಿ ಯಾರೂ ಸ್ಥಳ ಕೊಡ ಬಾರದೆಂದೂ ಸಾರ್ವಜನಿಕ ಕೆರೆ-ಬಾವಿಗಳ ನೀರನ್ನು ಸಹ ಅವರು ಮುಟ್ಟ ಕೂಡದೆಂದೂ ತಡೆ ಹಾಕಿದರು ಇಷ್ಟರಿಂದಲೇ ಬ್ರಾಹ್ಮಣ-ಬ್ರಾಹ್ಮಣೇತರ ವಾದವು ಮೊದಲಿನಿಂದಲೂ ಇತ್ತೆಂದು ವಾಚಕರು ತರ್ಕಿಸಬಾರದು. ಈಗೀಗ ಅದು ವಿಶೇಷವಾಗಿ ನಮ್ಮ ಕರ್ನಾಟಕದಲ್ಲಿ ತಲೆದೋರಿರುವದೇ ಹೊರತು ಮೊದಲು ಹೀಗಿರಲಿಲ್ಲ ಉಭಯರೂ ಅನ್ಯೋನ್ಯ ಪ್ರೀತಿಯಿಂದಲೇ ಇರುತ್ತಿದ್ದರು; ಆದರೆ ದೇಸಾಯರು ಶಿರಸಂಗಿಯಲ್ಲಿ ತೋರಿಸಿದ ರಾಯರ ಮಾಹಾತ್ಮ್ಯೆಯನ್ನು ಕೇಳಿ ತಾವೂ ಅದನ್ನು ಪ್ರತ್ಯಕ್ಷ ನೋಡುವ ಸಲುವಾಗಿಯೇ ಈ ಆಟ ಹೂಡಿದ್ದರಲ್ಲದೆ ಮತ್ತೇನೂ ಇಲ್ಲ.

ಯಾವಾಗ ಯಜಮಾನನ ಅಪ್ಪಣೆ ದೊರೆಯಲಿಲ್ಲವೋ ಆಗಲೇ ಕರತರಲು ಸಿದ್ಧರಾದವರೆಲ್ಲರೂ ಎದ್ದು ಮನೆಗೆ ಹೋದರು. ಯಾರೇನು

ಮಾಡಬೇಕು? ಕೆಲ ಕೆಲವರು ದೇಸಾಯರಿಗೆ ಹೇಳಿ ನೋಡಿದರು; ಉಪದೇಶ ಮಾಡಿದರು; ಪಾಪ ಪುಣ್ಯದ ಭಯವನ್ನೂ ಹಾಕಿದರು ಏನಾದರೇನು? ಬುಡಮೇಲು ಮಾಡಿದ ಕೊಡದ ಮೇಲೆ ನೀರು ಹಣಿಸಿದಂತೆ-ಕಲ್ಲ ಮೇಲೆ ಮಳೆ ಸುರಿದಂತೆ ಅದೆಲ್ಲವೂ ವ್ಯರ್ಥ. ನಿಷ್ಪ್ರಯೋಜನ. ನಿಜವಾಗಿ ನಿದ್ದೆ ಹತ್ತಿದವರನ್ನು ಎಬ್ಬಿಸಬಹುದು; ಆದರೆ ನಿದ್ದೆಯ ವೇಷ ಹಾಕಿದವರನ್ನು ಹೇಗೆ ಎಬ್ಬಿಸಬೇಕು? ಆಗ ಅವರು ಈ ಸುದ್ದಿಯನ್ನೆಲ್ಲ ಆದ್ಯಂತವಾಗಿ ಗುರುಗಳಿಗೆ ತಿಳಿಸಿದರು.

ಆನೆ ನೀರಾಟದಲಿ ಮೀನಕಂಡಂಜುವದೆ |
ಹೀನ ಮನದವರ ಬಿರುನುಡಿಗೆ ತತ್ವದ |
ಜ್ಞಾನಿಯಂಜುವನೆ ಸರ್ವಜ್ಞ ||

ಎಂಬಂತೆ—ಯೋಗಸಾಧನಮಹಿಮಾವಿಶಿಷ್ಟರಾದ ಗುರುಗಳು ಇದಕ್ಕೆಲ್ಲ ಬೆದರಬಹುದೇ? ಅವರು ಮುಗುಳುನಗೆ ನಕ್ಕು:—ಆಗಲಿ ಯಜಮಾನನ ಮನಸ್ಸಿಗೆ ಯಾವಾಗ ಬರುವದೋ ಆಗಲೇ ಊರಲ್ಲಿ ಬರೋಣವಂತೆ ಅಲ್ಲಿಯವರೆಗೂ ನಾವು ಇಲ್ಲಿಯೇ ಊರಹೊರಗೆ ಬಿಡಿವಿಯಲ್ಲಿ ವಾಸ ಮಾಡಿಕೊಂಡಿರುವೆವು. ಸಂನ್ಯಾಸಿಗಳಾದ ನಮಗೆ ನಾಡೇನು-ಕಾಡೇನು? ಆದರೆ ಈ ಊರಲ್ಲಿ ಹೋಗದ ಹೊರತು ಇನ್ನೆಲ್ಲಿಯೂ ಪ್ರಯಾಣವನ್ನು ಮಾತ್ರ ನಾವು ಮಾಡಲಿಕ್ಕಿಲ್ಲ. ಹೀಗೆಂದು ಪ್ರತಿಜ್ಞೆಮಾಡಿ ನುಡಿದರು. ಜನರಿಗೆಲ್ಲ ಕೌತುಕವಾಯಿತು. ಇದೇನು? ಊರಲ್ಲಿ ಬರದ ಹೊರತು ಮುಂದಕ್ಕೆ ಅಡಿ ಇಡಲಿಕ್ಕಿಲ್ಲೆಂದು ಗುರುಗಳ ಹಟ. ಊರಲ್ಲಿ ಕಾಲಿಡಿಸಲಿಕ್ಕಿಲ್ಲೆಂದು ಯಜಮಾನನ ಹಟ. ಹಿಂದಕ್ಕೆ ಶ್ರೀಕೃಷ್ಣನು ಕೌರವನಲ್ಲಿ ಮಧ್ಯಸ್ಥಿಕೆಗೆ ಹೋಗುವಾಗ ಇದೇ ರೀತಿಯಾಗಿತ್ತು. ಹೇಗಾದರೂ ಸಂಧಿಯನ್ನು ಮಾಡಿಕೊಂಡೇ ಬರಬೇಕೆಂದು ಒತ್ತಟ್ಟಿಗೆ ಧರ್ಮರಾಯನ ಆಗ್ರಹ; ಯಾವ ರೀತಿಯಿಂದಾದರೂ ಸಂಧಾನವನ್ನು ಮುರಿಯಲೇ ಬೇಕೆಂದು ಇನ್ನೊತ್ತಟ್ಟಿಗೆ ಭೀಮಾರ್ಜುನ-ದ್ರೌಪದಿಯರ ಬಿನ್ನಹ. ಇಂಥಾ ಉಭಯ ಸಂಕಟ ಪ್ರಸಂಗದಲ್ಲಿ ಶ್ರೀಕೃಷ್ಣನಂಥ ಅಲೌಕಿಕ ಮುತ್ಸದ್ದಿಯಿಂದಲ್ಲದೆ ಇನ್ನಾರಿಂದ ತಾನೇ ಈ ಕೆಲಸವಾಗುತ್ತಿತ್ತು? ಆತನಂತೇ ಅದನ್ನು ಕೊನೆಗಾಣಿಸಿದನು. ತದ್ವತ್ ಇಲ್ಲಿಯಾದರೂ ದಿವ್ಯ ತೇಜೋಮೂರ್ತಿಗಳಾದ ಶ್ರೀಗಳವರಿರುವರು. ಅಂದಮೇಲೆ ಮುಂದ ಇನ್ನೂ ಏನೇನು ಕೌತುಕ

ನಡೆಯುವದೋ ಯಾರು ಬಲ್ಲರು? ಹೀಗೆಂದು ಜನರು ತಮ್ಮ ತಮ್ಮೊಳಗೆ ಗುಜು ಗುಜು ಮಾತಾಡಹತ್ತಿದರು.

ಎಷ್ಟಾದರೂ ಪರಮಾತ್ಮನು ಸತ್ಪುರುಷಾಭಿಮಾನಿ. ಆತನು ಅವರ ಅಪಮಾನವನ್ನು ಕ್ಷಣಮಾತ್ರವೂ ತಡೆಯಲಾರ. ಭಯಕೃತ್‌ಭಯ ನಾಶನನೆಂದು ಆತನ ಬಿರುದು.

'ಲೀಲೆ ಗೈವನು ತನ್ನವರಿಗನು | ಕೂಲವಾಗಿದ್ದೆಲ್ಲ ಕಾಲದಿ |'

ಎಂಬಂತೆ—ಕರುಣಾಮಯನಾದ ಸ್ವಾಮಿಯು ಅಗಾಧ ಸತ್ವಶಾಲಿಗಳಾದ ಶ್ರೀಗಳವರ ವಿಷಯದಲ್ಲಿ ಉದಾಶೀನ ಭಾವವನ್ನು ಹೇಗೆ ತಾಳಿಯಾನು? ಸುಮ್ಮನೆ ಹೇಗೆ ಕುಳಿತುಕೊಂಡಾನು? ಭಕ್ತರ ಪ್ರತಿಜ್ಞೆಯೇ ತನ್ನ ಪ್ರತಿಜ್ಞೆಯಲ್ಲವೇ? ಅಂತೆಯೇ ಪಾಂಡವರ ಪ್ರತಿಜ್ಞಾಭಾರವನ್ನು ತನ್ನ ತಲೆಯ ಮೇಲೆ ಹೊತ್ತುಕೊಂಡು ಅದನ್ನು ಪೂರ್ಣಮಾಡಿದನು. ಇಂಥಾ ಭಗವಂತನಿಗೆ ಇದು ಯಾವ ದೊಡ್ಡ ಮಾತು? ಒಂದೆರಡು ದಿವಸದಲ್ಲಿಯೇ ಕಿತ್ತೂರೊಳಗಿನ ಬಾವಿಗಳೆಲ್ಲ ಬತ್ತಿಹೋದವು. ಸ್ವತಃ ದೇಸಾಯಿರಿಗೇ ನೀರು ಸಿಗದಂತಾಯಿತು ಜನರಂತೂ ನೀರು ನೀರೆಂದು ಒದ್ದಾಡಹತ್ತಿದರು. ಊರಲ್ಲಿಯಾಗಲಿ ಸಮೀಪದ ಬಾವಿ-ಕೆರೆಗಳಲ್ಲಿಯಾಗಲಿ ಎಲ್ಲಿಯೂ ನೀರೇ ಇಲ್ಲ. 'ನೀರು ಇದ್ದರೆ ಊರು, ನಾರಿಯಿದ್ದರೆ ಮನೆ' ಎಂದು ಹೇಳುವರಲ್ಲವೇ? ಆ ನೀರು ಇಲ್ಲದೆ ಊರು ಎಂತು ಬದುಕಬಹುದು? ಹಾ ಹಾಕಾರವೆದ್ದಿತು ಯಾರು ದೇಸಾಯರನ್ನು ಮನಬಂದಂತೆ ಬಯ್ಯಹತ್ತಿದರು, ಯಾರು ಛೀ ಹಾಕುತ್ತಿದ್ದರು. ಹೀಗೆ ಎಲ್ಲೆಲ್ಲಿ ನೋಡಿದರೂ ದೇಸಾಯರ ಮೇಲಿನ ದೋಷಾರೋಪಣೆಯ ಸುದ್ದಿಯೇ ಸುದ್ದಿ. ಮತ್ತೊಂದಿಲ್ಲ. ಕೆಟ್ಟ ಮೇಲೆ ಬುದ್ಧಿ ಬಂತೆಂಬಂತೆ ದೇಸಾಯರಿಗೆ ಈಗ ಅರಿವು ಹುಟ್ಟಿತು.

ಬಲ್ಲಿದವ ರೊಡನೆ ಸೆಣಸಿದರೆ ಬಾಯೊಳಗ|
ಹಲ್ಲುಹೋದಂತೆ........||

ಎಂಬ ಕವಿಭಾಷಿತದ ಜ್ಞಾನವಾಯಿತು. ಸತ್ಪುರುಷಾಪಮಾನವನ್ನು ಮಾಡಿದ್ದು ತಪ್ಪೆಂದು ತಿಳಿಯಿತು. ಆಗ ಶ್ರೀಗಳವರನ್ನೇ ಬೇಡಿಕೊಳ್ಳಬೇಕೆಂದು ಯೋಚಿಸಿದರು ಹೋಗಿ ನೋಡುತ್ತಾರೆ! ಅಲ್ಲಿ ನೀರು ಸಮೃದ್ಧಿಯಾಗಿತ್ತು. ತಮ್ಮ ಊರೊಳಗಿನ ಎಷ್ಟೋ ಜನರು ಕೂಡ ಅಲ್ಲಿಯೇ

ಚಕ್ಕಂದದಿಂದ ಕಾಲಕಳೆಯುತ್ತಿದ್ದರು. ಇದನ್ನು ನೋಡಿದ ಮೇಲಂತೂ ದೇಸಾಯರಿಗೆ ಗುರುಗಳಲ್ಲಿ ಅತೀವ ಪೂಜ್ಯ ಬುದ್ಧಿಯುಂಟಾಗಿಹೋಯಿತು. ಯಾರಿಗೆ ಆಗಲಿಕ್ಕಿಲ್ಲ? ಹೋದವರೇ ಸಾಷ್ಟಾಂಗವೆರಗಿ ತಮ್ಮ ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಂಡರು. ಶ್ರೀಗಳವರು ಸಂತೋಷದಿಂದ ಆಶೀರ್ವದಿಸಿ ಕಳಿಸಿದರು. ಇಷ್ಟರಲ್ಲಿಯೇ ಸುದ್ದಿ, ದೇಸಾಯರ ಬಾವಿಯಲ್ಲಿ ನೀರು ಬಂದವೆಂದು. ಊರೊಳಗಿನ ಜಲಾಶಯಗಳೂ ತುಂಬಿ ತುಳುಕ ಹತ್ತಿದವು. ಜನರು ಸಂತೋಷಸಾಗರದಲ್ಲಿ ಮುಳುಗಿಹೋದರು. ಯಾರೊಬ್ಬರ ಬಾಯಲ್ಲಿಯೂ ಶ್ರೀಗಳವರ ಕೊಂಡಾಟ. ಹೊಗಳಿಕೆ.

ಹರೌ ರುಷ್ಟೇ ಗುರುಸ್ತ್ರಾತಾ ಗುರೌ ರುಷ್ಟೇ ನ ಕಶ್ಚನ |
ಗುರೌ ತುಷ್ಟೇ ಹರಿಸ್ತುಷ್ಟೋ ಗುರುದ್ವಾರಾ ವಿಮುಕ್ತಿದಃ ||
ಗುರುಪ್ರಸಾದೋ ಬಲವಾನ್ ಪ್ರಸಾದಾಚ್ಛ್ರೀಹರೇರಪಿ |
ಅನುಪಾಸಿತೋಽಪಿ ಭಗವಾನ್ ಪ್ರಸನ್ನೋ ಯೇನ ಮುಕ್ತಿದಃ ||

(ಶ್ರೀಹರಿಯು ಒಂದು ವೇಳೆ ನಮ್ಮ ಮೇಲೆ ರುಷ್ಟನಾದರೂ ಗುರುವು ಅದರಿಂದ ನಮ್ಮನ್ನು ರಕ್ಷಿಸಬಹುದು; ಗುರುವು ಶಿಟ್ಟಾದರೆ ಮಾತ್ರ ಶ್ರೀಹರಿಯೂ ರಕ್ಷಿಸಲಾರನು. ಗುರವು ತುಷ್ಟನಾದರೆ ಶ್ರೀಹರಿಯೂ ಪ್ರೀತನಾಗುವನು. ಅತ ಏವ ಗುರುದ್ವಾರದಿಂದಲೇ ಮುಕ್ತಿಯು ಗುರುಪ್ರಸಾದವು ಶ್ರೀಹರಿಯ ಅನುಗ್ರಹಕ್ಕಿಂತಲೂ ಬಲವಾದದ್ದು. ಯಾಕಂದರೆ ಪ್ರಾರ್ಥನೆಮಾಡದಿದ್ದಾಗ್ಯೂ ಪ್ರಸನ್ನನಾಗಿ ಗುರುವು ಮುಕ್ತಿಮಾರ್ಗ ತೋರಿಸುವನು)

ಎಂಬ ಮಾತು ಸುಳ್ಳಲ್ಲ

ದೇಸಾಯರು ಅತ್ಯಾನಂದದಿಂದ ತಾವೇ ಶ್ರೀಗಳವರನ್ನು ಮೆರವಣಿಗೆಯಿಂದ ಊರಲ್ಲಿ ಕರೆತಂದು ಅವರಿಗೆ ಬೇಕಾದ ಸಂಭಾವನೆ-ಮಾನ ಮರ್ಯಾದೆಗಳನ್ನು ಮಾಡಿದರು.

---

ಅಂತೆಯೇ ಗುರುಶ್ರೀಶವಿಠ್ಠಲದಾಸರು ಹೀಗೆ ಹೇಳಿಕೊಂಡಿರುತ್ತಾರೆ:—

"ನಿಷ್ಠೆಯಿಂದಲಿ ಸ್ಮರಿಸೆ ಕಷ್ಟಗಳು ದೂರಾ ಮನೋ | ಭೀಷ್ಟಗಳ ಪೂರೈಸರೋ | ಅಷ್ಟ ಸೌಭಾಗ್ಯವನು ಕೊಟ್ಟು ಸುಜನರಿಗೆ ಶ್ರೀ | ವಿಷ್ಣುದಾಸ್ಯವ ತೋರ್ಪರೊ || ದೃಷ್ಟಿಯಿಂದಲಿ ನೋಡಲನೇಕ

ಜನ್ಮದ ಪಾಪ| ಬಿಟ್ಟು ಪೋಪವು ಕ್ಷಣದಲಿ| ಎಷ್ಟು ಹೇಳಲಿ ಇವರ
ಶಿಷ್ಟ ಮಾಹಾತ್ಮೆಯನು| ದುಷ್ಟರಿಗೆ ದೊರೆಯದಿವರ ಸೇವಾ ||"

## ೮ನೆಯ ಕಥೆ

## ಬ್ರಾಹ್ಮಣರನ್ನು ರಕ್ಷಿಸಿದ್ದು.



ವಿಪಿನದಿ ಚಂಡಾತಪದಿ ಬೆಂದ ಕಾ| ಶ್ಯಪಿಸುರರನುಳುಹಿದ ಕೃಪಣ
ಜನಾಪ್ತಾ ||
ರಾಘವೇಂದ್ರ ರಾಜಿತ ಗುಣಸಾಂದ್ರಾ ||
(ಜಗನ್ನಾಥದಾಸರು)

ಹಿಂದಾನೊಂದು ವಸಂತಮಾಸದಲ್ಲಿ ಚಿಕ್ಕೋಡಿಯಿಂದ ಕೆಲವು ಬ್ರಾಹ್ಮಣರು ವಿಜಾಪುರಕ್ಕೆಂದು ಹೊರಟರು. ವಿಜಾಪುರದಲ್ಲಿ ಒಬ್ಬ ಗೃಹಸ್ಥನ ಮನೆಯೊಳಗ ದೊಡ್ಡದೊಂದು ಮದುವೆಯ ಸಮಾರಂಭ. ಅದಕ್ಕಾಗಿಯೇ ಬ್ರಾಹ್ಮಣರು ಹೊರಟದ್ದು. ಇದರಂತೆ ಇನ್ನೂ ಎಷ್ಟೆಷ್ಟೋ ಕಡೆಯಿಂದ ಎಷ್ಟೆಷ್ಟೋ ಜನರು ಬಂದು ವಿಜಾಪುರವನ್ನು ಸೇರಿದ್ದರು. ಆ ಕಾಲದಲ್ಲಿ ಈಗಿನಂತೆ ನೋಡಿದಕ್ಕೆಲ್ಲ ಘೂಂ ಘೂಂ ಎಂದು ಒದರುತ್ತ ಓಡ್ಯಾಡುವ ಮೋಟಾರುಕಾರುಗಳಾಗಲಿ-ಧೂಮ್ರಶಕಟಗಳಾಗಲಿ ಇದ್ದಿಲ್ಲ. ಆದರೇನು? ಕಾಲ್ನಡೆಯಿಂದಲೇ ಜನಸಮ್ಮರ್ದವು ಬೇಕಾದಷ್ಟು ಸೇರಿತ್ತು. ಆಗಿನ ಜನರು ಈಗಿನವರ ಹಾಗೆ ಕೇವಲ ನಿರ್ವೀರ್ಯರಾಗಿದ್ದಿಲ್ಲ. ಬಲಶಾಲಿಗಳೂ-ಕರ್ತೃತ್ವಶಕ್ತಿಯುಳ್ಳವರೂ ಆಗಿದ್ದರು; ಮತ್ತು ಈಗಿನಂತೆ ಧರ್ಮಲಂಡರಾಗಿ ಬೇಕಾದಲ್ಲಿ ಬೇಕಾದ ಹಾಗೆ ಸ್ವೇಚ್ಛಾವಿಹಾರಗಳನ್ನು ಮಾಡತಕ್ಕವರಾಗಿರಲಿಲ್ಲ. ಎಲ್ಲರೂ ತಂತಮ್ಮ ಧರ್ಮದಲ್ಲಿಯೇ ದೃಷ್ಟಿಯಿಟ್ಟುಕೊಂಡು ಸ್ವೇಚ್ಛಾವಿಹಾರಕ್ಕೆ ಹೇಸಿಕೆಯುಳ್ಳವರಾಗಿದ್ದರು. ಅದೊಂದು ಕಾಲದ ಮಾತಾಗಿಹೋಯಿತು ಅಸ್ತು

ಮದುವೆಯ ಸಮಾರಂಭವು ನಾಲ್ಕೆಂಟು ದಿನ ಚೆನ್ನಾಗಿ ನಡೆಯಿತು.

ಬ್ರಾಹ್ಮಣರಿಗೇನು ಬೇಕು?

'ಬಂದ ದಕ್ಷಿಣೆ ಮಿಷ್ಟ ಭೋಜನದಿಂದ ತುಷ್ಟರು ನಾವು'

ಎಂಬಂತೆ—ಮನದಣಿಯಾದ ಮೃಷ್ಟಾನ್ನದ ಊಟ, ಕೈತುಂಬ ದಕ್ಷಿಣೆ ಅದಕ್ಕೇನೂ ಕೊರತೆಯಾಗಲಿಲ್ಲ ಬ್ರಾಹ್ಮಣರು ಸಂತೋಷದಿಂದ ತಮ್ಮ ತಮ್ಮ ಊರಿಗೆ ತಿರುಗಿದರು ಚಿಕ್ಕೋಡಿಯ ಬ್ರಾಹ್ಮಣರೂ ವಿಜಾಪುರದಿಂದ ಹೊರಟು ಸುಮಾರು ತುಸು ದಾರಿ ಬಂದಿರಬಹುದು ಬಿಸಲಿನ ತಾಪವು ಅತ್ಯಧಿಕವಾಯಿತು. ಮೊದಲೇ ವಸಂತಮಾಸ. ಅದರೊಳಗೆ ಬೈಲುಸೀಮೆಯ ದಾರಿ ನೀರಿಲ್ಲ, ನೆರಳಿಲ್ಲ. ಕೇಳುವದೇನು?

ನೀರು ಸನಿಹದಲಿಲ್ಲ ಊರೊಂದು ಗಾವುದವು |
ಸೇರಿ ನಿಲ್ಲುವರೆ ನೆರಳಿಲ್ಲ |
ದಾರಿಬೇಡೆಂದ ಸರ್ವಜ್ಞ ||

ಎಂಬಂತಾಯಿತು.

ಬರಬರುತ್ತ ಆ ಬಿಸಿಲಿನ ತಾಪಕ್ಕೆ ಬ್ರಾಹ್ಮಣರು ತಡೆಯದಾದರು. ಗಂಟಲೊಣಗಿ ಹೋಯಿತು. ಗುಬ್ಬಿ ಕುಡಿದೇನೆಂದರೂ ನೀರಿಲ್ಲದಂಥ ಸ್ಥಳದಲ್ಲಿ ಇವರಿಗೆ ನೀರು ಹೇಗೆ ಸಿಕ್ಕಬೇಕು? ಸಮೀಪದಲ್ಲೆಲ್ಲಿಯೂ ನೀರು ಸಿಗುವ ಆಶೆಯಿಲ್ಲ ಇವರಾದರೋ ನೀರು ಸಿಕ್ಕದೆ ಬದುಕುವಂತಿಲ್ಲ. ಮುಂದಕ್ಕೆ ಹೆಜ್ಜೆಯನ್ನೂ ಇಡದಾದರು. ಬಹಳ ಸಂಕಟಕ್ಕಿಟ್ಟಿತು. ಮಾಡುತ್ತಾರೇನು? ಎಲ್ಲರೂ ರಣ-ರಣ ಹೊಡೆಯುವಂಥ ಬಿಸಿಲಲ್ಲಿಯೇ ಹಿತ್ತಟ್ಟಿಗೆ ಕುಳಿತು ಬಿಟ್ಟರು! ಅಷ್ಟರಲ್ಲಿ ಏನು ಅವರ ಸುದೈವವೋ ಯಾರು ಬಲ್ಲರು? ನಮ್ಮ ಶ್ರೀಗಳವರು ಅದೇ ದಾರಿಯಿಂದ ಶಿಷ್ಯವೃಂದ ಸಹಿತವಾಗಿ ಬಂದು ಬಿಡಬೇಕೇ? ಶ್ರೀಗಳವರನ್ನು ನೋಡಿದ ಕೂಡಲೆ ಬ್ರಾಹ್ಮಣರಿಗೆ ಜೀವ ಬಂದಂತಾಯಿತು. ಎಲ್ಲರೂ ಬಂದು ಸಾಷ್ಟಾಂಗ ಹಾಕಿದರು. ತಮಗೆ ಬಂದ ಆಪತ್ತನ್ನೂ ವಿವರಿಸಿದರು. ಇಷ್ಟು ಜನ ಬ್ರಾಹ್ಮಣರು ನೀರಿಲ್ಲದೆ ಕಂಗೆಟ್ಟಿರುವದನ್ನು ನೋಡಿ ಶ್ರೀಗಳವರ ಅಂತಃ ಕರಣವು ಕರಗಿತು. ಅವರು ಕೂಡಲೆ ಸ್ವಾಮಿಯನ್ನು ಧ್ಯಾನಿಸಿ ತಮ್ಮ ಕೈಯೊಳಗಿನ ದಂಡಕಾಷ್ಠದಿಂದ ಭೂಮಿಯನ್ನು ಅಗಿದರು. ಭಗವಂತನಿಗೆ ಭಕ್ತರ ಭಿಡೆಯು ಇನ್ನೆಷ್ಟಿರುವದೋ ಯಾರಿಗೆ ಗೊತ್ತು? ಅಂಥಾ ನಿರ್ಜಲ ಪ್ರದೇಶದಲ್ಲಿಯೇ ನಿರ್ಮಲವಾದ ನೀರು ಹೊರಟಿತು. ನೀರಡಿಕೆ

ಯಿಂದ ಬಾಯಾರಿಹೋಗಿದ್ದ ಬ್ರಾಹ್ಮಣರು:—ಇವರು ನಮ್ಮ ಪಾಲಿನ ದೇವರೇ ಎಂದಂದುಕೊಂಡು ಮನವಣಿಯಾಗಿ ನೀರು ಕುಡಿದರು; ಮತ್ತು

ಸದ್ದಯಾ ದಾಕ್ಷಿಣ್ಯ ವಿಷಯದಿ | ಹೊದ್ದಿದಿಹ ವೈರಾಗ್ಯ ಭಾಗ್ಯಸು|
ಬುದ್ಧಿವಾಕ್ಪಟವ ಮುಖಾಂಕಿತ ಸದ್ಗುಣಗಳಲ್ಲಿ ||
ಸಿದ್ಧಿ ಶಾಪಾನುಗ್ರಹದಿಪ್ರ | ಸಿದ್ಧ ಶಕ್ತಿಗಳಿಂದ ಶೋಭಿಸು |
ತಿದ್ದ ಶ್ರೀಗುರು ರಾಘವೇಂದ್ರರಿಗಿಲ್ಲ ಸುಮನೋರ್ವಾ ||

(ಮನೋಹರ ವಿಠ್ಠಲದಾಸರು)

ಎಂಬದಾಗಿ ರಾಯರನ್ನು ಕೊಂಡಾಡುತ್ತ ಅವರ ಅಪ್ಪಣೆ ಪಡೆದುಕೊಂಡು ಊರಿಗೆ ಹೊರಟು ಹೋದರು.

ಮಹಾತ್ಮರ ಮಾತೆಲ್ಲವೂ ಹೀಗಿಯೇ. ಹಿಂದಕ್ಕೆ ಶ್ರೀಮದಾಚಾರ್ಯ ರವರು ದಂಡಕಾಷ್ಠದಿಂದಲೇ ತೋಡಿ ತಮ್ಮ ಮನೆಯ ಹಿತ್ತಲದಲ್ಲಿ ತಾಯಿಗೋಸ್ಕರ ಹಿಂದು ತೀರ್ಥವನ್ನುಂಟುಮಾಡಿದರಂತೆ. ಉಡುಪಿಗೆ ಹೋದವರೆಲ್ಲರೂ ಈ ಹೊತ್ತಿಗೂ ಇದನ್ನು ನೋಡಿ ಬರುತ್ತಿರುವರು.

ಆದ್ದರಿಂದಲೇ ಶ್ರೀಮದ್ವಾದಿರಾಜಗುರುಗಳು—ಸದಾಚಾರಸ್ಮೃತ್ಯರ್ಥ ಸುಳಾದಿಯಲ್ಲಿ ಹೀಗೆಂದು ಹೇಳಿಕೊಂಡಿರುವರು.

“ಶ್ರೀ ವಾಸುದೇವನ ಅಡಿಗಡಿಗೆ ನೆನೆದು | ಪಾವಕಗೆ ಪ್ರಾತರಾ ಹುತಿಯನಿಟ್ಟು | ಭಾವಜ್ಞರಲ್ಲಿ ಸಕಲ ಪುರಾಣಗಳಕೇಳಿ | ಹೂವು ಶ್ರೀತುಲಸಿ ವನಗಳ ಸೇವೆಯನು ಮಾಡಿ ||

ದಿನಗಳನು ಕಳೆವ ಜನರೇ ಸುಜನರು | ವನಜನಾಭನ ದಾಸರ ಸಮಾಗಮದಿಂದ ||”

---

ಇದರಂತೆಯೇ ಮತ್ತೊಂದು ವಸಂತಕಾಲದಲ್ಲಿ ಶ್ರೀರಾಯರು ಸಂಚಾರ ಮಾಡುತ್ತಿರುವಾಗ ಅವರ ಚಕ್ಕಡಿ ಹೊಡೆಯುವ ಮನುಷ್ಯನ ಹೆಂಡತಿಯೊಬ್ಬಳು ನಡುದಾರಿಯಲ್ಲಿ ಆಕಸ್ಮಾತ್ತಾಗಿ ಜನನವಾದಳು. ಅಡವಿಯಲ್ಲಿ ನೀರಿಲ್ಲ,-ನೆರಳಿಲ್ಲ ಇಂಥಾ ಸ್ಥಿತಿಯಲ್ಲಿ ಅಲ್ಪರಿಯುತ್ತಿರುವ ಆ ಹೆಂಗುಸಿಗೆ ರಾಯರು ತಮ್ಮ ತಪೋಮಹಿಮೆಯಿಂದ ಅಲ್ಲಿಯೇ ನೀರು-ನೆರಳನ್ನುಂಟುಮಾಡಿ ಮುಂದಕ್ಕೆ ಹೊರಟುಹೋದರಂತೆ.

ಈ ವಿಷಯವನ್ನೇ ಜಗನ್ನಾಥದಾಸರು:—

"ಮಳಲ ಮಾರ್ಗದೊಳು ಲಲನೆ ಪ್ರಸೂತಿಸೆ। ಪುಲಿನ ಕಮಲ
ದೊಳು ತೋರಿದಿ ಜಲವ ||
ರಾಘವೇಂದ್ರರಾಜಿತ ಗುಣಸಾಂದ್ರಾ ||

ಎಂಬದಾಗಿ ಬಣ್ಣಿಸಿದ್ದಾರೆ.

---

೯ನೆಯ ಕಥೆ

## ಸೀಕರಣಿಯಲ್ಲಿ ಬಿದ್ದು ಸತ್ತ ಮಗುವನ್ನು ಬದುಕಿಸಿದ್ದು.



ಚೂತಫಲರಸದಿ ಪೋತಮುಳುಗೆ ಮೃತಿ। ಭೀತಿಬಿಡಿಸಿದ ಅನಾಥ
ರಕ್ಷಕಾ ||
ರಾಘವೇಂದ್ರ ರಾಜಿತ ಗುಣಸಾಂದ್ರಾ ||
(ಜಗನ್ನಾಥದಾಸರು)

---

ಶ್ರೀಗಳವರು ಸಂಚಾರಾರ್ಥವಾಗಿ ಹೊರಟು ಈಗಿನ ಗದಗತಾಲೂಕ ಕಿರಟಗೇರಿ ಎಂಬ ಗ್ರಾಮಕ್ಕೆ ಬಂದರು ಅಲ್ಲಿ ದೇಶಮುಖ ರಘುನಾಥ ರಾಯನೆಂಬವನು ಇವರಿಗೆ ಭಿಕ್ಷೆಮಾಡಿಸಿದನು. ಆತನಿಗೆ ಮೂರು-ನಾಲ್ಕು ವರ್ಷದ್ದೊಂದು ಗಂಡುಮಗು ಮಾತ್ರವಿತ್ತು. ಇದನ್ನೂ ಬಹು ದಿವಸಕ್ಕೆ ದೇವರ ದಯೆಯಿಂದ ಪಡೆದಿದ್ದನಾದ್ದರಿಂದ ಆತನ ಸಂತೋಷಕ್ಕೆ ಮೇರೆಯೇ ಇದ್ದಿಲ್ಲ. ಈ ಹೊತ್ತು ಮಾಹಾತ್ಮರಾದ ಶ್ರೀಗಳವರು ಮನೆಗೆ ಬಂದದ್ದರಿಂದಂತೂ ಆ ಸಂತೋಷಸಾಗರವು ಇನ್ನೂ ಉಕ್ಕೇರಿತು. ಸಾವಿರಾರು ಚಲೋ ಮಾವಿನಹಣ್ಣುಗಳನ್ನು ತರಿಸಿ ಶೀಕರಣಿ ಮಾಡಿಸಿ ದೊಡ್ಡದೊಂದು ಅಗಲಬಾಯಿಯ ಪಾತ್ರೆಯಲ್ಲಿ ತುಂಬಿಸಿಟ್ಟನು. ಸ್ವಾಮಿಗಳು ರಾಮದೇವರ ಪೂಜೆಯನ್ನಾರಂಭಿಸಿದರು ಅನೇಕ ಬ್ರಾಹ್ಮಣರೂ-ಸುವಾಸಿನಿಯರೂ ಕೂಡಿದ್ದರು ಪೂಜೆಯು ಯಥಾಸಾಂಗವಾಗಿ ನೆರವೇರಿತು. ಎಲ್ಲರೂ ಊಟಕ್ಕೆ ಕುಳಿತರು. ಗೃಹಸ್ಥನೂ ಆತನ ಹೆಂಡತಿಯೂ ಭಯ-ಭಕ್ತಿಯಿಂದ

ಕೈಮುಗಿದುಕೊಂಡು ಶ್ರೀಗಳವರಿಗೆ ಸಾವಕಾಶ ಭೋಜನವಾಗಬೇಕೆಂದು ಬಿನ್ನವಿಸಿಕೊಂಡರು. ಇದೇ ರೀತಿಬ್ರಾಹ್ಮಣ-ಸುವಾಸಿನಿಯರಿಗೂ ಹೇಳಿಕೊಂಡದ್ದಾಯಿತು. ಅರ್ಧಮರ್ಧ ಊಟವೂ ಆಗಿದೆ. ಶೀಕರಣೆಯನ್ನು ಬಡಿಸಹತ್ತಿದರು. ಬ್ರಾಹ್ಮಣರೆಲ್ಲರೂ ಹೊಟ್ಟೆಯಮೇಲೆ ಕೈಯಾಡಿಸುತ್ತ ಶೀಕರಣೆಯನ್ನು ಹೊಡೆಯಹತ್ತಿದ್ದರು. ಅಷ್ಟರಲ್ಲಿ ರಘುನಾಥರಾಯನು ತಾನೂ ಬಡಿಸಬೇಕೆಂದು ಶೀಕರಣೆಯ ಪಾತ್ರೆಯಲ್ಲಿ ಕೈಹಾಕುತ್ತಾನೆ; ತಳದಲ್ಲಿ ಏನೋ ತಟೆದಂತಾಯಿತು. ಕೂಡಲೆ ಅದನ್ನು ಕೈಯಿಂದ ಹಿಡಿದೆತ್ತಿದನು. ಮೂರುವರ್ಷದ್ದೊಂದು ಮುತ್ತಿನಂಥ ಗಂಡುಮಗು. ತನ್ನ ಹೊಟ್ಟೆಯ ಕರಳು. ಸತ್ತುಹೋಗಿತ್ತು. ಗೃಹಸ್ಥನಿಗೆ ಒಮ್ಮಿಂದೊಮ್ಮೆ ಎದೆಗೆ ಗುಂಡುಬಡಿದಂತಾಯಿತು. ಕೂಸನ್ನು ತಕ್ಕೊಂಡವನೇ ಗದ್ದಲ ಮಾಡದಂತೆ ಸುಮ್ಮನೆ ಒಂದು ಕೋಣೆಯಲ್ಲಿ ಹೋಗಿ ಕುಳಿತುಬಿಟ್ಟನು.

ಈಗೊಂದು ತಾಸಿನ ಹಿಂದೆ ಸಂತೋಷಸಾಗರದಲ್ಲಿ ತೇಲುತ್ತಿದ್ದ ತಾನು ಈಗಾಗಲೇದುಃಖಸಾಗರದಲ್ಲಿಮುಳುಗಿಹೋದದ್ದನ್ನು ಕಂಡು ಆತನ ಕುತ್ತಿಗೆಯ ಶಿರಗಳು ಬಿಗಿದುಹೋಗಿದ್ದವು. ಆದರೂ ಅವನು ಶ್ರೀಗಳವರ ಹಾಗೂ ಬ್ರಾಹ್ಮಣರ ಭೋಜನಕ್ಕೆ ತೊಂದರೆಯನ್ನುಂಟುಮಾಡಬಾರದೆಂದು ತನ್ನ ದುಃಖವನ್ನು ತಾನೇ ನುಂಗಿಕೊಂಡು ಮೌನನಾಗಿ ಕುಳಿತಿದ್ದನು. ಬಡಿಸತಕ್ಕವರಿಗೆ ಇದಾವದೂ ಗೊತ್ತಿಲ್ಲ. ಅವರು ಸುಮ್ಮನೆ ಬಡಿಸುತ್ತಿದ್ದರು. ಊಟವು ಮುಗಿಯುತ್ತಬಂತು. ದೇಶಮುಖನ ಹೆಂಡತಿಯು ಮಗುವನ್ನು ಕಾಣದೆ ಹುಡುಕುತ್ತ ಗಂಡನು ಕುಳಿತ ಕೋಣೆಗೆ ಬಂದಳು. ಗಂಡನು ಕಣ್ಣುಮುಚ್ಚಿಕೊಂಡು ಕುಳಿತಿದ್ದನು. ಕಣ್ಣುಗಳೊಳಗಿಂದ ದುಃಖಾಶ್ರುಗಳ ಕೋಡಿ ಹರಿಯುತ್ತಿತ್ತು. ತೊಡೆಯಮೇಲೆ ಸತ್ತ ಮಗುವೊಂದು ಬಿದ್ದಿತ್ತು. ಈ ಭಯಂಕರವಾದ ದೃಶ್ಯವನ್ನು ನೋಡಿದ ಕೂಡಲೆ ಆಕೆಯ ಎದೆಯೊಡೆದು ನೀರಾಯಿತು. ದೊಪ್ಪನೆ ನೆಲಕ್ಕೆ ಬಿದ್ದು ಬಡಬಡಕೊಂಡು ಅಳಹತ್ತಿದಳು. ಗೃಹಸ್ಥನಿಗೆ ಇನ್ನು ತಡೆಯಲಿಲ್ಲ. ಇಲ್ಲಿಯವರೆಗೆ ತಡಕೊಂಡಿದ್ದ ದುಃಖವು ಹೆಂಡತಿಯ ದುಃಖಕ್ಕೆ ಸಂಗಮವಾದಕೂಡಲೆ ಕೋಡಿಯೊಡೆದ ಕೆರೆಯಂತೆ ಒಮ್ಮಿಂದೊಮ್ಮೆ ಅದು ತೀವ್ರವೇಗದಿಂದ ಹರಿಯಹತ್ತಿತು. ಆಗಲೆ ಜನಸಮ್ಮರ್ದವು ಕೂಡಿತು. ಎಲ್ಲರ ಕಣ್ಣುಗಳಲ್ಲಿಯೂ ನೀರುತುಂಬಿದವು ಕಂಠಗಳು ಬಿಗಿದು ಹೋದವು.

ಯಾರಬಾಯಿಂದಲೂ ಮಾತು ಹೊರಡದಂತಾಯಿತು. ಅತ್ತ ಶ್ರೀಗಳವರು ಕೈತೊಳಕೊಂಡು ಬ್ರಾಹ್ಮಣರೊಡನೆ ಮಾತಾಡುತ್ತ ಕುಳಿತಿದ್ದರು. ಅವರಿಗೆ ಯಾವಸುದ್ದಿಯೂ ಇಲ್ಲ. ಬರಬರುತ್ತ ಒಳಗೆ ಅಳುವ ಧ್ವನಿಯು ಕೇಳಿಸಿತು. ಶ್ರೀಗಳವರು ಯೋಚನೆಯಲ್ಲಿ ಬಿದ್ದರು. ಇಂಥಾ ಆನಂದದ ಕಾಲದಲ್ಲಿ ಅಳುತ್ತಿರುವ ಕಾರಣವೇನೆಂದು ವಿಚಾರಿಸಿದಾಗ ಎಲ್ಲವೂ ತಿಳಿಯಬಂತು. ಅಂಥಾ ಸ್ವಾಮಿಗಳವರ ಕಣ್ಣಲ್ಲಿಯೂ ಒಂದೆರಡು ಹನಿ ನೀರು ಉದುರಿದವು. ಬ್ರಾಹ್ಮಣರಂತೂ ಘೋರೆಂದು ಅತ್ತುಬಿಟ್ಟರು. ಮನೆಯೆಲ್ಲವೂ ಶೋಕಾ ಕುಲವಾಯಿತು. ಆಗ ಸ್ವಾಮಿಗಳು:—'ಒಳ್ಳೇದು, ಮಗುವನ್ನು ಇಲ್ಲಿ ತುಕೊಂಡು ಬರ್ರಿ ನೋಡೋಣ'ವೆಂದು ಹೇಳಿದರು. ಸತ್ತುಬಿದ್ದ ಮುತ್ತಿ ನಂಥ ಮಗುವನ್ನು ಎತ್ತಿಕೊಂಡು ಬರುವರಾರು? ಕಡೆಗೆ ತಂದೆಯೇ ಹಾಗೂ ಹೀಗೂ ದುಃಖವನ್ನು ಹತ್ತೊತ್ತಿ ಕೂಸನ್ನೆತ್ತಿಕೊಂಡುಬಂದು ಶ್ರೀಗಳವರೆದುರಿಗೆ ಮಲಗಿಸಿದನು. ಜನರು ಒಬ್ಬರ ಮೇಲೊಬ್ಬರು ಮುಗಿ ಬಿದ್ದು ಮಗುವಿನ ಮೋರೆಯನ್ನು ನೋಡುತ್ತಿದ್ದರು.

ಮಗುವಿನ ಸುಂದರವಾದಮುಖವು ತುಸವಾದರೂ ಕಂದಿಲ್ಲ, ಕುಂದಿಲ್ಲ. ನಿದ್ದೆಹತ್ತಿ ಮಲಗಿದಂತೆ ತೋರುತ್ತಿದೆ. ಟೊಂಕದಲ್ಲಿ ಕಟ್ಟಿದ ಬಂಗಾ ರದ ಗೆಜ್ಜೆಯ ಉಡುದಾರವೂ ಕೈಯಲ್ಲಿಟ್ಟ ಬಂಗಾರದ ಖಡೆಗಳೂ ಕಾಲ ಲ್ಲಿಟ್ಟ ಬೆಳ್ಳಿಯ ಒಡವೆಗಳೂ ಹೊಳೆಯುತ್ತಲಿವೆ. ಗೆಜ್ಜೆ ಹಚ್ಚಿದ ಹೂವುಗ ಳಿಂದ ಅಲಂಕೃತವಾದ ಜುಲುಪೆಗಳು ಜೋತಾಡುತ್ತಲಿವೆ. ಇಂಥಾ ಮಗು ವನ್ನು ನೋಡಿದ ಕೂಡಲೆ ಜನರ ಕಣ್ಣುಗಳು ಪುನಃ ಅಶ್ರುಪೂರಿತವಾದವು. ಅಯ್ಯೋ! ಮನ್ಮಥನಂಥ ಮಗುವನ್ನು ಇಟ್ಟುಕೊಳ್ಳುವದಕ್ಕೆ ತಾಯಿ-ತಂ ದೆಗಳಿಗೆ ಅದೃಷ್ಟವಿಲ್ಲದೆ ಹೋಯಿತಲ್ಲಾ! ಛೀ ವಿಧಾತಾ! ತಪ್ಪು. "ಜಡಜ ಜಂಗೆ ವಿವೇಕಮದೆಲ್ಲಿ ಬಂದುದೋ" ಎಂಬ ಉಕ್ತಿಯು ಇಷ್ಟು ದಿವಸ ಕವಿ ಕಲ್ಪನೆಯೆಂದು ತಿಳಿದದ್ದೇ ನಮ್ಮ ತಪ್ಪು. ನೀನು ಜಡಜಜನಾದ್ದ ರಿಂದ ಮನುಷ್ಯರ ಸಂಕಟಗಳನ್ನು ತುಸುವಾದರೂ ತಿಳಿಯಲಾರೆ. ಇಂಥಾ ಮಾಡಬಾರದ ಕೆಲಸವನ್ನು ಮಾಡುತ್ತಿರುವದರಿಂದಲೇ ನಿನಗೆ ಭೂಲೋಕ ದಲ್ಲಿ ಪೂಜೆಯಿಲ್ಲದೆ ಹೋಗಿದೆ ಕಂಡೆಯಾ! ಇನ್ನಾದರೂ ಹಣೆಯಬರಹ ವನ್ನು ಬರೆಯುವಾಗ ಎಚ್ಚರ ಪಡು, ಎಂಬೀ ಉದ್ಗಾರಗಳು ಅವರ ಬಾಯಿಂದ ಹೊರಟವು.

ಸ್ವಾಮಿಗಳು ಎಲ್ಲವನ್ನೂ ನೋಡಿದರು. ಕೇಳಿದರು. ಅವರಿಗೂ ವ್ಯಸನವಾಯಿತು. ಕೂಡಲೆ ದೇವರನ್ನು ಧ್ಯಾನಿಸಿ ಮಗುವಿನ ಬಾಯಲ್ಲಿ ತೀರ್ಥವನ್ನು ಹಾಕಿ ಶಂಖೋದಕದಿಂದ ಪ್ರೋಕ್ಷಿಸಿದರು. ಮಗುವು ಒಮ್ಮಿಂದೊಮ್ಮೆ ನಿದ್ರೆಯಿಂದ ಎಚ್ಚತ್ತಂತೆ ಅವ್ವಾ-ಅವ್ವಾ ಎಂದು ಒದರುತ್ತ ಎದ್ದು ಕುಳಿತಿತು. ಅಹಹಾ! ಆಗಿನ ಆನಂದದ ಕಲಕಲವನ್ನು ಏನೆಂದು ಹೇಳೋಣ! ತಾಯಿಯಂತೂ ಓಡಿಬಂದು ಮಗುವನ್ನೆತ್ತಿಕೊಂಡು "ಅಯ್ಯೋ ನನ್ನ ಕಂದಾ! ಅರಗಿಳಿಯೇ! ಶ್ರೀಗುರುಗಳ ಹೊಟ್ಟೆಯಲ್ಲಿ ಪುನಃ ಹುಟ್ಟಿ ಬಂದೆಯಾ? ಇಕೋ ನಿನ್ನ ಜನ್ಮದಾತರಿಗೆ ಸಾಷ್ಟಾಂಗವಾಗಿ ವಂದಿಸು. ಸ್ವಾಮೀ ಗುರುಗಳೇ, ಇದು ನನ್ನ ಮಗುವಲ್ಲ, ತಮ್ಮದೇ ಸರಿ, ಎಂದು ಅವರ ಕಾಲಿಗೆರಗಿ ಆನಂದಾಶ್ರುಗಳನ್ನು ಸುರಿಸಹತ್ತಿದಳು. ನೆರೆದವರೆಲ್ಲರೂ ಶ್ರೀಗಳವರ ಮಾಹಾತ್ಮೆಯನ್ನು ಪರಿಪರಿಯಾಗಿ ಕೊಂಡಾಡಹತ್ತಿದರು. ರಘುನಾಥರಾಯನು ಸ್ವಾಮಿಗಳವರಿಗೆ ಅತ್ಯಂತ ಕೃತಜ್ಞನಾಗಿ ಮತ್ತೆ ಎಂಟಾನೆಂಟು ದಿವಸ ಅವರನ್ನು ತನ್ನ ಮನೆಯಲ್ಲಿಯೇ ಇಟ್ಟುಕೊಂಡು ಬ್ರಾಹ್ಮಣ ಭೋಜನವನ್ನು ನಡಿಸಿದನು.

ಸಾಧುಗಳ ಮಹಿಮೆಯು ಅಗಾಧವಾದದ್ದು. ಅವರಿಗೆ ಅಸಾಧ್ಯವೆಂಬ ವಸ್ತುವೇ ಇಲ್ಲ.

ಶ್ರೀಪುರಂದರದಾಸರ ಚಿಕ್ಕ ಮಗುವಾದ ಆಶ್ವಪತಿಯು(೧೦ವರ್ಷದವನು)ಶಿಲಾಮಯವಾದ ಹನುಮಂತದೇವರಿಗೆ ಪ್ರತ್ಯಕ್ಷವಾಗಿ ಊಟ ಮಾಡಿಸಿ ಬಿಟ್ಟನು.

ಕನಕದಾಸನು ಉಡುಪಿಯಲ್ಲಿ ದೇವರಿಂದ ಆಭರಣಗಳನ್ನು ಇಸಕೊಂಡು ಅವನ್ನು ಒತ್ತೇ ಇಟ್ಟು ತನ್ನ ಹಸಿವೆಯನ್ನು ಹಿಂಗಿಸಿಕೊಂಡನು.

ರಾಮದಾಸರೆಂಬವರು ಸತ್ತ ಆಕಳನ್ನು ಬದುಕಿಸಿದರು.

ಒಬ್ಬ ಸತ್ಪುರುಷರು ಹುಲಿಯಮೇಲೆ ಕೂತುಕೊಂಡು ಬಂದರೆ, ಮತ್ತೊಬ್ಬರು ಕಟ್ಟುತ್ತಿದ್ದ ಗೋಡೆಯನ್ನೇ ನಡಿಸಿಕೊಂಡು ಬಂದರ.

ಆದ್ದರಿಂದಲೇ:—

ಪುರಂದರದಾಸರು ವೈಶ್ಯ ಮಾದಮ್ಮನಾ | ವರಕುಮಾರಕನ ಬದುಕಿಸಿದರು ಗುರುಗಡಾ |ವ್ಯಾಸ ಮುನಿರಾಯರು ಭೂಪತಿಗೆ ಬಂದ|
ದುಸ್ತರವಾದ ಕುಹುಯೋಗವ ಬಿಡಿಸಿದರು ಗಡಾ |

ಶಿರಿನಾರಾಯಣಯೋಗಿ (ಶ್ರೀಪಾದರಾಯರು)ವ್ಯಾಸಮುನಿಗೆಬಂದ।
ಉರಗಬಾಧೆಯಕಳೆದು ಪಾಲಿಸಿದರು ಗಡಾ ।
ಹರಿಯೆ ಈ ಕಲಿಯುಗದೊಳಗೆ ನಿನ್ನ ಶರಣರು ಇಂಥ
ಚರಿತೆ ಮಾಡಿಪ್ಪರು........ಹರಿ-ಶರಣರ್ಗೆ ಇದಿರುಂಟೆ ॥

(ವಿಜಯ ದಾಸರು)

ಎಂಬದಾಗಿ ದಾಸರು ಓಕ್ಕಣಿಸಿದ್ದಾರೆ.

---

೧೧ನೆಯ ಕಥೆ

## ಸೆಟ್ಯಾನು ಗುರಪಾದನಾದದ್ದು



ಶ್ರೀಗಳವರು ಶ್ರೀಮಂತನ ಮಗುವೊಂದನ್ನು ಬದುಕಿಸಿದ ಸುದ್ದಿಯು ಹಾ ಹಾ ಅನ್ನುವದರೊಳಗೆ ಊರಲ್ಲೆಲ್ಲ ಹಬ್ಬಿತು. ಲೋಕದಲ್ಲಿ ಒಳ್ಳೇ ವಸ್ತುವಿಗೆ ಹೆಸರಿಡುವ ಜನರೇ ಹೆಚ್ಚು. ಆದರಂತೆಯೇ ಈ ಮಾತನ್ನು ಅನೇಕರು ಅಲ್ಲಗಳೆದರು. ಜನನ-ಮರಣಗಳೆರಡೂ ದೇವರ ಕೃಪೆಯಲ್ಲಿರ ತಕ್ಕವು. ಎಂಥ ಮಾನವನಿಗೂ ಇವು ಸಾಧ್ಯವಲ್ಲ. ಹಾರುವರ ಗುರುವೊಬ್ಬನು ಸತ್ತ ಹುಡುಗನನ್ನು ಬದುಕಿಸಿದನಂತೆ. ಇದು ಸುಮ್ಮನೆ ಟೊಪ್ಪಿಗೆ ಹಾಕತಕ್ಕ ಮಾತು. ಹಾಗಾದರೆ ಈ ಹೊತ್ತೇ ಆತನನ್ನು ಪರೀಕ್ಷಿಸಿ ಬಿಡೋಣ ನಡೆಯಿರಿ. ಹೀಗೆಂಬದಾಗಿ ಕೆಲವು ತಿಳುವಳಿಕೆಯಿಲ್ಲದ ಹುಂಬ ತರುಣರು ಹುರಿದುಂಬಿದರು. ಬಹು ಜನರು ಇವರ ಮಾತನ್ನು ತಿರಸ್ಕರಿಸಿ:—ಆ ಗುರುಗಳು ಸಾಮಾನ್ಯರಲ್ಲ. ಮಾಹಾತ್ಮರು. ಮಹಾಯೋಗಿಗಳು. ಬೇಕಾದದ್ದನ್ನು ಮಾಡಬಲ್ಲರು. ತಿಳಿಯದೆ ಬಡ ಬಡಿಸಬೇಡಿರಿ. ಕೆಟ್ಟೀರಿ. ದೊಡ್ಡವರನ್ನು ಪರೀಕ್ಷಿಸುವದು ಒಳಿತಲ್ಲ, ಎಂದು ಬುದ್ಧಿಹೇಳಿದರು; ಆದರೆ ಇವರ ಬುದ್ಧಿಯ ಮಾತನ್ನು ಕೇಳುವವರಾರು? ತರುಣರು ತಮ್ಮ ತಾರುಣ್ಯದ ಮದದಲ್ಲಿ ಇದೊಂದನ್ನೂ ಲಕ್ಷಿಸಲಿಲ್ಲ. ನಡದೇ ಬಿಟ್ಟರು. ಹೋದವರೇ ಒಬ್ಬ ಬಡ ಕೂಲಿಕಾರಳ ಮಗನಾದ 'ಸೆಟ್ಯಾ' ಎಂಬ ಹುಡುಗನಿಗೆ ಹೆಣದ ವೇಷವನ್ನು ಹಾಕಿ ಕೈಮಾಳಿಯನ್ನು ಕಟ್ಟಿ

ಅದರಲ್ಲಿ ಆತನನ್ನು ಕುಳ್ಳಿರಿಸಿದರು. ಸೆಟ್ಯಾನು ಉಸಿರು ಬಿಗಿಹಿಡಿದುಕೊಂಡು ಕುಳಿತಿದ್ದನು. ಕೆಲವರು ಹತ್ತಿರ ಕುಳಿತು ಅಳುತ್ತಿದ್ದರು. ಅಂತೂ ನೋಡುವವರಿಗೆ ಹೆಣವೆಂಬಂತೆ ತೋರುವ ಹಾಗೆಯೇ ಮಾಡಿದರು. ಆಯಿತು. ಅವರಲ್ಲಿ ಮುಖ್ಯಸ್ಥರಾದ ಹಲವರು ಗುರುಗಳ ಹತ್ತಿರ ಬಂದು ಕಣ್ಣೀರು ಸುರಿಸುತ್ತ:—ನಮ್ಮ ಹುಡುಗನೊಬ್ಬನು ಮರಣಹೊಂದಿದ್ದಾನೆ. ಆತನನ್ನಿಷ್ಟು ದಯಮಾಡಿ ಬದುಕಿಸಿ ಕೊಡಬೇಕು, ಎಂದು ಪ್ರಾರ್ಥಿಸಿಕೊಂಡರು. ಎಲ್ಲವೂ ಕಪಟಾಚರಣೆ ಮೋಸಕೃತ್ಯ. ಗುರುಗಳು ಜ್ಞಾನದೃಷ್ಟಿಯಿಂದ ನೋಡಿದರು. ಇವರ ತಂತ್ರವೆಲ್ಲ ತಿಳಿದುಹೋಯಿತು ಮಾಡಬೇಕೇನು? 'ಜಯ ಲಕ್ಷ್ಮೀಪತೇ! ನಿನ್ನ ಮನಸ್ಸಿಗೆ ಬಂದಂತಾಗಲಿ, ಎಂದು ಉಚ್ಚರಿಸಿ, ಅವರ ಸಂಗಡ ಹೊರಟರು. ಕೂಡಲೆ ಜನರು ತಂಡ-ತಂಡವಾಗಿ ನೆರೆದರು. ನಿಮಿಷಾರ್ಧದಲ್ಲಿ ಅದೊಂದು ಕುಸ್ತಿಯ ಕಣದಂತಾಯಿತು. ವೇಷಹಾಕಿದ ತರುಣರಿಗೆ ಈಗ ಮುಗುಳುನಗೆ. ಹಾರುವರ ಗುರುವಿನ ಸತ್ವವನ್ನು ಬೈಲಿಗೆಳೆಯುವೆವೆಂಬ ಆನಂದದಲ್ಲಿ ಮುಳುಗಿ ಹೋಗಿದ್ದರು.

ಸ್ವಾಮಿಗಳವರು ದೂರದಲ್ಲಿಯೇ ನಿಂತು ಇವರು ಹೂಡಿದ ಆಟವನ್ನೆಲ್ಲ ನೋಡಿದರು. ಅಕಸ್ಮಾತ್ತಾಗಿ ಅವರ ಬಾಯಿಂದ ಹೀಗೆ ಬಂದುಬಿಟ್ಟಿತು:—"ಅಪ್ಪಾ! ಮೊನ್ನೆ ನಾವು ಬದುಕಿಸಿದ ಶ್ರೀಮಂತನ ಮಗನ ಜೀವವು ಇನ್ನೂ ಹೋಗಿದ್ದಿಲ್ಲ. ಆದರಿಂದ ಆತನು ಬದುಕಿದನು; ಆದರೆ ನಿಮ್ಮ ಹುಡುಗನ ಜೀವವು ಸಂಪೂರ್ಣವಾಗಿ ಹೋಗಿಬಿಟ್ಟಿರುವದು. ಅಂದಮೇಲೆ ಇವನು ಬದುಕುವ ಆಶೆಯೇ ಇಲ್ಲ. ನಾವಾದರೂ ಏನು ಮಾಡೋಣ?" ಇಷ್ಟು ಶಬ್ದಗಳು ಅವರ ಬಾಯಿಂದ ಬಂದವೋ ಇಲ್ಲವೋ ಅಷ್ಟರಲ್ಲಿಯೇ ಮೋಸಗಾರರಾದ ತರುಣರು ಕೇಕೆಹೊಡೆದು ನಗಹತ್ತಿದರು; ಮತ್ತು ಸೆಟ್ಯಾನ ಹತ್ತಿರ ಬಂದು:—ಏಳಲೇ ಸೆಟ್ಯಾ, ಗುರುಗಳ ಸತ್ವವು ತಿಳಿದು ಹೋಯಿತು. ಇನ್ಯಾಕೆ ಕುಳಿತಿರುವೆ ಏಳು? ಎಂದು ನಗು ಮಾತಾಡಿದರು; ಚಪ್ಪಾಳೆ ಹೊಡೆದರು; ಗರ್ಜಿಸಿದರು; ಏನಾದರೇನು? ಸೆಟ್ಯಾನು ಏಳಲೇ ಇಲ್ಲ. ಅಹಾ! ಸುಳ್ಳಲ್ಲ. ಮಹಾತ್ಮರ ವಾಣಿಯು ವೇದವಾಣಿಯೆಂಬುದು ಸುಳ್ಳಲ್ಲ. ಭಕ್ತರ ಬಾಯಿಂದ ಬಂದದ್ದನ್ನು ಭಗವಂತನು ತನ್ನದೆಂದೇ ತಿಳಿದು ಅದನ್ನು ತಲೆಯ ಮೇಲೆ ಹೊತ್ತುಕೊಂಡು ನಡೆಸು

ತ್ತಿರುವನು. ಅಂದಮೇಲೆ ಕೇಳುವದೇನು? ಯಾವ ಪರಮಾತ್ಮನು ಹಿಂದಕ್ಕೆ:—

ಸತ್ಯಂ ವಿಧಾತುಂ ನಿಜಭೃತ್ಯ ಭಾಷಿತಂ |
ವ್ಯಾಪ್ತಿಂ ಚ ಭೂತೇಷ್ವಖಿಲೇಷು ಚಾತ್ಮನಃ ||
ಅದೃಶ್ಯತಾತ್ಯದ್ಭುತರೂಪಮುದ್ವಹನ್ |
ಸ್ತಂಭೇ ಸಭಾಯಾಂ ನ ಮೃಗಂ ನ ಮಾನುಷಂ ||
(ಭಾಗವತ)

ತನ್ನ ಪರಮ ಭಕ್ತನಾದ ಪ್ರಲ್ಹಾದನ ನುಡಿಯನ್ನು ಸತ್ಯಮಾಡ ಬೇಕೆಂದು ಮೃಗವೂ ಅಲ್ಲ-ಮನುಷ್ಯನೂ ಅಲ್ಲದಂಥ ಅದ್ಭುತವಾದ ರೂಪ ವೊಂದನ್ನು ಧರಿಸಿಕೊಂಡು ಸಭಾಸ್ತಂಭದಿಂದಲೇ ಹೊರಹೊರಟು ಬಂದನೊ, ಅದೇ ಸ್ವಾಮಿಯು ಈಗ ಪ್ರಲ್ಹಾದಾಂಶರಾದ ಶ್ರೀಗಳವರ ನುಡಿಯನ್ನು ಸತ್ಯ ಮಾಡದೆ ಹೋದಾನೇ? ಅದನ್ನೇ ದಿಟವಾಗಿ ಮಾಡಿ ಬಿಟ್ಟನು. ಇದಕ್ಕೇ ಅಲ್ಲವೇ?

'ಇಂದಿರಾಪತಿ ಅವರಮುಂದೆಕುಣಿಯುವನೋ |
ಅಂದ ವಚನವ ನಿಜಕೆ ತಂದು ಕೊಡುವನೊ' ||

ಎಂಬದಾಗಿ ದಾಸರು ಹೇಳಿಕೊಂಡದ್ದು; ಆದರೆ ತಾರುಣ್ಯ ಭರದಲ್ಲಿದ್ದ ತರು ಣರಿಗೆ ಈ ಯೋಚನೆಯು ಹುಟ್ಟಲಿಲ್ಲ. ಕಡೆಗೆ ಅವರು:—ಗುರುಗಳು ಮನೆಗೆ ಹೋದರು. ಏಳೆಲೇ ಸೆಟ್ಟ್ಯಾ, ಎಂದು ಅವನ ಕೈ ಹಿಡಿದು ಎಬ್ಬಿಸ ಹೋದರು. ನಿಜವಾಗಿಯೂ ಸೆಟ್ಟ್ಯಾನು ಸೆಟೆದೇ ಹೋಗಿದ್ದನು. ಏಳು ವದು ತಾನೇ ಹೇಗೆ? ಆಗ ಅವರ ಎದೆ ಧಸಕ್ಕೆಂದಿತು. ಮೋರೆಯು ಕಪ್ಪಿಟ್ಟಿತು. ಜನರು ಈ ಮೋಸ ಕೃತ್ಯವನ್ನೆಲ್ಲ ನೋಡಿ ಬಾಯಿಗೆ ಬಂದಹಾಗೆ ಬಯ್ಯುಹತ್ತಿದರು. ಸೆಟ್ಟ್ಯಾನ ತಾಯಿಯಂತೂ ಎದೆ ಎದೆ ಬಡಕೊಂಡು ಆಕ್ರೋಶ ಮಾಡುತ್ತಾ:- ಎಲೈ ನೀಚರಿರಾ! ನನ್ನ ಇದ್ದೊಬ್ಬ ಮುದ್ದು ಮಗನನ್ನು ಸದ್ದಿಲ್ಲದೆ ಕರಕೊಂಡು ಹೋಗಿ ಅಲ್ಲದ ಸಲ್ಲದ ವೇಷ ವನ್ನು ಹಾಕಿ ಕೊಂದಿರುವಿರಿ. ಆತನನ್ನು ಬದುಕಿಸಿ ಕೊಟ್ಟರೆ ನೆಟ್ಟಗಾ ಯಿತು. ಇಲ್ಲದಿದ್ದರೆ ಸರಕಾರದಲ್ಲಿ ಫಿರ್ಯಾದು ಮಾಡಿ ನಿಮ್ಮನ್ನು ಸಾಲು ಗಲ್ಲಿಗೆ ಹಾಕಿಸುವೆನು. ಎಚ್ಚರಿಕೆಯಿಂದಿರ್ರಿ, ಎಂದು ಗರ್ಜಿಸಹತ್ತಿದಳು. ಇದರಿಂದಂತೂ ಇವರ ಕೈಕಾಲೇ ಹೋದವು. ಕೆಟ್ಟಮೇಲೆ ಬುದ್ಧಿಬಂತೆಂ

ಬಂತೆ ಯತಿವರರನ್ನು ಪರೀಕ್ಷಿಸಿದ್ದು ಮಹದಪರಾಧವಾಯಿತೆಂಬ ತಿಳುವಳಿಕೆಯು ಆಗ ಹುಟ್ಟಿತು. ಯತಿಗಳ ಮುಂದಾದರೋ ಹೋಗಿ ನಿಲ್ಲುವಂತಿಲ್ಲ; ಸೆಟ್ಟ್ಯಾನ ತಾಯಿಯು ಬಿಡುವಂತಿಲ್ಲ ಇವರಿಗೆ ಹುಳ್ಳೀ ಬಿಗುವು ಬಂತು. ದುರ್ಜನರ ದುಷ್ಕೃತ್ಯಗಳಿಗೆ ಇಂಥ ಫಲ ಸಿಗುವದೇ ಸರಿ. ಹಿಂದಕ್ಕೆ ಯಾದವರು ತಮ್ಮಲ್ಲಿ ಒಬ್ಬನಿಗೆ ಸ್ತ್ರೀ ವೇಷವನ್ನು ಹಾಕಿ ಒಳಗೆ ಒನಿಕೆಯನ್ನಿರಿಸಿ ಈಕೆ ಗರ್ಭಿಣಿಯಾಗಿದ್ದಾಳೆ; ಏನು ಹಡೆಯುವಳೋ ಹೇಳೋಣವಾಗಬೇಕೆಂದು ಋಷಿಗಳ ಹತ್ತರ ಬಂದು ಕೇಳಿಕೊಂಡರಂತೆ. ಅದಕ್ಕೆ ಋಷಿಗಳು ಅವರ ಅಂತರ್ಯವನ್ನೆಲ್ಲ ತಿಳಿದವರಾಗಿ:—ಎಲೈ ಯಾದವರೇ! ಈಕೆ ಒನಿಕೆಯನ್ನು ಹಡೆಯುವಳು. ಆದರಿಂದಲೇ ನಿಮ್ಮ ಸಂಹಾರವಾಗುವದು ಹೋಗಿರಿ, ಎಂದು ಹೇಳಿಬಿಟ್ಟರಂತೆ.

ಈ ತರುಣರು ಮಾಡಿದ್ದೂ ಇದೇ ಸಮಾಚಾರವಾಯಿತು. ಕಡೆಗೆ ವಿಧಿಯಿಲ್ಲದೆ ಸಣ್ಣಮೋರೆ ಮಾಡಿಕೊಂಡು ಸ್ವಾಮಿಗಳವರ ಹತ್ತರಬಂದು ಸಾಷ್ಟಾಂಗವಾಗಿ ವಂದಿಸಿ ನಾವು ಮಾಡಿದ ಮಹಾಪರಾಧವನ್ನು ಕ್ಷಮಿಸಬೇಕೆಂದೂ ಆ ಹುಡುಗನನ್ನು ಬದುಕಿಸಿಕೊಡಬೇಕೆಂದೂ ದೈನ್ಯದಿಂದ ಬೇಡಿಕೊಂಡರು. ಅಂಗಲಾಚಿದರು. ಶ್ರೀಗಳವರಿಗೆ ಕರುಣಬಂತು. ತತ್ಕ್ಷಣವೇ ಅವರಿಗೆ ಅಭಯವನ್ನಿತ್ತು ಯೋಗಶಕ್ತಿಯಿಂದ ಯಮಲೋಕಕ್ಕೆ ತೆರಳಿದರು. ಯಮನ ದರ್ಬಾರದಲ್ಲಿ ಇವರಿಗೆ ಬಹುಮರ್ಯಾದೆಯಾಯಿತು. ನಮ್ಮ ಸೆಟ್ಟ್ಯಾಯೆಂಬ ಹುಡುಗನ ಜೀವವನ್ನು ಕೊಡಬೇಕೆಂದು ಕೇಳಿಕೊಂಡರು. ಯಮನು ತಥಾಸ್ತು, ಅಂದನು. ಶ್ರೀಗಳವರು ಬಂದುಬಿಟ್ಟರು. ಅತ್ತ ಸೆಟ್ಟ್ಯಾನು ಕಣ್ಣುತರೆದ್ಕೊಂಡುಕುಳಿತಿದ್ದನು ಸೆಟ್ಟ್ಯಾನತಾಯಿಗೂ ಜನರಿಗೂ ಆದ ಆನಂದವನ್ನು ಇಷ್ಟೆಂದು ಹೇಳತೀರದು. ಚೇಷ್ಟೆಮಾಡಲೆಳಿಸಿದ ತರುಣರಿಗಂತೂ ಶ್ರೀಗಳವರೇ ಸಾಕ್ಷಾತ್‌ಶಂಕರನೆಂಬ ಭಾವನೆಯಾಯಿತು. ಅವರು ಸೆಟ್ಟ್ಯಾನನ್ನು ಕರಕೊಂಡು ಬಂದು ಸ್ವಾಮಿಗಳವರ ಪಾದಕ್ಕೆ ಕೆಡಹಿ ತಮ್ಮಿಂದಲೇ ಈತನ ಪುನರ್ಜನ್ಮವಾದಂತಾಯಿತು. ಆದರಿಂದ ತಮ್ಮ ಹೆಸರನ್ನೇ ಇಟ್ಟು ಈತನನ್ನು ಆಶೀರ್ವದಿಸಬೇಕು, ಎಂದು ಬೇಡಿಕೊಂಡರು. ಆಗ ಶ್ರೀಗಳವರು ಅಂತಃಕರಣದಿಂದ 'ಗುರುಪಾದ' ನೆಂಬ ಹೆಸರು ಇಡ ಹೇಳಿ ಆಶೀರ್ವಾದ ಮಾಡಿ ಕಳಿಸಿದರು.

ಲೋಕದಲ್ಲಿ ಸಾಮಾನ್ಯ ಜನನಿಂದೆಯೇ ಪಾಪಕರವೆಂದು ಹೇಳು

ತ್ತಿರುವಾಗ ಸತ್ಪುರುಷರ ನಿಂದೆಯಂತೂ ಮಹಾ ಅನರ್ಥಕ್ಕೆ ಕಾರಣವೆಂದು ಬೇರೆ ಹೇಳಬೇಕೆ? ಅವರು ಶಾಪಾನುಗ್ರಹಶಕ್ತಿಯುಳ್ಳವರು ಅಸಾಧ್ಯ ಕಾರ್ಯಗಳನ್ನೂ ಸಾಧ್ಯವಾಗಿ ಮಾಡಿ ತೋರಿಸತಕ್ಕ ಅಗಾಧ ಶಕ್ತಿಯುಳ್ಳವರು. ಇಂಥಾ ಮಹಾಮಹಿಮರನ್ನು ಕೆಣಕಿದರೆ ಪಾಮರರಾದ ನಮ್ಮ ಗತಿಯೇನಾದೀತೆಂಬದನ್ನು ಪ್ರತಿಯೊಬ್ಬ ಮಾನವನೂ ಲಕ್ಷದಲ್ಲಿ ಇಟ್ಟು ನಡೆಯಬೇಕು. ಈ ವಿಷಯದಲ್ಲಿ ಒಳ್ಳೇ ಅನುಭವಿಕನಾದ ಒಬ್ಬ ಕವಿಯು ಹೀಗೆ ಹೇಳಿಕೊಂಡಿದ್ದಾನೆ:—

ರಕ್ಕಸನು ಮನೆಯವರ ಕಂಡರೆ| ಕರ್ಕಶನು ನೆರೆಹೊರಗೆ ಸರ್ಪರ|
ಸೊಕ್ಕಿ ವೆಕ್ಕಸನಾಗಿ ಗರ್ವದಿ ಧಿಕ್ಕರಿಸಿ ನುಡಿವ ||
ಉಕ್ಕಿ ಉರಿವುತ ಉತ್ತಮರುಗಳು| ಒಕ್ಕಲಿಗೆ ನೀರೆರೆವನಕಟಾ|
ಮಕ್ಕಳಾಟಿಕೆಯಂತೆ ಚಿಕ್ಕನೆ ಕೆಡುವನವನೆಂದಾ||

---

## ೧೧ನೆಯ ಕಥೆ

## ಧ್ಯಾನಪ್ರಾದರ್ಶನ.



ಯತಿವರ ದೂರದಿ ವೃತತಿಗೆಯ್ದಲಾಗಸ| ಪಥದೊಳು ಕಂಡಾನುತಿ
ಸಿದ ಮಹಿಮಾ ||
ರಾಘವೇಂದ್ರ ಗುಣಸಾಂದ್ರಾ ||
(ಜಗನ್ನಾಥದಾಸರು)

---

ಒಮ್ಮೆ ಶ್ರೀಗಳವರು ಶಿಷ್ಯರಿಗೆ ಪಾಠ ಹೇಳುತ್ತ ಕುಳಿತಿದ್ದರು. ಹೇಳ ಹೇಳುತ್ತಿರಲಿಕ್ಕೆ ಒಮ್ಮಿಂದೊಮ್ಮೆ ಎದ್ದುನಿಂತು ಆಕಾಶದ ಕಡೆಗೆ ದಿಟ್ಟಿಸಿ ನೋಡಿ ಅಲ್ಲಿಯೇ ಸಾಷ್ಟಾಂಗಹಾಕಿದರು; ಮತ್ತು ಮುಂದೆ ನಮ್ಮ ವಿಚಾರವೇನೆಂದು ಕೇಳಿ ತಲೆಯಲ್ಲಾಡಿಸಿ ಕುಳಿತುಕೊಂಡು ಬಿಟ್ಟರು. ಗುರುಗಳ ಈ ಕರಪಲ್ಲವಿಯು ಶಿಷ್ಯರಿಗೆ ತಿಳಿಯಲಿಲ್ಲ. ಅವರು ಗೊಂದಲದಲ್ಲಿ ಬಿದ್ದರು,

ಪಾಠಹೇಳುವ ಕಾಲಕ್ಕೆ ಹೀಗೆ ಮಾಡಿದ್ದನ್ನು ಅವರು ಎಂದೂ ನೋಡಿರಲಿಲ್ಲ. ಅದರಿಂದ ಅತೀವ ಸೋಜಿಗಗೊಂಡು ಗುರುಗಳನ್ನೇ ಕೇಳಿದರು. ಗುರುಗಳು ಪಾಠವನ್ನು ಅಷ್ಟಕ್ಕೇ ನಿಲ್ಲಿಸಿ:—ಎಲೈ ಶಿಷ್ಯೋತ್ತಮರೇ! ಈ ಹೊತ್ತು 'ಶ್ರೀಕೃಷ್ಣದ್ವೈಪಾಯನ' ರೆಂಬ ಯತಿಗಳು * ದೇಹವಿಟ್ಟು ವಿಮಾನಾರೂಢರಾಗಿ ಸ್ವರ್ಗಲೋಕಕ್ಕೆ ತೆರಳಿದರು. ಅವರನ್ನು ಕಂಡು ವಂದಿಸಿದೆವು; ಮತ್ತು ನಮ್ಮನ್ನು ಎಂದು ಕರಕೊಂಡು ಹೋಗುತ್ತೀರೆಂದು ಕೇಳಲು, ಅವರು ತಮ್ಮ ಎರಡು ಬೊಟ್ಟುಗಳನ್ನು ಮೂರು ಸಾರೆ ತೋರಿಸಿದರು. ಇದರಿಂದ ಇನ್ನೂ ಎರಡು ವರ್ಷ ಎರಡು ತಿಂಗಳು ಎರಡು ದಿವಸಕ್ಕೆ ನಾವು ದೇಹವಿಡುವೆವೆಂಬ ಸೂಚನೆಯನ್ನು ಮಾಡಿದಂತಾಯಿತು. ಅದರಿಂದ ಅವರ ಮಾತಿಗೆ ಸಮ್ಮತಿಸಿ ತಲೆಯಲ್ಲಾಡಿಸಿದೆವು. ಇಷ್ಟೇ ಈಗ ನಡೆದಿದ್ದು, ಎಂದು ವಿವರವಾಗಿ ಹೇಳಿದರು. ಮುಂದೆ ಪರೀಕ್ಷಿಸಲು, ಗುರುಗಳು ಹೇಳಿದ ವೇಳೆಗೇ ಶ್ರೀಕೃಷ್ಣದ್ವೈಪಾಯನ ಯತಿಗಳು ದೇಹವಿಟ್ಟದ್ದು ತಿಳಿಯಬಂತು. ಕೂಡಲೆ ಊರಲ್ಲೆಲ್ಲ ಸುದ್ದಿ. 'ನಮ್ಮ ಗುರುಗಳು ಸ್ವರ್ಗಕ್ಕೆ ಹೋಗುವ ಯತಿಗಳನ್ನು ಕಂಡರೆಂದು' ಎಲ್ಲರಿಗೂ ಆಶ್ಚರ್ಯದ ಮೇಲೆ ಆಶ್ಚರ್ಯ! ಆ ಆಶ್ಚರ್ಯದ ಭರದಲ್ಲಿ:—ನಮ್ಮ ಗುರುರಾಜ

* ಇವರು ಉತ್ತರಾದಿ ಮಠದ ಯತಿಗಳು. ಆದರೆ ಸಂಸ್ಥಾನವನ್ನಾಳಿದವರಲ್ಲ. ಶ್ರೀಮದಾಚಾರ್ಯರ ತರುವಾಯ ಗಳನೆಯವರಾದ ಶ್ರೀವೇದವ್ಯಾಸತೀರ್ಥರಿಂದ—ಈ ಕೃಷ್ಣದ್ವೈಪಾಯನರು-ಶ್ರೀವೇದೇಶತೀರ್ಥರು-ವಿದ್ಯಾಪತಿತೀರ್ಥರು ಎಂಬ ೩ ಜನರೂ ಸಂನ್ಯಾಸಮಾತ್ರ ಪಡೆದರು. ಸಂಸ್ಥಾನವು ಮುಂದೆ ಶ್ರೀವಿದ್ಯಾಧೀಶಸ್ವಾಮಿಗಳಿಗಾಯಿತು. (ಇವರ ಮಠವು ರಾಣೇಬೆನ್ನೂರಲ್ಲಿದೆ ) ಕೃಷ್ಣದ್ವೈಪಾಯನರು ಜ್ಯೇಷ್ಠ ಶುದ್ಧ ಪೌರ್ಣಿಮಾ ದಿವಸ ದೇಹವಿಟ್ಟರು. ಇವರ ವೃಂದಾವನವು ಮಳಖೇಡಕ್ಕೆ ಹೋಗುವ ದಾರಿಯಲ್ಲಿ ಕೃಷ್ಣಾ ಷ್ಟೇಶನ್ನದಿಂದ ನಾಲ್ಕು ಮೈಲಿನ ಮೇಲೆ ಇರುವ ಕುಸುಮೂರ್ತಿ ಎಂಬ ಊರಲ್ಲಿ ಭೀಮಾತೀರದೊಳಗೆ ಅದೆ. ಈ ವೃಂದಾವನದಿಂದ ಒಂದೇ ಒಂದು ಮೈಲಿನ ಮೇಲೆ ಕೃಷ್ಣಾ-ಭೀಮಾಸಂಗಮದಲ್ಲಿ ಮಂತ್ರಾಲಯಮಠದ 'ಜಿತಾಮಿತ್ರ'ರೆಂಬ ಸ್ವಾಮಿಗಳವರ ಕಟ್ಟೆಯದೆ-

ಶ್ರೀಕೃಷ್ಣದ್ವೈಪಾಯನ ಯತಿಗಳನ್ನು ಮಹನ್ನೀಯರಾದ ಶ್ರೀಜಗನ್ನಾಥದಾಸರು ಹೇಗೆ ಹೊಗಳಿದ್ದಾರೆ ನೋಡಿರಿ.

ಕೃಷ್ಣದ್ವೈಪಾಯನ ಗುರುರಾಯಾ| ಮನೋ| ಭೀಷ್ಟದಾಯಕ ಕರುಣದಿ ಪಿಡಿಕೈಯ||
ರಾಮಕೃಷ್ಣಪವನಾತ್ಮಜನಂಘ್ರಿ| ತಾಮರಸವ ಧೇನಿಸುವ ಪರಿವ್ರಾಜಾ||
ಭೀಮಾತೀರಪಿಪ್ಪಲಭೂಜಾಮೂಲ| ಸೀಮೆಯೊಳಗೆ ರಾಜಿಸುವ ಯತಿರಾಜ||

ಸಾರ್ವಭೌಮರಿಗೆ ಜಯು! ಶ್ರೀಮತ್ಕರ್ನಾಟಕ ಯತಿಕುಲತಿಲಕರಿಗೆ ಜಯ! ಎಂಬ ನಾಮಘೋಷವು ದಶ ದಿಕ್ಕುಗಳನ್ನು ತುಂಬಿ ಬಿಟ್ಟಿತು. ಎಲ್ಲರೂ ಗುರುಗಳನ್ನು ಮನಃಪೂರ್ವಕ ವಂದಿಸಿ ಹೊರಟು ಹೋದರು.

ಪರಮಾತ್ಮನನ್ನೇ ಸಾಕ್ಷಾತ್ಕರಿಸಿಕೊಳ್ಳುವಂಥ ಪರಮ ಭಾಗವತರಿಗೆ ಆತನ ಆಜ್ಞಾಧಾರಕರಾದ ದೇವತೆಗಳನ್ನು ಕಾಣುವದು ಏನಾಶ್ಚರ್ಯವಾದೀತು?

ಪೂರ್ವದಲ್ಲಿ ಶ್ರೀಪುರಂದರದಾಸರಿಗೆ ಪರಮಾತ್ಮನು ತಾನೇ ತುಪ್ಪದ ಬಿಂದಿಗೆಯನ್ನು ಹೊತ್ತು ತಂದು ಕೊಡಲಿಲ್ಲವೇ?

ಹೆಳವನಕಟ್ಟೆ ಗಿರಿಯಮ್ಮನು ಮೊಸರು ಕಡೆಯುವಾಗ ಹೇಳುತ್ತಿರುವ ಹಾಡಿಗೆ ಮೆಚ್ಚಿ ಪ್ರತ್ಯಕ್ಷ ಬಾಲಗೋಪಾಲಮೂರ್ತಿಯು ಎದುರಿಗೆ ಬಂದು ಥೈ ಥೈ ಕುಣಿಯುತ್ತಿರಲಿಲ್ಲವೇ?

ಈ ರೀತಿಯಾಗಿ ಅನೇಕ ಮಹಾತ್ಮರು ದೇವರ ಸಂಗಡ ಆಟವಾಡಿರುವರು ಆದುದರಿಂದಲೇ ದಾಸರಾಯರು:—

ಹರಿಭಕುತಿಯುಳ್ಳವರ ಶರಿರವೇ ಕುರುಕ್ಷೇತ್ರ | ಇವರು |
ನರರೆಂದು ತಿಳಿಯುವರೆ ನರಕವಾಸಿಗಳು || ಪ ||

ಎಂದು ಹೇಳಿಕೊಂಡಿರುವರು.

## ೧೫ನೆಯ ಕಥೆ.

## ಪಾದೋದಕ ಮಹಿಮೆ.

ಪಾದೋದಕತಂದು ದಿನದಿನ ಸೇವಿಸೆ | ಸಾಧುಗಳಾಧಿ ವ್ಯಾಧಿ ಗಳಳಿಯೆ |
ರಾಘವೇಂದ್ರರಾಜಿತ ಗುಣಸಾಂದ್ರಾ ||
(ಜಗನ್ನಾಥದಾಸರು.)

ಶ್ರೀಗಳವರ ಮಾಹಾತ್ಮ್ಯವು ಹನುಮಪ್ಪನ ಬಾಲದಂತೆ ಸರಸರನೆ ಬೆಳೆದು ಹೋಯಿತು. ಹಿಮ್ಮೆ ಕಡಪಾ ತಾಲೂಕು ಪುಷ್ಪಗಿರಿಯಿಂದ ಕೆಲ ಜನ ಸಾಧುಗಳು ಮಂತ್ರಾಲಯಕ್ಕೆಂದು ಹೊರಟರು. ಅವರು ಬರುವಾಗ ದಾರಿಯುದ್ದಕ್ಕೂ ರಾಯರ ಭಜನೆ-ರಾಯರ ಸ್ತೋತ್ರ-ರಾಯರ ಮಹಿಮಾ ವರ್ಣನೆ ಇದೇ ನಡೆದಿತ್ತು. ಅವರು ಹೇಳಿ ಕೇಳಿ ಸತ್ಪುರುಷರು; ನಮ್ಮಂತೆ ಕಾಡು ಹಂಟೆಗಳನ್ನು ಕೊಚ್ಚುತ್ತ ಆತ್ಮಪೌರುಷವನ್ನು ಹೇಳಿಕೊಳ್ಳುತ್ತ ಕಾಲಕಳೆಯುವರೇ? ಆದರೇನು ಶ್ರೀಪುರಂದರದಾಸರು ಹಿಕ್ಕಣಿಸಿದಂತೆ:-

"ಹರಿಹರ ನಿಮ್ಮನ್ನೊಲಿಸ ಬಹುದು |
ನರಜನರೊಲಿಸೋದು ಬಹುಕಷ್ಟ ||

ಎಂಬಂತೆ ಈ ಲೋಕದಲ್ಲಿ ಹರಿಹರರೊಲಿಮೆಗಿಂತ ನರರೊಲಿಮೆಯೇ ಕಡು ಕಷ್ಟವಾಗಿರುವದು. ಯಾಕಂದರೆ ಅವರು ಯಾವದೊಂದಕ್ಕೂ ಹಿಂದೊಂದು ಹೆಸರಿಟ್ಟೇ ಇಡುವರು. ಇವರ ಕೂಡ ಮಾತನಾಡುವದೂ ಕಷ್ಟ. ಬಿಡುವದೂ ಕಷ್ಟ ಜನರ ಬಾಯಿ ಮುಚ್ಚುವವರಾರು? ಆದ್ದರಿಂದ ಸತ್ಪುರುಷರಾದವರು ಇಂಥವರ ಮಾತುಗಳಿಗೆ ಕಿವಿಗೊಡುವದಿಲ್ಲ. ತಾವು ಮಾಡುವ ಕಾರ್ಯವನ್ನು ಮಾಡುತ್ತಲೇ ಇರುವರು ಅದರಂತೆಯೇ ಪುಷ್ಪಗಿರಿಯಿಂದ ಹೊರಟ ಸಾಧುಗಳೂ ರಾಯರ ಮಹಿಮಾ ವರ್ಣನ ನಡಿಸಿದ್ದರು. ಅವರ ಸಂಗಡ ಕೆಲವರು ಈ ತ-ದ ಜನರಿದ್ದರು ಅವರಿಗೆ ರಾಯರ ವರ್ಣನೆಯು ಕ್ರಿಮಿಶೂಲಿಯನ್ನುಂಟು ಮಾಡಿತು ಲೋಕದ ಸ್ವಭಾವವೇ ಹೀಗೆ.

ಲೋಕವಾರ್ತಾನುಗಮನೆ ಜಿಂಹ್ವಸ್ಯೇಕಾಸಹಸ್ರಶಃ ||
ಶ್ರೀಶವಾರ್ತಾನುಗಮನೆ ದ್ವಾತ್ರಿಂಶದ್ದಂತ ಕೀಲಿತಾಃ ||

[ಲೋಕವಾರ್ತೆಯುಬ್ಬಾದರೋ ಒಂದೇ ನಾಲಿಗೆಯು ಸಾವಿರ ನಾಲಿಗೆಯಷ್ಟು ಕೆಲಸ ಮಾಡುವದು (ಬೇಕಾದಷ್ಟು ಹರಟುವದು) ಅದೇ ಪರಮಾತ್ಮನ ಮಾತೆಂದರೆ ತೀರಿತು. ಮೂವತ್ತೆರಡು ಹಲ್ಲುಗಳ ನಡುವೆ ಸಿಕ್ಕಿಕೊಂಡು ಬಿಡುವದು. ಪಿಟ್ಟೆಂದು ಮಾತಾಡುವದಿಲ್ಲ]

ಇದಕ್ಕಾಗಿಯೇ ದಾಸರಾಯರು:—

"ಪುಸ್ತಕವನಿಟ್ಟು ಪುರಾಣ ಶಾಸ್ತ್ರಂಗಳ |
ವಿಸ್ತರಿಸಿ ಹರಿಯ ಕಲ್ಯಾಣ ಗುಣಕಥೆಯ |
ಸ್ವಸ್ಥದಿಂ ಕುಳ್ಳಿರ್ದು ಕೇಳಿ ಬಹು ವಿನಯದಲಿ |
ಮಸ್ತಕವ್ಯಥೆ ಬಂದು ಮನೆಗೆ ಬಹೆನೀ ||
ಹಸ್ತದಿಂ ಹಣಬತ್ತ ಹಚ್ಚಡಂಗಳಕೊಟ್ಟು |
ವಿಸ್ತರಿಸಿ ಬಿನುಗು ಚರಿತ್ರ ಲಾಲಿಸುತ |
ದುಸ್ತರ್ಕಲಿತ್ತ ಚದುರಂಗ ಪಗಡೆಗಳುದ |
ಯಾಸ್ತಮಾನದ ತನಕ ನೀನೇಳದಿಹೆ ಮರುಳೆ ||
ಧರ್ಮೇಂದ್ರಿಯಕ್ಕೆ ದಟ್ಟಡವಿಯ ನಿಡಲೊಲ್ಲೆದು |
ಷ್ಕರ್ಮೇಂದ್ರಿಯಕ್ಕೆ ಕಾಲ್ಗೆರಗುತಿಹೆ ನೀ ಮರುಳೆ ||"
(ಪುರಂದರದಾಸರು.)

"ಕಲ್ಪನಾಕಥೆಗಳಲಿ ಮಮತೆ ತೋರ್ವರು ನಿಮ್ಮ ಸಂ |
ಕಲ್ಪಕಥೆಗಳಲಿ ಕಳೆಯರು ನಿಮಿಷಾ ||"
(ಕನಕದಾಸರು.)

ಇತ್ಯಾದಿಯಾಗಿ ಹೇಳಿಕೊಂಡಿರುವರು. ಇರಲಿ.

ಆಗ ಈ ಹರಟೆಹೊಡೆಯುವ ಜನರು ಸಾಧುಗಳನ್ನು ಕುರಿತು:— ಸಾಕು, ಸಾಕು ನಿಮ್ಮ ಡಂಭಾಚಾರ. ಚಿತ್ತಶುದ್ಧಿಯಿಂದ ಭಜನೆಮಾಡದೆ ಬರೇ ದಾರಿಯುದ್ದಕ್ಕೂ ವರ್ಣಿಸುತ್ತ ಹೋದರೆ ನಿಮ್ಮಲ್ಲಿ ಭಕ್ತಿಯುಂಟೆಂದು ಯಾರು ತಿಳಿಯುವರು? ಇದೆಲ್ಲ ನಮ್ಮಂಥ ಲೌಕಿಕರಿಗೆ ಟೊಪ್ಪಿಗೆ ಹಾಕುವ ಮಾತು, ಉದರ ವೈರಾಗ್ಯ, ಎಂಬದಾಗಿ ಧಿಕ್ಕರಿಸಿ ನುಡಿದರು. ಸಾಧುಗಳಿಗೆ ನಗೆ ಬಂತು. ಯಾವ ಮಾಹಾತ್ಮರ ಗುಣವರ್ಣನೆಯು ಅಣು

ಮಾತ್ರವೂ ಕೂಡ ಕಿವಿಯಲ್ಲಿ ಅಮೃತಧಾರೆಯನ್ನು ಸುರುವಿದಂತಾಗಿ ಮುಕ್ತಿದಾಯಕವಾಗಿರುವದೋ ಅಂಥವರ ನಾಮಾಮೃತವೇ. ಇವರಿಗೆ ಕರ್ಣಶೂಲಿಯನ್ನುಂಟು ಮಾಡಿತಲ್ಲ! ಆಗಲಿ. 'ಭಿನ್ನರುಚಿರ್ಹಿ ಲೋಕಃ' ಎಂಬಂತೆ ಲೋಕದಲ್ಲಿ ವಿಚಿತ್ರತರದ ಜನರಿರುವರು. ಮಾಡತಕ್ಕದ್ದೇನು? ಎಂಬದಾಗಿ ನುಡಿದು ಮನಸ್ಸಿನಲ್ಲಿಯೇ ರಾಯರ ಗುಣವರ್ಣನೆಯನ್ನು ಮಾಡುತ್ತ ನಡೆದರು. ಮಾನಸಕ್ರಿಯೆಗಳಿಗೆ ಯಾರ ಹೆದರಿಕೆಯೇನು? ಮುಂದೆ ತಾಸೆರಡು ತಾಸುಗಳು ಕಳೆದವು. ಅದೇನಾಯಿತೋ ತಿಳಿಯದು. ಹಿಮ್ಮೊಂದೊಮ್ಮೆ ಧಿಕ್ಕರಿಸಿ ನುಡಿದ ಜನರ ಕೈಕಾಲೇ ಹೋದಂತಾಯಿತು. ನಡುಮಾರ್ಗದಲ್ಲಿಯೇ ಕುಳಿತು ಬಿಟ್ಟರು. ಮೇಲಕ್ಕೇಳಲಿಕ್ಕೂ ಬಾರದು. ಆಗ ಅವರಿಗೆ ಹೊಳೆಯಿತು, ಇದೆಲ್ಲ ರಾಯರ ಮಾಹಾತ್ಮ್ಯೆಯಿಂದು. ಕೂಡಲೆ ಪಶ್ಚಾತ್ತಾಪವನ್ನು ಪ್ರಕಟಿಸಿ ರಾಯರನ್ನು ಬೇಡಿಕೊಳ್ಳಹತ್ತಿದರು. ನಮ್ಮಂಥ ಮಂದಮತಿಗಳಾದ-ಚಪಲಚಿತ್ತರಾದವರ ಮಾತು ಇಷ್ಟೇ ಸರಿ. 'ಸಂಕಟ ಬಂದಾಗ ವೆಂಕಟರಮಣ' ನೆನ್ನುವದು. ಆಗ ರಾಯರು ಅಂತಃಕರಣದಿಂದ ಸಾಧುಗಳ ಸ್ವಪ್ನದಲ್ಲಿ ಕಾಣಿಸಿಕೊಂಡು 'ನಮ್ಮ ಪಾದೋದಕವನ್ನು ಅವರಿಗೆ ಹಾಕಿರಿ; ಅಂದರೆ ಗುಣವಾಗುವದು.' ಎಂಬದಾಗಿ ಅಪ್ಪಣೆ ಕೊಟ್ಟರು. ಅದರಂತೆ ಸಾಧುಗಳು ರಾಯರ ಪಾದೋದಕವನ್ನು ದಿನಾಲು ಕೊಡಹತ್ತಲು ಅವರ ಕ್ಷೀಣತೆ-ದುರ್ಬಲತ್ವಗಳೆಲ್ಲ ಹೋಗಿ ಮೊದಲಿನಂತಾದರು. ಯಾರ ಪಾದೋದಕ ಮಹಿಮೆಯೇ ಇಷ್ಟು ವಿಚಿತ್ರವಾಗಿರುವದೋ ಅಂಥ ಮಹನ್ನೀಯರ ಪ್ರತ್ಯಕ್ಷ ದರ್ಶನದ ಮಹಿಮೆಯನ್ನಂತೂ ಕೇಳತಕ್ಕದ್ದೇನು? ಅವರು ನರರಲ್ಲ ಸುರರೇ ಸರಿ, ಎಂದು ಕೊಂಡಾಡುತ್ತ ಮಂತ್ರಾಲಯಕ್ಕೆ ಬಂದು ರಾಯರ ದರ್ಶನ ತಕ್ಕೊಂಡು ಧನ್ಯರಾದರು.

ಇದೇಮೇರೆಗೆ—ನಗರದ (ವೇಣುಪುರ-ಬಿದನೂರು) ಸಂಸ್ಥಾನಿಕನು ಹಿಮ್ಮೆ ಏನೋ ಕಾರಣದಿಂದ ತನ್ನ ರಾಜ್ಯದಲ್ಲಿ ಬಂದ ರಾಯರಿಗೆ ಅಪಮಾನ ಮಾಡಲು, ಆತನ ದೇಶದಲ್ಲಿ ಅಖಂಡವಾದ ದುರ್ಭಿಕ್ಷೆ ಉಂಟಾಯಿತು. ಆಗ ಮಹಾದೇವರು ಸ್ವಪ್ನದಲ್ಲಿ ಬಂದು:—ರಾಯರನ್ನು ಪ್ರಸನ್ನೀಕರಸಿಕೋ; ಇಲ್ಲವಾದರೆ ನೆಟ್ಟಗಾಗಲಿಕ್ಕಿಲ್ಲವೆಂದು ಹೇಳಿ ಹೋದಂತಾಯಿತು. ಅದರಿಂದ ಸಂಸ್ಥಾನಿಕನು ಬುದ್ಧಿಬಂದವನಾಗಿ ಕೂಡಲೆಶಿಕಾರಿಪುರಕ್ಕೆ ಹೋಗಿ ಅಲ್ಲಿದ್ದ ರಾಯರನ್ನು ಕ್ಷಮಾಪಣೆ

ಬೇಡಿಕೊಂಡು ತನ್ನ ಊರಿಗೆ ಕರಕೊಂಡು ಬಂದನಂತೆ. ರಾಯರ ತಪಃಸಾಮರ್ಥ್ಯದಿಂದ ಆತನ ದೇಶದಲ್ಲಿ ಹನ್ನೆರಡುವರ್ಷ ಮಳೆ-ಬೆಳೆ ಇಲ್ಲದಿದ್ದರೂ ದುರ್ಭಿಕ್ಷವುಂಟಾಗಲಿಲ್ಲ.

ಅತಏವ ಜಗನ್ನಾಥದಾಸರು:—

"ದ್ವಾದಶವರ್ಷಾನ್ನೋದಕಸಲಿಸಿದಿ | ಮೇದಿನಿಪತಿಗೆ ಮಹಾ
ದಯವಂತಾ ||
ರಾಘವೇಂದ್ರರಾಜಿತಗುಣಸಾಂದ್ರಾ" ||

ಎಂಬದಾಗಿ ಹೇಳಿಕೊಂಡಿದ್ದಾರೆ.

'ಬಲ್ಲವನೇ ಬಲ್ಲ ಬೆಲ್ಲದ ಸವಿ' ಎಂಬಂತೆ ಮಹಾನುಭಾವರ ಮಹಿಮಾ ವಿಶೇಷವನ್ನು ಅಂಥ ಮಹಾನುಭಾವರೇ ಬಲ್ಲರಲ್ಲದೆ ನಮ್ಮಂಥ ನರಕುರಿಗಳು ತಿಳಿಯಲಾರೆವು. ಹಿಂದಕ್ಕೆ ಕೌರವನಲ್ಲಿ ಮಧ್ಯಸ್ಥಿಕೆಗೆಬಂದ ಶ್ರೀಕೃಷ್ಣಮೂರ್ತಿಯನ್ನು ಅವತಾರಿಕ ಪುರುಷನೆಂದು ತಿಳಿಯುವದಂತೂ ಒತ್ತಟ್ಟಿಗಿರಲಿ; ಈತನೊಬ್ಬ ಸಾಮಾನ್ಯ ಗೊಲ್ಲನೆಂದೇ ತಿಳಿದು ಕಂಬಕ್ಕೆ ಕಟ್ಟಿ ಹಾಕುವ ಯೋಚನೆಯನ್ನು ಕೌರವಾದಿಗಳು ಮಾಡಲಿಲ್ಲವೇ? ಅದೇ ಭಕ್ತಶಿಖಾಮಣಿಯಾದ ವಿದುರನು ಈತನೇ ಸಾಕ್ಷಾತ್ ಪರಮಾತ್ಮನೆಂದು ಬಗೆದು ಎಲ್ಲಿಯೋ ಹಿಂದು ಮುಕ್ಕು ಹಾಲನ್ನು ಕುಡಿಯಲಿಕ್ಕೆ ಕೊಡಲು, ಭಗವಂತನು ಅದನ್ನೇ ಸಮುದ್ರದೋಪಾದಿ ಕಾಲುವೆ ಹರಿಸಿ ಬಿಟ್ಟು ವಿದುರನ ಭಾಗ್ಯವನ್ನು ಕೊಂಡಾಡಿದನು.



೧೩ನೆಯ ಕಥೆ

## ಶಿಷ್ಯನ ಮಗುವನ್ನು ಕಾಪಾಡಿದ್ದು.



ಬಿಸಿಲಿಂದಳಲುವ ಶಿಶುವಿಗೆ ಚೈಲಾ | ಗೆಸದಲಿ ನಿಲಿಸಿದ್ಯೋ ಅಸಮ ಮಹಿಮನೆ ||

ರಾಘವೇಂದ್ರಂಜಿತ ಗುಣಸಾಂದ್ರಾ ||

(ಜಗನ್ನಾಥದಾಸರು)

---

ಮಂತ್ರಾಲಯದ ಸಮೀಪದಲ್ಲಿ ಗಣದಾಳವೆಂಬುದೊಂದು ಊರುಂಟು. ಇಲ್ಲಿಯ ಜೀವಣರಾಯನೆಂಬೊಬ್ಬ ಗೃಹಸ್ಥನು ರಾಯರಲ್ಲಿ ಅತ್ಯಂತ ಭಕ್ತಿಯುಳ್ಳವನು. ಯಾವದೋ ಒಂದು ಪರ್ವಕಾಲವು ಒದಗಿತು. ತುಂಗಭದ್ರಾಸ್ನಾನಮಾಡಿಕೊಂಡು ರಾಯರ ದರ್ಶನ ತಕ್ಕೊಂಡು ಬರಬೇಕೆಂದು ಮಂತ್ರಾಲಯಕ್ಕೆ ಹೊರಟನು.

ತುಂಗಭದ್ರಾಪಯಃಪಾನಂ ಸಾಕೇ ಪೀಯೂಷಭೋಜನಂ ||
ವಾರಾಣಸ್ಯಾಂ ಮೃತಸ್ಯಾಪಿ ನಾಲ್ಪಸ್ಯ ತಪಸಃ ಫಲಂ||

(ತುಂಗಭದ್ರಾಮಾಹಾತ್ಮ್ಯೆ)

ಎಂಬಂತೆ ತುಂಗಭದ್ರೆಯು ಮೊದಲೇ ಸ್ವಭಾವಸಿದ್ಧವಾದ ಮಹಿಮೋಪೇತಳು. ಇದರ ಮೇಲೆ ಅಲ್ಲಿಯೇ ಮಹಾನುಭಾವರಾದ ರಾಯರ ಸನ್ನಿಧಾನ. ಅಂದಬಳಿಕ ಕೇಳತಕ್ಕದ್ದೇನು? ಜೀವಣರಾಯನಿಗೆ ಕಬ್ಬಿನ ಮೇಲೆ ಜೇನಿಟ್ಟಂತಾಯಿತು. ಇಂಥ ಸಂಯೋಗವನ್ನು ಅವನು ಕಳಕೊಳ್ಳುವನೇ? ಅಂತೆಯೇ ಹೆಂಡಿರು-ಮಕ್ಕಳೊಡನೆ ಹೊರಟಿದ್ದನು. ಮಂತ್ರಾಲಯವು ಬಂತು. ಕೂಡಲೆ ಅವನು ಎಲ್ಲರನ್ನೂ ಕರಕೊಂಡು ರಾಯರ ದರ್ಶನಕ್ಕೆ ಹೋದನು. ಪರಮ ಭಕ್ತಿಯುಕ್ತನಾದ ಶಿಷ್ಯನನ್ನು ಕಂಡು ರಾಯರಿಗೆ ಅತ್ಯಾನಂದವಾಯಿತು. ಸಮೀಪದಲ್ಲಿಯೇ ಕೂಡ್ರಿಸಿಕೊಂಡು ಕ್ಷೇಮಸಮಾಚಾರವನ್ನೆಲ್ಲ ವಿಚಾರಿಸಿದರು. ಜೀವಣರಾಯನು ಎಲ್ಲ ವೃತ್ತಾಂತವನ್ನು ನಿವೇದಿಸಿ ಅಪ್ಪಣೆ ಪಡಕೊಂಡು ಸ್ನಾನಕ್ಕೆ ಹೊರಟನು.

ಸಂಗಡ ಆತನ ಹೆಂಡತಿಯೂ ನಾಲ್ಕೈದು ವರ್ಷದ ಒಂದು ಗಂಡು ಮಗುವೂ ಇದ್ದರು. ಪರ್ವಕಾಲವಾದ್ದರಿಂದ ನದಿಯಲ್ಲಿ ಜನದಟ್ಟಣೆಯು ವಿಶೇಷವಾಗಿತ್ತು. ಅದರೊಳಗೇ ಒಂದು ಕಡೆಯಲ್ಲಿ ಈ ದಂಪತಿಗಳೂ ಸ್ನಾನಕ್ಕಿಳಿದರು. ಎಷ್ಟೋ ಜನರು ಸ್ನಾನಮಾಡುತ್ತಲಿದ್ದರು. ಇನ್ನೆಷ್ಟೋ ಜನರು ಬಟ್ಟೆಯನ್ನೊಗೆಯುವದರಲ್ಲಿ ತೊಡಗಿದ್ದರು ಕೆಲವರು ಒಗೆದ ಬಟ್ಟೆಗಳನ್ನು ಒಣಗಹಾಕುತ್ತಿದ್ದರು; ಮತ್ತು ಎಷ್ಟೋ ಜನರು ಮೈತುಂಬ ದಪ್ಪವಾದ ನಾಮ-ಮುದ್ರೆಗಳನ್ನು ಹಚ್ಚಿಕೊಂಡು ಬೆಳ್ಳಿಯ ಪಾತ್ರೆಗಳನ್ನು ಹರವಿಕೊಂಡು ಆಡಂಬರದಿಂದ ದೇವತಾರ್ಚನವನ್ನು ನಡಿಸಿದ್ದರು. ಇದರಂತೆಯೇ ಸುಮಂಗಲೆಯರಾದರೂ ತಂತಮ್ಮ ಕೆಲಸಗಳಲ್ಲಿ ನಿರತರಾಗಿ ತಂಡತಂಡವಾಗಿ ಓಡಾಡುತ್ತಿದ್ದರು. ಮಳಲದಿನ್ನೆಗಳಲ್ಲಿ ಆಡುತ್ತಿರುವ ಹುಡುಗರ ಚಿನ್ನಾಟಗಳಿಗಂತೂ ನೆಲೆಯೇ ಇಲ್ಲ. ಇಂಥಾ ಬ್ರಹ್ಮವೃಂದದ ವೈಭವವನ್ನು ನಮ್ಮ ಜೀವಣರಾಯನೂ ಆತನ ಹೆಂಡತಿಯೂ ಆರಗು ಬೆರಗಾಗಿ ನೋಡುತ್ತ ಸ್ನಾನಮಾಡುತ್ತಲಿದ್ದರು. ಈ ಗದ್ದಲದೊಳಗೆ ಅವರ ನಾಲ್ಕೈದುವರ್ಷದ ಮಗುವು ತಪ್ಪಿಸಿಕೊಂಡು ಮನೆಯ ದಾರೀ ಹಿಡಿಯಿತು. ಪಾಪ! ತಂದೆ-ತಾಯಿಗಳಿಗೆ ಇದರ ಅರಿವೇ ಇಲ್ಲ. ಜನ ಸಮೂಹವನ್ನು ನೋಡುವದರಲ್ಲಿಯೇ ಅವರ ಸಂಪೂರ್ಣ ದೃಷ್ಟಿ. ಹೀಗಾಗಿ ಒಂದೆರಡು ಗಳಿಗೆಗಳಲ್ಲಿ ಆ ಕೂಸು ಅಳುತ್ತಳುತ್ತ ಗಣದಾಳದ ದಾರಿಗೇ ಹೋಯಿತು. ಅಷ್ಟರಲ್ಲಿ ಮಧ್ಯಾಹ್ನವಾಗಿ ಬಿಸಿಲು ಏರಹತ್ತಿ ಕಾಲು ಸುಡಹತ್ತಿದವು. ಮೇಲೆ ರಣ ರಣ ಬಿಸಿಲು ನೀರಿಲ್ಲ-ನೆರಳಿಲ್ಲ; ಇಂಥಾದ್ದ ರಲ್ಲಿ ಆ ಸಣ್ಣ ಮಗುವು ಹೇಗೆ ತಡೆದೀತು? 'ಬಾಲಾನಾಂ ರೋದನಂ ಬಲಂ, ಎಂಬಂತೆ ಗಟ್ಟಿಯಾಗಿ ಅಳುತ್ತ ನೀರಿನಿಂದ ಹೊರಗೆ ತೆಗೆದು ಹಾಕಿದ ಮೀನಿನಂತೆ ಒದ್ದಾಡ ಹತ್ತಿತು ಮಧ್ಯಾಹ್ನವೇಳೆಯಾದ್ದರಿಂದ ದಾರಿ ಕಾರರು ಸಹ ಅಲ್ಲಿ ಯಾರೂ ಇರಲಿಲ್ಲ ಅಯ್ಯೋ ಪಾಪ! ಆ ಮಗುವಿನ ಗತಿಯಿನ್ನೇನು? ಭಯಕೃದ್ಭಯ ನಾಶನ-ಅನಾಥ ರಕ್ಷಕ-ದೀನ ದಯಾಲು ಇತ್ಯಾದಿ ಬಿರುದಾಂಕಿತಗಳಿಂದೊಪ್ಪುವ ಪರಮಾತ್ಮನು ಇದನ್ನು ಕಣ್ಣಿನಿಂದ ನೋಡುವನೇ? ಎಂದಿಗೂ ನೋಡಲಾರ. ಹಾಗಾದ ಪಕ್ಷದಲ್ಲಿ ಆತನ ಬಿರುದಿಗೇ ಕಲಂಕ ಬಂದೀತು? ಕೂಡಲೆ ರಾಯರಿಗೆ ಪ್ರೇರಣೆಮಾಡಿಬಿಟ್ಟನು. ರಾಯರು ಜ್ಞಾನದೃಷ್ಟಿಯಿಂದ ನೋಡಿದರು. ತಮ್ಮ ಶಿಷ್ಯನ ಮಗ

ವೊಂದು ಬಿಸಿಲಲ್ಲಿ ಒದ್ದಾಡುತ್ತಿರುವಂತೆ ತಿಳಿಯಿತು. ಆಗಲೆ ರಾಯರು ತಮ್ಮ ಆಪ್ತಿಕರೊಗಳನ್ನು ಸಹ ಬದಿಗೊತ್ತಿ ಅಲ್ಲಿಗೆ ಹೋಗಿ ಮೃದು ನುಡಿಗ ಳಿಂದ ಮಗುವನ್ನು ಸಂತೈಸಿ ತಮ್ಮದೊಂದು ಶಾಟಿಯನ್ನು (ವಸ್ತ್ರ) ಬಿಸಿ ಲಿಗೆ ಅಡ್ಡವಾಗಿ ಅಂತರಿಕ್ಷದಲ್ಲಿಯೇ ನಿಲ್ಲಿಸಿ ನೆರಳನ್ನುಂಟು ಮಾಡಿದರು; ಹಾಗೂ ಕಮಂಡಲೋದಕವನ್ನು ಪ್ರೋಕ್ಷಿಸಿ ಅದಕ್ಕೆ ಹಸಿವು ಬಾಯಾರಿಕೆ ಗಳಾಗದಂತೆ ಅನುಗ್ರಹಿಸಿದರು. ಆಯಿತು

ಇಷ್ಟರಲ್ಲಿ ಅತ್ತ ಕಡೆಗೆ ಸ್ನಾನ ಮಾಡುತ್ತಿದ್ದ ಜೀವಣರಾಯನೂ ಅವನ ಹೆಂಡತಿಯೂ ಮೇಲಕ್ಕೆ ಬಂದು ನೋಡುತ್ತಾರೆ! ಮಗುವೇ ಇಲ್ಲ. ಇದೇನು? ಪಾಪಕ್ಷಯವಾಗಲೆಂದು ಕಾಶಿಗೆ ಹೋದರೆ, ಕುಲಕ್ಷಯವಾಗ ಲೆಂದು ಮೊಸಳೆ ಎಳಕೊಂಡು ಹೋಯಿತೆಂಬ ಸಮಾಚಾರಕ್ಕೆ ಬಂತು. ಸುತ್ತಲೆಲ್ಲ ಹುಡುಕಿದರು; ನದಿಯಲ್ಲಿ ನೋಡಿದರು; ಜನಸಂದಣಿಯಲ್ಲೆಲ್ಲಾ ಕೇಳಿದರು; ಸಿಕ್ಕಲೇ ಇಲ್ಲ ತಂದೆ-ತಾಯಿಗಳಿಗೆ ತಲೆಯ ಮೇಲೆ ಸಿಡಿಲು ಬಿದ್ದಂತಾಯಿತು. ಎದೆಗೆ ಕಲ್ಲು ಬಡಿದಂತಾಯಿತು. ಅವರು ಘೋರೆಂದು ಅಳಹತ್ತಿದರು.

"ಜಗದೊಳುತ್ತಮರ ಹಾನಿಯಂ ಕಂಡು ಸೈರಿಸುವರುಂಟೇ |"

ಎಂಬಂತೆ ಅವರ ಅಳುವನ್ನು ಕಂಡು ನೆರೆದ ಜನರ ಕಣ್ಣುಗಳೂ ನೀರಿನಿಂದ ತುಂಬಿದವು. ಅಷ್ಟರಲ್ಲಿ ಮಠೀಯ ಶಿಷ್ಯರು ಈ ವರ್ತಮಾನ ಕೇಳಿ:—ರಾಯರು ನಿಮ್ಮ ಮಗುವನ್ನು ಕಾಪಾಡಿರುತ್ತಾರೆ. ಗಾಬರಿಯಾಗ ಬೇಡಿರೆಂದು ಸಮಾಧಾನ ಹೇಳಿ ಗಣದಾಳದ ದಾರಿಗೆ ಕಳಿಸಿದರು. ಜೀವಣರಾಯರು ಓಡುತ್ತೋಡುತ್ತ ಹೋಗಿ ನೋಡುತ್ತಾರೆ, ಶ್ರೀಗಳ ವರ ವಸ್ತ್ರವು ಅಂತರಿಕ್ಷದಲ್ಲಿಯೇ ನಿಂತುಬಿಟ್ಟು ಕೂಸಿಗೆ ನೆಳಲನ್ನುಂಟು ಮಾಡಿದೆ. ಮಗುವು ಆನಂದದಿಂದ ಆಡುತ್ತಲಿದೆ. ಆ ಹೊತ್ತಿಗೆ ತಾಯಿಯು ಧಾವಿಸಿಬಂದಳು. ಪೂತನಿಯ ವಿಷಮೊಲೆಯನ್ನೀಂಟು, ಆಕೆಯ ಎದೆಯ ಮೇಲೆ ಚಿನ್ನಾಟ ಮಾಡುತ್ತಿರುವ ಶ್ರೀಕೃಷ್ಣಮೂರ್ತಿಯನ್ನು ನೋಡಿದಾಗ ನಂದಗೋಪನೂ-ಯಶೋದೆಯೂ ಎಷ್ಟು ಹರ್ಷ-ಸುಖಗಳನ್ನು ಅನು ಭೋಗಿಸಿದರೋ, ಇನ್ನೆಷ್ಟು ತೂಪಿರಿದರೋ, ಮತ್ತೆಷ್ಟು ಮುದ್ದು ಕೊಟ್ಟರೋ ಅದಕ್ಕೆ ಇಮ್ಮಡಿಯಾಗಿ ಈ ತಂದೆ-ತಾಯಿಗಳು ಮಗುವನ್ನೆತ್ತಿ ಮುದ್ದಾಡಿದರು. ರಾಯರನ್ನು ಹಾಡಿ ಹರಸಿದರು. ಅಲ್ಲಿಂದ ಜೀವಣರಾ

ಯನು ಕಡು ಬಡವನು, ಕಾಲಿಂದ ನಿಧಿಯನ್ನೆಡವಿದಂತೆ ಬಾಯಾರಿ ಬಳಲಿ ದವನಿಗೆ ಅಮೃತವು ಕೈಗೆ ಸಿಕ್ಕಂತೆ ಸಂತೋಷಪಡುತ್ತ ಹೆಂಡಿರು-ಮಕ್ಕ ಳೊಡನೆ ರಾಯರ ಸನ್ನಿಧಿಗೆ ಬಂದು, ಅವರ ಕಾಲ ಮೇಲೆ ಮಗುವನ್ನು ಹಾಕಿ:—ಸ್ವಾಮಿಾ, ಇಂದು ನಮಗೆ ನೀವೇ ಸಂತಾನವನ್ನು ಕರುಣಿಸಿದಂ ತಾಯಿತು. ಧನ್ಯನಾದೆ, ಧನ್ಯನಾದೆ. ಇದೇ ರೀತಿ ತಮ್ಮ ಪರಮಾನುಗ್ರ ಹವು ಶಿಷ್ಯನ ಮೇಲಿರಬೇಕೆಂದು ಬಿದ್ದು ಬೇಡಿಕೊಂಡನು. ಆತನ ಹೆಂಡ ತಿಯು ಶರಣಾಗತಳಾಗಿ ಪುನಃ ಪುನಃ ಪ್ರಾರ್ಥಿಸಿದಳು. ರಾಯರು ಅವರನ್ನು ಸಂತೈಸಿ ನಾಲ್ಕು ದಿವಸ ಅಲ್ಲಿಯೇ ಇಟ್ಟುಕೊಂಡು ಕಳಿಸಿದರು.

ಲೋಕದಲ್ಲಿ ಸತ್ಸಹವಾಸಕ್ಕೆ ಸಮಾನವಾದದ್ದು ಇನ್ನಾವದೂ ಇಲ್ಲ. ಯಾರಿಗೆ ಸದ್ಗತಿಯುಂಟಾಗಬೇಕೆಂಬ ಅಪೇಕ್ಷೆಯಿರುವದೋ ಅವರು ಅವಶ್ಯವಾಗಿ ಸತ್ಸಹವಾಸ ಮಾಡಬೇಕು. ಈ ವಿಷಯದಲ್ಲಿ ಶ್ರೀಮದ್ಭಾಗ ವತ ಏಕಾದಶ ಸ್ಕಂಧದೊಳಗೆ ಶ್ರೀಕೃಷ್ಣನು ಉದ್ಧವನಿಗೆ ಹೀಗೆ ಹೇಳಿರುವನು:—

ತತೋ ದುಃಸಂಗಮುತ್ಸೃಜ್ಯ ಸತ್ಸು ಸಜ್ಜೇತ ಬುದ್ಧಿಮಾನ್||
ಸಂತ ಏತಸ್ಯ ಛಿಂದಂತಿ ಮನೋವ್ಯಾಸಂಗಮುಕ್ತಿಭಿಃ||

(ದುಃಸಹವಾಸ ಬಿಟ್ಟು ಸತ್ಸಹವಾಸ ಮಾಡಬೇಕು. ಸತ್ಪುರುಷರು ತಮ್ಮ ಹಿತೋಕ್ತಿಗಳಿಂದ ಮನಸ್ಸಿನ ದುಷ್ಟ ವರ್ತನೆಯನ್ನು ತಪ್ಪಿಸುವರು) ಮತ್ತು:—

"ಯಥೋಪಶ್ರಯಮಾಣಸ್ಯ ಭಗವಂತಂ ವಿಭಾವಸುಂ||
ಶೀತಂ ಭಯಂ ತಮೋಽಪ್ಯೇತಿ ಸಾಧೂನ್ ಸಂಸೇವ್ಯತಸ್ತಥಾ||

(ಪೂಜ್ಯನಾದ ಅಗ್ನಿಯನ್ನು ಯಾವನು ಆಶ್ರಯಿಸಿರುವನೋ ಅವರ ಶೀತಬಾಧೆಯು ನಿವಾರಣೆಯಾಗುವಂತೆ ಸಾಧುಗಳನ್ನು ಯಾರು ಆಶ್ರಯಿ ಸುವರೋ ಅವರ ಭಯವೂ-ಅಜ್ಞಾನವೂ ನಾಶವಾಗುವವು.)

ಅಂತೆಯೇ ಶ್ರೀಮದ್ವಾದಿರಾಜ ಗುರುಗಳು:—

"ಹರಿನಿರ್ಮಾಲ್ಯವ ಶಿರದಿ ಧರಿಸುತಲಿರು| ಹರಿನೈವೇದ್ಯವ ನೀ ಭುಂಜಿಸುತಿರು| ಇರುಳು ಹಗಲೆ ಹರಿಸ್ಮರಣೆಯ ಬಿಡದಿರು | ದುರು ಳರ ಕೂಡದಿರೋ|| ಹರಿಪಾದತೀರ್ಥದ ನೇಮವ ಬಿಡದಿರೊ| ಹರಿ ಪರ ದೇವತೆಯೆಂದು ಪೇಳುತಿರೊ| ಗುರುಮುಖದಲ್ಲಿ ಸತ್ಶಾಸ್ತ್ರ

ಪುರಾಣವ ನಿರುತ ನೀ ಕೇಳುತಿರೋ||

ನಾರಾಯಣನ ನೆನಿ ನೆನಿ||

ಹೀಗೆಂದು ಉಪದೇಶ ಮಾಡಿರುವರು.

೧೪ನೆಯ ಕಥೆ

ಶಿಷ್ಯಮೃತ್ಯು ಪರಿಹಾರ

ಭೃತ್ಯಗೆ ಬಂದಪಮೃತ್ಯುಕಳೆದು ಸುಖ| ವಿತ್ತು ಪೊರೆದೆ ಪುರುಷೋತ್ತಮದಾಸಾ ||

ರಾಘವೇಂದ್ರ ರಾಜಿತ ಗುಣಸಾಂದ್ರಾ ||

(ಜಗನ್ನಾಥದಾಸರು)

ಶ್ರೀಗಳವರು ಮೊದಲು ಕುಂಭಕೋಣದಲ್ಲಿ ಓದುತ್ತಿರುವಾಗ್ಗೆಯೇ ಜೋಯಿಸರ ವೆಂಕಣಭಟ್ಟನೆಂಬುವನೊಬ್ಬನು ಕೇವಲ ಇವರ ಸ್ನೇಹಿತನಾಗಿದ್ದನು. ಶ್ರೀಗಳು ಸಂಚಾರ ಮಾಡಿಕೊಂಡು ಈಗ ಕುಂಭಕೋಣಕ್ಕೆ ಬಂದರು. ಹಿಂದೂ ಜನರ ಪವಿತ್ರ ಕ್ಷೇತ್ರಗಳಲ್ಲಿ ಇದೊಂದು ಮುಖ್ಯವಾದದ್ದು. ಇಲ್ಲಿ ಅತ್ಯಂತ ಪಾವನವಾದ ಕಾವೇರೀ ನದಿಯು ಹರಿಯುತ್ತಿರುವದರಿಂದಲೂ, ಮಹಾತೀರ್ಥವೆಂಬ ಪುಣ್ಯಕರವಾದ ತೀರ್ಥವಿರುವದರಿಂದಲೂ (ಇದು ಶಂಖಾಕಾರವಾಗಿರುವದರಿಂದ ಶಂಖ ತೀರ್ಥವೆಂಬ ಹೆಸರು ಬಿದ್ದಿದೆ.) ಇದಕ್ಕೆ ವಿಶಿಷ್ಟ ತೇಜಸ್ಸುಂಟಾಗಿದೆ. ಇದರ ಹೊರತು ಈ ಊರಲ್ಲಿ ಬಹು ಪ್ರಸಿದ್ಧವಾದ-ನಾಗೇಶ್ವರ, ಕುಂಭೇಶ್ವರ ಮುಂತಾದ ಶಿವದೇವಾಲಯುಗಳೂ-ಶಾರ್ಙ್ಗಪಾಣಿ, ಚಕ್ರಪಾಣಿ ಮುಂತಾದ ವಿಷ್ಣುದೇವಾಲಯುಗಳೂ ಇರುವದರಿಂದ ಸಾಕ್ಷಾತ್ ಕೈಲಾಸ-ವೈಕುಂಠಗಳೆರಡೂ ಒಂದೇ ಕಡೆಯಲ್ಲಿ ಸೇರಿಕೊಂಡಿರುವವೇನೋ ಎಂಬಂತೆ ಭಾಸವಾಗುತ್ತಿರುವದು ಅಲ್ಲದೆ ಇಲ್ಲಿ ಶ್ರೀಆದಿಶಂಕರಾಚಾರ್ಯರ ಪೀಠ ಪರಂಪರಾಪ್ರಾಪ್ತವಾದ ಶಂಕರಾಚಾರ್ಯರ ಮಠವೊಂದಿದೆ ಹೀಗೆ

ಪ್ರತಿ ಕಾಶೀಕ್ಷೇತ್ರವೋ ಎನ್ನುವಂತೆ ತೋರುವ ಈ ಪಟ್ಟಣಕ್ಕೆ ಶ್ರೀಗಳವರು ಬಂದ ದಿವಸವೇ ಇವರ ಸ್ನೇಹಿತನಾದ ವೆಂಕಣಭಟ್ಟನ ನಿಷೇಕಪ್ರಸ್ತವಿತ್ತು. ಅನಾಯಾಸವಾಗಿ ಸ್ನೇಹಿತರೂ ಪರಮ ಪೂಜ್ಯರೂ ಆದ ಸ್ವಾಮಿಗಳು ಬಂದದ್ದನ್ನು ನೋಡಿ ಅವನಿಗೆ ಬಹಳ ಆನಂದವಾಯಿತು. ಇಂದು ವೆಂಕಣ್ಣನ ಮನೆಯಲ್ಲಿ ಹಿಗ್ಗೇ ಸಂಭ್ರಮ. ಊರಲ್ಲೆಲ್ಲ ಔತಣ ಹೇಳಿದ್ದಾರೆ. ಶ್ರೀಗಳವರಿಗೂ ತಮ್ಮಲ್ಲಿ ಶ್ರೀರಾಮದೇವರ ಪೂಜೆಯಾಗಬೇಕೆಂದು ಬೇಡಿಕೊಂಡರು. ಪುರೋಹಿತರೇ ಮೊದಲಾದವರು ಪುಣ್ಯಾಹವಾಚನಾದಿ ಕಾರ್ಯಗಳನ್ನು ಸಾಂಗಗೊಳಿಸಿದರು. ಉಡುಗರೆ ಉತ್ಸವಗಳೆಲ್ಲ ತೀರಿದವು. ವೆಂಕಣ್ಣನಿಗೆ ದೇವರ ಮನೆಗೆ ಹೋಗಿ ನಮಸ್ಕಾರಮಾಡಿ ಬರಲಿಕ್ಕೆ ಹೇಳಿದರು. ಚಟ್ಟನೆ ಎದ್ದನು. ಇನ್ನೇನು? ದೇವರಿಗೂ ಬ್ರಾಹ್ಮಣರಿಗೂ ನಮಸ್ಕಾರಮಾಡಿ ಆಶೀರ್ವಾದವನ್ನು ಪಡೆಯಬೇಕೆಂಬ ಸಮಯ. ಸುವಾಸಿನಿಯರು ಆಶೀರ್ವಾದಪದವನ್ನು ಹೇಳುತ್ತಿರುವರು. ಬ್ರಾಹ್ಮಣರು ಎಲೆ ಹಾಕಲಿಕ್ಕೆ ನೋಡುತ್ತಿರುವರು! ಚಿಕ್ಕ ಬಾಲಕರು ಹೊಟ್ಟೆಹಸಿವೆಯಿಂದ ಅಳುತ್ತಿರುವರು. ಹೆಂಗಸರು ಬೇಗನೆ ಊಟಕ್ಕೆ ಹೋಗಬೇಕೆಂದು ಭರದಿಂದ ಮನೆಗೆಲಸಗಳಲ್ಲಿ ತೊಡಗಿರುವರು ಇಂಥ ವೇಳೆಯಲ್ಲಿ ವೆಂಕಣ್ಣನು ದೇವರ ಮನೆಗೆ ಹೋಗಿ ದೇವರಿಗೆ ಸಾಷ್ಟಾಂಗವೆರಗಿ ಹೊರಟನು. ಅದೇನು ವಿಷಮ ವ್ಯಾಳ್ಯವೋ ಅಥವಾ ಅವನ ದುರದೃಷ್ಟವೋ ತಿಳಿಯದು. ಭರದಿಂದ ಬರುವ ವೆಂಕಣ್ಣನಿಗೆ ಹಿಮ್ಮೆಂದೊಮ್ಮೆ ಬಾಗಿಲ ಚೌಕಟ್ಟು ಹಣೆಗೆ ಬಲವಾಗಿ ತಾಕಿತು; ಅಲ್ಲಿಯೇ ಹೊತ್ತುಕೊಂಡು ಬಿದ್ದುಬಿಟ್ಟನು. ಆಗಲೇ ಪ್ರಾಣವಾಯುವು ಹೊರಟುಹೋಯಿತು! ಮನೆಯವರೆಲ್ಲರೂ ನೆರೆದರು. ನೋಡಿದರು ಪರೀಕ್ಷಿಸಿದರು. ಜೀವವೇ ಇಲ್ಲ. ಘೋರೆಂದು ಅಳಹತ್ತಿದರು. ಮನೆಹಾಳಾಯಿತೆಂದು ಎದೆ ಎದೆ ಬಡಕೊಳ್ಳಹತ್ತಿದರು. ಏನಾದರೇನು? ಯಮಧರ್ಮನಿಗೆ ಕಿಂಚಿತ್ತಾದರೂ ದಯವುಂಟಾಗಲಿಲ್ಲ. ಯಾರಿಗೆ ದಯವುಂಟಾದರೂ ಆಗಬಹುದು; ಆದರೆ

ರಾಜವೇಶ್ಯಾಯಮೋವಹ್ನಿಃ ತಸ್ಕರೋ ಬಾಲಯಾಚಕಾಃ ||
ಪರದುಃಖಂ ನ ಜಾನಾತಿ ಅಷ್ಟಮೋ ಗ್ರಾಮಕೀಟಕಾಃ ||

ಎಂಬಂತೆ ಈ ಎಂಟು ಜನರಿಗೆ ಮಾತ್ರ ಎಂದೂ ದಯೆ ಉಂಟಾಗಲಾರದು. ಅದಕ್ಕಂತೆಯೇ ಮಹಾನುಭಾವರಾದ ಶ್ರೀಪುರಂದರದಾಸರು:—

ಮೊನ್ನೆ ಮದಿವಾದೆನ್ನೆ ಕರೆವುವೊಂದೆರಷ್ಟೆಮ್ಮೆ ।
ನಿನ್ನೆ ಕೊಂಡೆನು ಹೊಲವ ಫಲವು ಬಹುದು ॥
ಹೊನ್ನು ಬಹಳುಂಟೆನಗೆ ಸಾಯಲಾರೆನು ಎನಲು ।
ಬೆನ್ನ ಬಿಡುವಳೆ ಮೃತ್ಯು ವ್ಯರ್ಥ ಜೀವಾತ್ಮಾ ॥
ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ ॥ ಪಲ್ಲ॥

ಹೀಗೆ ಕೂಗಿಕೊಂಡಿರುವರು. ದಾಸರ ಈ ವಚನವು ನಿತ್ಯಶಃ ನಮ್ಮೆಲ್ಲರ ಅನುಭವಕ್ಕೆ ಬರತಕ್ಕದ್ದಾಗಿದ್ದರೂ ದಾಸರಂತೆ ನಿಜವಾದ ವೈರಾಗ್ಯವು ಮಾತ್ರ ಹುಟ್ಟದೆ ಅದು ಸ್ಮಶಾನ ವೈರಾಗ್ಯವಾಗಿ ಪರಿಣಮಿಸುತ್ತಿರುವದು. ಅದರಿಂದಲೇ ನಾವು ಪರಮಾತ್ಮನ ಪಾದಾರವಿಂದವನ್ನು ಕಾಣದೆ ದುಃಖ ಸಾಗರದಲ್ಲಿ ಮುಳಿಗೇಳುತ್ತಿರುವೆವು. ಪ್ರಾಪಂಚಿಕರ ಮಾತು ಇಷ್ಟೇ ಸರಿ. ಇರಲಿ.

ಈಗ ಹಿಂದೇ ಹಿಂದು ತಾಸಿನ ಹಿಂದೆ ಯಾವ ವೆಂಕಣ್ಣನ ಮನೆಯು ಆನಂದದ ಕೋಲಾಹಲದಿಂದ ತುಂಬಿ ಹೋಗಿತ್ತೋ, ಅದೇ ಈಗ ಶೋಕಾಲಾಪಗಳಿಂದ ತುಂಬಿ ಬಿಟ್ಟಿರುವದು. ಎಲ್ಲಿಲ್ಲಿಯೂ ಅಳುವ ಧ್ವನಿ. ಹಾ ಹಾಕಾರ! ಅಷ್ಟರಲ್ಲಿ ಶ್ರೀಗಳವರು ಅಲ್ಲಿಗೇ ಬಂದರು. ವೆಂಕಣ್ಣನ ಸಮಾಚಾರವೆಲ್ಲ ತಿಳಿಯಿತು. ಅವರು ಆತನನ್ನು ತಕ್ಕೊಂಡು ಬನ್ನಿರೆಂದು ಹೇಳಿದರು. ಎಲ್ಲರಿಗೂ ಆಶ್ಚರ್ಯ! ವಿಸ್ಮಯ! ತಕ್ಕೊಂಡು ಬಂದು ಅವರ ಮುಂದೆ ಹಾಕಿದರು. ಏನು ಮಾಡುತ್ತಾರೋ ನೋಡಬೇಕೆಂದು ಎಲ್ಲರಿಗೂ ಕುತೂಹಲ. ಒಬ್ಬರಮೇಲೊಬ್ಬರು ಬೀಳುವ ಸುದ್ದಿಯಿಲ್ಲದೆ ಕಿಕ್ಕಿರಿ ನಿಂತರು; ಆದರೆ ಶ್ರೀಗಳವರು ಮತ್ತೇನನ್ನೂ ಮಾಡಲಿಲ್ಲ. ಕ್ಷಣಹೊತ್ತು ದೇವರನ್ನು ಧ್ಯಾನಮಾಡಿ ಕಮಂಡಲೋದಕವನ್ನು ಹಾಕಿ:- ವೆಂಕಣ್ಣಾ ಏಳಪ್ಪಾ! ಬ್ರಾಹ್ಮಣರೆಲ್ಲರೂ ಉಪವಾಸದಿಂದ ಬಳಲುತ್ತಿರುವರು. ಬೇಗನೆ ಅವರ ಭೋಜನವನ್ನು ತೀರಿಸು ' ಎಂದು ನುಡಿದರು. ಗುರುಗಳ ಈ ಮಾತು ಪರಮಾತ್ಮನ ಹೃದಯದಲ್ಲಿ ಭೇದಿಸಿತೋ ಅನ್ನುವಂತೆ ಥಟ್ಟನೆ ವೆಂಕಣ್ಣನು ಕಣ್ದೆರೆದು ಎದ್ದು ಕುಳಿತನು. ಅಹಹಾ! ಆ ಕಾಲದಲ್ಲಿ ಆತನ ತಂದೆ-ತಾಯಿಗಳಿಗೂ ಅತ್ತೆ-ಮಾವಂದರಿಗೂ ಬಂಧು-ಬಳಗದವರಿಗೂ ಇನ್ನೆಷ್ಟು ಆನಂದವಾಗಿರಬೇಕೋ ಅದನ್ನು ಬರೆದು ತಿಳಿಸಲು ನಮ್ಮ ಲೇಖನಿಯಲ್ಲಿ ಸಾಮರ್ಥ್ಯವಿಲ್ಲ. ಇಷ್ಟು ಮಾತ್ರ ಹೇಳಬಲ್ಲೆವು,

ನೆರೆದವರೆಲ್ಲರೂ ಗುರುಗಳನ್ನು ಸಾಕ್ಷಾತ್ ದೇವರೆಂದೇ ತಿಳಿದರು. ಹೊಗಳಿದರು. ನಮಗಾದರೂ ಈ ವಿಷಯದಲ್ಲಿ ಒಬ್ಬ ಸತ್ಪುರುಷರು ಹೇಳಿದ ಮಾತು ನೆನಪಿಗೆ ಬಂದಿರುವದು.

ಇಂದಿರಾಪತಿ ಅವರ ಮುಂದೆ ಕುಣಿವನೊ ।
ಎಂದ ವಚನವ ನಿಜಕೆ ತಂದು ಕೊಡುವನೊ ॥

ವೆಂಕಣ್ಣನು ಎದ್ದ ಬಳಿಕ ಮುಂದಿನ ಶುಭ ಕಾರ್ಯಗಳೆಲ್ಲವೂ ಜರುಗಿದವು. ಎಲ್ಲವೂ ಆನಂದಮಯವಾಯಿತು.

ಈ ವಿಷಯವನ್ನು ಮಂಚಾಲಿ ದಾಸಾಚಾರ್ಯರೆಂಬವರು ತಮ್ಮ ಶ್ರೀರಾಘವೇಂದ್ರಾಮೃತದಲ್ಲಿ ಹೀಗೆ ಬಣ್ಣಿಸಿದ್ದಾರೆ:—

ಮರ್ತ್ಯರೊಳಗಾಶ್ಚರ್ಯರಾಯರ ।
ಕೃತ್ಯಗಳ ಕೇಳಿದರೆ ಈ ಪರಿ ।
ವರ್ಣಿಸಿದ್ದವರನ್ನು ಕಾಣೆನು ನಾನು ಎಂದೆಂದು ॥
ಭೃತ್ಯನೊಬ್ಬಗೆ ಪ್ರಾಪ್ತವಾದಪ ।
ಮೃತ್ಯುನಾಶವಗೆಯ್ಸಿ ಸೌಖ್ಯವ ।
ನಿತ್ತು ಸಲಹಿದವರಿಗೆ ಸಮರ್ಯಾರೀ ಜಗತ್ರಯದಿ ॥

---

ಜಯತು ಜಯತು ರಾಜಾ ರಾಜ ರಾಜಾದಿ ಪೂಜ್ಯೋ ।
ಜಯತು ಜಯತು ರಮ್ಯೋರಂಜಿತಾನೇಕ ಲೋಕಃ ॥
ಜಯತು ಜಯತು ಭೋಗೀ ಭಕ್ತ ಭಾಗ್ಯ ಪ್ರದಾತಾ ।
ಜಯತು ಜಯತು ಭೂಮಾ ಭೂರಿ ಭೂರಿ ಪ್ರದಾತಾ ॥

---

೧೫ನೆಯ ಕಥೆ

## ಅರಸನ ಮಗನನ್ನು ಬದುಕಿಸಿದ್ದು



ರಾಯರು ಸಂಚಾರಮಾಡುತ್ತ ಮಾಡುತ್ತ ಒಮ್ಮೆ ಒಂದು ದೊಡ್ಡ ಪಟ್ಟಣಕ್ಕೆ ಹೋದರು. ಅದು ಯಾವದೋ ಒಬ್ಬ ರಾಜನ ರಾಜಧಾನಿಯಾಗಿದ್ದಿತು. ಊರಲ್ಲಿ ಬ್ರಾಹ್ಮಣಸಮೂಹವು ಬೇಕಾದಷ್ಟಿದ್ದಿತು; ಮತ್ತು ಈಗಿನಂತೆ ಆ ಕಾಲದಲ್ಲಿ ಮಠ ಮಠಗಳೊಳಗೆ ಕಲಾಪಗಳೂ ವ್ಯಾಜ್ಯಗಳೂ ಇರಲಿಲ್ಲ. ಮೇಲಾಗಿ ಮಹಾರಾಜನೇ ರಾಯರಲ್ಲಿ ಕೇವಲ ನಿಷ್ಠಾವಂತನಾಗಿದ್ದನು. ಇಷ್ಟೆಲ್ಲ ಅನುಕೂಲವಿದ್ದರೂ ಆ ಹೊತ್ತು

ಮಾತ್ರ ಊರಹೊರಗೆ ಬಂದು ಕುಳಿತ ರಾಯರನ್ನು ಊರಲ್ಲಿ ಕರಕೊಂಡು ಹೋಗುವವರೂ ಕೂಡ ಇಲ್ಲದಂತಾಗಬೇಕೇ? ಇದೇನು ದುರದೃಷ್ಟ? ಮಹಾರಾಜನು ಊರಲ್ಲಿರಲಿಲ್ಲವೇ? ಅಥವಾ ಆತನು ರಾಯರ ಮೇಲೆ ಮುನಿಸಿಗೊಂಡು ತಾನು ಹೋಗದೆ ಬ್ರಾಹ್ಮಣರನ್ನೂ ಹೋಗಗೊಡದಂತೆ ಕಟ್ಟುಮಾಡಿದನೇ? ಛೀ ಛೀ! ಅರಸನು ಅಂಥವನಲ್ಲವೇ ಅಲ್ಲ. ರಾಯರು ತನ್ನ ರಾಜ್ಯದ ಎಲ್ಲೆಯಲ್ಲಿ ಯಾವಾಗ ಕಾಲಿಟ್ಟರೋ ಅಂದಿನಿಂದಲೇ ಅವರಿಗೆ ಬೇಕಾದ ಏರ್ಪಾಟುಗಳನ್ನು ಕಲ್ಪಿಸಿಕೊಡತಕ್ಕವನು. ಹಾಗಾದರೆ ಇಂದು ರಾಯರು ಸ್ವಯಂ ತನ್ನ ಪಟ್ಟಣಕ್ಕೆ ಅದರಲ್ಲೂ ತನ್ನ ಮನೆಗೇ ಬರಬೇಕೆಂದು ಬಂದು ಕುಳಿತಿರಲು, ರಾಜನೆನಿಸಿಕೊಂಡವನು ದರ್ಶನಕ್ಕೆ ಕೂಡ ಬರಬಾರದೆಂದರೇನು? ಬ್ರಾಹ್ಮಣರಾದರೂ ಯಾಕೆ ಬಂದಿರಲಿಕ್ಕಿಲ್ಲ? ಮಠೀಯರಿಗೆ ಇದೊಂದು ಸಮಸ್ಯೆಯಾಯಿತು.

ವಾಚಕರೇ! ಇದು ಕೂಡ್ರುವ ಹೊತ್ತಲ್ಲ. ರಾಯರು ಬಂದು ಬಹಳ ಹೊತ್ತಾಯಿತು. ಆದರಿಂದ ನಾವಾದರೂ ಊರೊಳಗೆ ಹೋಗಿ ಅಲ್ಲಿಯ ಸಂಗತಿಯೇನೆಂಬದನ್ನು ವಿಚಾರಿಸಿಕೊಂಡು ಬರೋಣ. ಬೇಗನೇ ನಡೆಯಿರಿ. ಅಯ್ಯೋ ನೋಡಿದಿರಾ! ಮಹಾರಾಜನು ಎಂಥ ಘೋರವಾದ ಸಂಕಟದಲ್ಲಿ ಬಿದ್ದು ತಳಮಳಿಸುತ್ತಿರುವನು. ಪಾಪ! ಇಂಥವನು ರಾಯರ ದರ್ಶನಕ್ಕೆ ಏನೆಂದು ಬರಬೇಕು? ಈತನ ದುಃಖದಲ್ಲಿ ಪಾಲುಗಾರರಾದ ಬ್ರಾಹ್ಮಣರಾದರೂ ಆತನನ್ನು ಬಿಟ್ಟು ಹೇಗೆ ಬಂದಾರು? ಸರಿ, ಸರಿ. ಈಗಲೇ ಓಡಿ ಹೋಗಿ ರಾಯರಿಗೆ ತಿಳಿಸಿ ಬಿಡೋಣ. ಮುಂದೆ ಅವರ ಅಪ್ಪಣೆಯಾದಂತಾಗಲಿ.

ಪಟ್ಟಣದಲ್ಲಿ ಮಹಾರಾಜನಿಗೆ ಇದ್ದ ಒಬ್ಬನೇ ಒಬ್ಬ ಮಗನು ನಾಗರಹಾವು ಕಡಿದು ಅದೇ ವ್ಯಾಳ್ಯದಲ್ಲಿ ಸತ್ತು ಬಿದ್ದಿದ್ದನು! ಅರಮನೆಯೆಲ್ಲವೂ, ಅದೇಕೆ ಪಟ್ಟಣವೆಲ್ಲವೂ ಶೋಕಾಕುಲವಾಗಿ ಹೋಗಿತ್ತು! ರಾಜಪರಿವಾರವಂತೂ ಮೈಯ್ಮೇಲೆ ಎಚ್ಚರಿಲ್ಲದೆ ಭೂತ ಬಡಿದವರಂತೆ ಕುಳಿತಿತ್ತು. ಈ ಸುದ್ದಿಯು ರಾಯರಿಗೆ ತಿಳಿಯಿತು. ಕೂಡಲೆ ಅವರು ಪರಿವಾರ ಸಹಿತರಾಗಿ ತಾವೇ ಊರಲ್ಲಿ ಹೊರಟರು. ಅತ್ತ ಮಹಾರಾಜನು ಶ್ರೀಗಳವರು ತಾವಾಗಿಯೇ ಈ ಸುದ್ದಿಯನ್ನು ತಿಳಿದೂ ತಿಳಿದೂ ಬಂದುಬಿಟ್ಟರೆಂಬದನ್ನು ಕೇಳಿ ಭಯಭ್ರಾಂತನಾಗಿ ನಾನು ಹೀಗೆಯೇ ಕುಳಿತರೆ ಮಹಾತ್ಮರಾದ

ವರಲ್ಲಿ ಮತ್ತೇನು ಅಪರಾಧ ಮಾಡಿದಂತಾಗುವದೋ ಎಂದು ಗಡಗಡನೆ ನಡುಗುತ್ತ ಸತ್ತುಬಿದ್ದ ಮಗನನ್ನು ಅಲ್ಲಿಯೇ ಬಿಟ್ಟು ರಾಯರಿಗೆದುರಾಗಿ ಕಾಲುನಡೆಯಿಂದ ಹೊರಟನು. ಶೋಕಾಕುಲವಾದ ಜನಸಮೂಹವು ಆತನ ಬೆನ್ನಟ್ಟಿತು ಅರಮನೆಯ ಎದುರಿನ ರಾಜಮಾರ್ಗದ ಮಧ್ಯದಲ್ಲಿ ರಾಯರೂ ಮಹಾರಾಜನೂ ಒಬ್ಬರಿಗೊಬ್ಬರು ಸಂಧಿಸಿದರು ಇಬ್ಬರ ದೃಷ್ಟಿಗಳೂ ಒಂದಾದವು. ಮಹಾರಾಜನ ಬಾಯಿಂದ ಮಾತುಗಳು ಹೊರಡಲಿಲ್ಲ. ದುಃಖಾವೇಗದಿಂದ ಆತನ ಕುತ್ತಿಗೆಯ ಶಿರಗಳು ಉಬ್ಬಿ ಹೋದವು. ನಿಂತಿದ್ದಂತೆಯೇ ದೊಪ್ಪನೆ ನೆಲಕ್ಕೆ ಬಿದ್ದು ಘೋರೆಂದು ಅಳಹತ್ತಿದನು ಕೇವಲ ದಯಾಮಯರಾದ ರಾಯರ ಅಂತಃಕರಣವು ಕರಗಿ ನೀರಾಗಿ ಹೋಯಿತು ಅಂಥಾ ನಿಶ್ಚಲ ನಿರ್ವಿಕಾರ ಮನಸ್ಸುಳ್ಳ ಮಹಾತ್ಮರಿಗೂ ಅಂದು ಕಣ್ಣೀರಿನ ಒಂದೆರಡು ಹನಿಗಳು ಬೀಳದೆ ಹೋಗಲಿಲ್ಲ. ಆಗ ರಾಯರು ಇಷ್ಟೇ ಹೇಳಿದರು:—ಹೇ ರಾಜಾ, ನಿನ್ನ ಮಗನಿಗೆ ಈಗ ಕಾಲಮೃತ್ಯುವು ಬಂದೊದಗಿಲ್ಲ ಇದು ಅಕಾಲ ಮೃತ್ಯುವು. ಹಾವಿನ ರೂಪದಿಂದ ಬಂದು ನಿಮ್ಮೆಲ್ಲರನ್ನು ಕ್ಷಣ ಹೊತ್ತು ದುಃಖಸಾಗರದಲ್ಲಿ ಮುಳುಗಿಸಿರುವದು. ಇಷ್ಟಕ್ಕಾಗಿ ನೀನು ಭಯ ಪಡಬೇಡ. ನಡೆ, ಪ್ರಭು ರಾಮಚಂದ್ರನು ಸಮರ್ಥನಿದ್ದಾನೆ.

ಆಯಿತು; ರಾಯರ ಈ ಮಾತು ನೆರೆದ ಜನರಿಗೆಲ್ಲ ಆಕಾಶವಾಣಿಯಾದಂತಾಯಿತು. ಎಲ್ಲರ ಮೋರೆಗಳೂ ಸತೇಜವಾದವು. ಅಳುವು ನಿಂತು ಹೋಯಿತು. ಮಹಾರಾಜನು ಸಾಷ್ಟಾಂಗವಾಗಿ ವಂದಿಸಿ ಭಕ್ತಿಯಿಂದ ಪ್ರಾರ್ಥನೆ ಮಾಡಿಕೊಂಡು ರಾಯರನ್ನು ಅರಮನೆಗೆ ಕರಕೊಂಡು ನಡೆದನು. ರಾಯರು ಒತ್ತಟ್ಟಿಗೆ ಕುಳಿತುಕೊಂಡು ತಮ್ಮ ತಪಃಸಾಮರ್ಥ್ಯದಿಂದ ನಾಗರಹಾವನ್ನೇ ಎಳತರಿಸಿ:—ರಾಜಕುಮಾರನ ಮೈಯ್ಯೊಳಗೆ ಬಿಟ್ಟಂಥ ವಿಷವನ್ನು ಪುನಃ ಹೀರಿಕೊಳ್ಳಬೇಕೆಂದು ಅದಕ್ಕೆ ಅಪ್ಪಣೆ ಮಾಡಿದರು. ತತ್‌ಕ್ಷಣ ಆ ಸರ್ಪವು ಬುಸುಗುಟ್ಟುತ್ತ ರಾಜಕುಮಾರನು ಬಿದ್ದಲ್ಲಿಗೆ ಹೋಗಿ ವಿಷವನ್ನೆಲ್ಲ ಹಿಂದಕ್ಕೆ ತೆಕ್ಕೊಂಡಿತು. ಸಂಗಡಲೆ ರಾಜಕುಮಾರನು ನಿದ್ರೆಯಿಂದೆಚ್ಚತ್ತವನಂತೆ ಎದ್ದು ಕುಳಿತನು. ಸರ್ಪವು ರಾಯರಿದ್ದಲ್ಲಿಗೆ ಬಂದು ಸಂಕೇತವನ್ನು ತೋರಿಸಿ ಹೊರಟು ಹೋಯಿತು. ಆಗ ಮಹಾರಾಜನಿಗೂ, ರಾಜ ಪರಿವಾರಕ್ಕೂ, ನೆರೆದ ಜನರಿಗೂ

ಇನ್ನೆಷ್ಟು ಆನಂದವಾಗಿರಬೇಡ! ರಾಯರ ಮೇಲೆ ಪುಷ್ಪವೃಷ್ಟಿಯಾದಂತೆ ಮುತ್ತು-ರತ್ನಗಳ ಸುರಿಮಳೆಯಾಯಿತು. ರಾಜನೂ ಆತನ ಹೆಂಡತಿಯೂ ಮಗನನ್ನು ತಬ್ಬಿಕೊಂಡು ಬಂದು ರಾಯರ ಪಾದದ ಮೇಲೆ ಹಾಕಿ:—ಸ್ವಾಮೀ! ಪುತ್ ಎಂಬ ನರಕದಿಂದ ದಾಟಿಸುವಂಥ ಪುತ್ರಭಿಕ್ಷವನ್ನು ಕೊಟ್ಟ ತಮಗೆ ಪಾಮರರಾದ ನಾವೇನನ್ನು ಕೊಡೋಣ! ಧನ್ಯರಾದೆವು. ನಮ್ಮೀ ಜನ್ಮವು ಸಾರ್ಥಕವಾಯಿತು. ಹೀಗೆಂದು ಪರಿ ಪರಿಯಿಂದ ನುತಿಸುತ್ತ ರಾಯರನ್ನು ಎಂಟಾನೆಂಟು ದಿವಸ ಇಟ್ಟುಕೊಂಡು ಕೃಷ್ಣಾಪುರವೆಂಬ ಗ್ರಾಮವನ್ನು ಇನಾಮಾಗಿ ಹಾಕಿ ಕೊಟ್ಟರಂತೆ. ಸತ್ಪುರುಷರಾದವರು ಏನು ಮಾಡ್ಯಾರು-ಏನು ಮಾಡಲಿಕ್ಕಿಲ್ಲೆಂಬ ನಿಯಮವೇ ಇಲ್ಲ. ಅವರು ದೇವರಲ್ಲಿಟ್ಟ ಭಕ್ತಿಭಾವವೇ ಅಂಥಾ ಬಲಿಷ್ಠವಾದದ್ದಾಗಿರುವದು. ಅಂದಮೇಲೆ ಅವರಿಗೆ ಯಾರದೇನು ಭಯ? ಈ ವಿಷಯದಲ್ಲಿ ಒಬ್ಬ ಸತ್ಪುರುಷರು ಅಂದ ಮಾತು ನೆನಪಿಗೆ ಒಂದಿರುವದು.

"ರಮೆರಮಣನ ಸಿರಿ ರಮಣೀಯ ನಾಮವಿರೆ |
ಯಮಗಿಮ ಸಂಜಿಕೆ ನಿಮಗುಂಟೇ || ಪಲ್ಲ ||
ಕೊಲ ಕೊಲಗೆಲೊ ಕಲಿಯೆನಿಲ್ಲದಿಲ್ಲಿ |
ಕೊಲಕೊಲಗೆಲೊ ಕಲಿಯೆ |
ಸಲಿಸಲಿಗೆಯ ಬಿಡು ಸಲಿಲಜಾಕ್ಷನ ದಾಸರಾ || "

(ಪ್ರಸನ್ನ ವೆಂಕಟರು.)

ಇಂಥವರೇ ಈ ಮಾತನ್ನಾಡುತ್ತಿರುವಾಗ ಶ್ರೀರಾಯರ ವಿಷಯದಲ್ಲಂತೂ ಇನ್ನೇನೆಂದು ಹೇಳೋಣ!

---



## ೧೬ನೆಯ ಕಥೆ

# ಬಿದರಹಳ್ಳಿ ಶ್ರೀನಿವಾಸತೀರ್ಥರಿಗೆ ಅನುಗ್ರಹಿಸಿದ್ದು.






ಪುಣ್ಯತಮವಾದ ಭೀಮಾನದಿಯ ತೀರದಲ್ಲಿ ಮಣೂರು ಎಂಬವೊಂದು ಗ್ರಾಮವುಂಟು. ಅಲ್ಲಿ ರಘಪ್ಪನಾಯಕರು ವಾಸಿಸುತ್ತಿದ್ದರು. ಇವರಿಗೆ ಶೀನಪ್ಪನಾಯಕರು-ಕೃಷ್ಣಪ್ಪನಾಯಕರು-ಯಾದಪ್ಪನಾಯಕರು ಎಂಬ ಮೂರು ಮಂದಿ ಮಕ್ಕಳಾದರು. ಇವರಲ್ಲಿ ಹಿರಿಯರಾದ ಶೀನಪ್ಪನಾಯಕರು ಚಿಕ್ಕಂದಿನಲ್ಲಿಯೇ ವಿರಕ್ತರಾಗಿ ಶ್ರೀಮದುತ್ತರಾದಿಮಠದ ವೇದವ್ಯಾಸ ತೀರ್ಥರಿಂದ ಆಶ್ರಮತಕ್ಕೊಂಡು 'ವೇದೇಶತೀರ್ಥರೆಂಬ' ಹೆಸರನ್ನು ಪಡೆದರು. ಇವರು ಬಿಡಿ ಸಂನ್ಯಾಸಿಗಳು. ಕಡೆಯವರಾದ ಯಾದಪ್ಪನಾಯಕರು ಅಣ್ಣಂದಿರಾದ ವೇದೇಶತೀರ್ಥರಲ್ಲಿಯೇ ಮಧ್ವಶಾಸ್ತ್ರವ್ಯಾಸಂಗಮಾಡಿ 'ಯಾದವಾರ್ಯ' ರೆಂಬ ಹೆಸರಿನಿಂದ ಪ್ರಸಿದ್ಧರಾದರು. ಇವರು ಸುಧಾ ಗ್ರಂಥಕ್ಕೂ ಭಾಗವತಕ್ಕೂ ಯಾದವೀಯವೆಂಬ ಶ್ರೇಷ್ಠವಾದ ಟಿಪ್ಪಣ

ವನ್ನು ಬರೆದಿದ್ದಾರೆ. ಮುಂದೆ ಇವರ ವಂಶಜರು ತುಂಗಭದ್ರಾತೀರವಾದ ಬಿದರಹಳ್ಳಿಯೆಂಬ ಗ್ರಾಮದಲ್ಲಿ ಬಂದು ನಿಂತಿದ್ದರಿಂದ ಬಿದರಹಳ್ಳಿ ಆಚಾರ್ಯರು ಎಂಬ ಪ್ರಖ್ಯಾತವಾದ ನಾಮಧೇಯವು ಇವರಿಗೆ ಬಂತು. ಇದಕ್ಕೆಲ್ಲ ಮುಖ್ಯವಾಗಿ ಯಾದವಾರ್ಯರ ಅದ್ವಿತೀಯವಾದ ಪಾಂಡಿತ್ಯ-ಅಗಾಧವಾದ ತಪಃಸಾಮರ್ಥ್ಯ-ಅಚಲವಾದ ಭಗವದ್ಭಕ್ತಿ-ಅತ್ಯಂತ ವಿರಕ್ತಿ ಇವೇ ಕಾರಣವಾದವೆಂದು ಹೇಳಬಹುದು.

ಈ ಪ್ರಕಾರ ಪ್ರಸಿದ್ಧರಾದ ಯಾದವಾರ್ಯರ ಅಣ್ಣನ ಮಕ್ಕಳೇ ಶ್ರೀನಿವಾಸಾಚಾರ್ಯರು.

ರಮಾಪತಿಪ್ರಸಾದಯುಕ್ತಃ ಭ್ರಮಾಜ್ಞಾನವಿವರ್ಜಿತಃ ||
ಕೃಷ್ಣನಾಮ್ನಃ ಪಿತುರ್ಜಾತಾ ತಿಮ್ಮಾಯಾಂ ಬಾಗಡೀಸ್ಥಳೀ ||

(ಶ್ರೀನಿವಾಸಾಚಾರ್ಯರ ತಂದೆ ಕೃಷ್ಣಪ್ಪನಾಯಕರು. ತಾಯಿ ತಿಮ್ಮಾಬಾಯಿ. ಸ್ಥಳ ಬಾಗಲಕೋಟ) (ವೆಂಕಟಾಚಾರ್ಯಕೃತ ಗುರುಸ್ತೋತ್ರ)

ಶ್ರೀನಿವಾಸಾಚಾರ್ಯರು ಬಾಗಲಕೋಟೆಯಲ್ಲಿ ಬಂದು ನಿಂತಿದ್ದರು. ಇವತ್ತಿಗೂ ಅಲ್ಲಿ ಇವರ ವಂಶಜರಾದ ಜೋರಾಪುರದ ಮನೆತನದವರು ಇದ್ದಾರೆ.

ಮುಂದೆ ಬಾಗಲಕೋಟೆಯಿಂದ ಬಿದರಹಳ್ಳಿಗೆ ಬಂದರು. ಕೆಲವು ದಿವಸದ ಮೇಲೆ

ವೇಣುಪಲ್ಲೀಪಿಪ್ಪಲೀ ತು ಯುವನ್ನೈರ್ಮಲಿನೇ ಕೃತೇ ||
ವೇಣುಪಲ್ಲೀಂ ಪರಿತ್ಯಜ್ಯ ಜಗ್ಮುರ್ಹರಿಹರಂ ಪ್ರತಿ ||

ಬಿದರಹಳ್ಳಿಯನ್ನು ತ್ಯಾಗಮಾಡಿ ಹರಿಹರಕ್ಕೆ ಬಂದರು ಅಲ್ಲಿಯೂ ಬಹು ದಿವಸ ನಿಲ್ಲಲಿಲ್ಲ. ಅದೇ ತುಂಗಭದ್ರಾತೀರವಾದ ಹೊನ್ನಾಳಿ ಎಂಬ ಗ್ರಾಮಕ್ಕೆ ಬಂದರು.

ಪದ್ಮೋದ್ಭವಾ ಪದ್ಮಭವಾದಿಸೇವ್ಯಾ |
ಪದ್ಮಾಯತಾಕ್ಷಾಚ್ಯುತಪಾದಪದ್ಮಂ |
ಸಂಸೇವಿತಂ ನಿಶ್ಚಯಮಾಭಿಪದ್ಯಾ |
ಸುವರ್ಣಪಲ್ಲೀಂ ಪ್ರಯಯೌ ಸುಧೀರಃ ||

ಇಲ್ಲಿಂದ ಇವರ ಮಕ್ಕಳಾದ 'ವೆಂಕಟಾಚಾರ್ಯರು' ಬಾಹುಪಲ್ಲಿಗೆ ಅಂದರೆ ಥಟ್ಟೀಹಳ್ಳಿಗೆ ಹೋಗಿ ನಿಂತಿದ್ದರಿಂದ ಅವರ ವಂಶಜರು ಅಲ್ಲಿಯೂ,

ಉಳಿದವರು ಈ ಹೊನ್ನಾಳಿಯಲ್ಲಿಯೂ ಅದ್ಯಾಪಿ ಇರುತ್ತೀರುವರು ಇರಲಿ.

ಒಮ್ಮೆ ಶ್ರೀರಾಘವೇಂದ್ರಸ್ವಾಮಿಗಳವರು ಸಂಚಾರಕ್ರಮೇಣ ಬಿದರ ಹಳ್ಳಿಗೆ ಬರಲು ಅವರಿಗೆ ಬರೆಯಲಿಕ್ಕೆ ಮಸಿಯು ಬೇಕಾಯಿತು. ಆಗ ಆಚಾರ್ಯರಿಗೆ ಹೇಳಿ ಕಳಿಸಿದರು ಕೂಡಲೆ ಶ್ರೀನಿವಾಸಾಚಾರ್ಯರು ಅತೀವ ಭಕ್ತಿಯಿಂದ ಮಡಿಯುಟ್ಟುಕೊಂಡು ಮಸಿಯನ್ನು ತಕ್ಕೊಂಡು ಹೋಗಿ ಶ್ರೀಗಳವರಿಗೆ ಅರ್ಪಿಸಿದರು. ಅದನ್ನು ನೋಡಿ ಶ್ರೀಗಳವರು ಇದನ್ನು ಇಷ್ಟು ಮಡಿಯಿಂದ ತಂದ ಕಾರಣವೇನೆಂದು ಕೇಳಿದರು. ಅದಕ್ಕೆ ಆಚಾರ್ಯರು:—ಸ್ವಾಮೀ! ಪ್ರತಿವರ್ಷ ಈ ತುಂಗಭದ್ರಾನದಿಗೆ ಭಾಗೀರಥಿಯು ಪ್ರವೇಶ ಮಾಡುವಂಥ ಕರ್ಕಾಟಕ ಸಂಕ್ರಮಣ ಕಾಲದಲ್ಲಿಯೇ ಆ ಉದಕವನ್ನು ಮಡಿಯಿಂದ ತಕ್ಕೊಂಡು ಬಂದು ಮಸಿಯನ್ನು ಮಾಡುವದು ನನ್ನ ಸಾಂಪ್ರದಾಯವು ಅದರಿಂದ ಹಾಗೆ ತಕ್ಕೊಂಡು ಬಂದೆನಲ್ಲದೆ ಮತ್ತೇನೂ ಇಲ್ಲವೆಂದು ವಿಜ್ಞಾಪಿಸಿಕೊಂಡರು. ರಾಯರಿಗೆ ಪರಮಾನಂದವಾಯಿತು. ನಿಮ್ಮ ಮಸಿಯಲ್ಲಿಯೇ ಇಷ್ಟು ಮಹಿಮೆಯಿದ್ದಮೇಲೆ ನೀವು ಬರೆದ ಗ್ರಂಥಗಳು ಇನ್ನು ಹ್ಯಾಗಿರುವವೋ ನಾವು ನೋಡಬೇಕೆಂದರು. ಕೂಡಲೆ ಆಚಾರ್ಯರು:—ಕೇವಲ ಪಾಮರನಾದ ನಾನು ಬರೆದ ಗ್ರಂಥಗಳನ್ನು ತಮ್ಮಂಥ ಮಹನೀಯರಿಗೆ ತೋರಿಸಲಿಕ್ಕೆ ತುಂಬಾ ನಾಚಿಕೆಯಾಗುತ್ತಿರುವದು. ಆದರೂ ಗುರುಗಳ ಅಪ್ಪಣೆಯು ಶಿರಸಾವಾನ್ಯವೆಂದು, ತಾವು ಬರೆದ ಗ್ರಂಥಗಳನ್ನು ತೋರಿಸಿದರು ರಾಯರಿಗೆ ಆ ಗ್ರಂಥದಲ್ಲಿ ವರ್ಣಾಭಿಮಾನಿ ದೇವತೆಗಳೇ ದರ್ಶನ ಕೊಟ್ಟರಂತೆ, ಅದನ್ನು ನೋಡಿ ಸಂತೋಷಸಾಗರದಲ್ಲಿ ಮುಳುಗಿ ಹೋದರು. ತತ್ಕ್ಷಣ ಸಭೆಯಲ್ಲಿ ಆಚಾರ್ಯರಿಗೆ ಸಂಭಾವನಾದಿಗಳನ್ನು ಕೊಟ್ಟು ಮರ್ಯಾದೆ ಮಾಡಿ, ನೀವು ಗೃಹಸ್ಥಾಶ್ರಮದಲ್ಲಿದ್ದಾಗ್ಯೂ ಯತಿಗಳಂತೆ ತೀರ್ಥರೆಂಬ ಹೆಸರಿಗೆ ಯೋಗ್ಯರಾಗಿರುತ್ತೀರಿ. ಕಾರಣ ಈ ಹೊತ್ತಿನಿಂದ ನಿಮಗೆ ಶ್ರೀನಿವಾಸ ತೀರ್ಥರೆಂಬ ಹೆಸರು ಕೊಟ್ಟಿರುವೆವೆಂದು ಹೇಳಿದರು. ಅಂದಿನಿಂದ ಇವರು ಇದೇ ಹೆಸರಿನಿಂದ ಪ್ರಸಿದ್ಧರಾಗಿದ್ದಾರೆ.

ಮುಂದೆ ಕೆಲವು ದಿವಸದಮೇಲೆ ಈ ಶ್ರೀನಿವಾಸತೀರ್ಥರು ಶ್ರೀರಾಘವೇಂದ್ರಸ್ವಾಮಿಗಳವರ ದರ್ಶನಕ್ಕೆಂದು ಮಂತ್ರಾಲಯಕ್ಕೆ ಹೋದರು ಶ್ರೀಗಳವರಾದರೂ ಪ್ರೀತಿಪೂರ್ವಕವಾಗಿ ಇವರ ಕ್ಷೇಮಕುಶಲಾದಿಚಾರವನ್ನು

ವಿಚಾರಿಸಿ ಕುಳ್ಳಿರಿಸಿಕೊಂಡರು. ಆಗ ಮೊದಲನೆಯ ತಿಂಗಳ ವ್ರತ ದಿವಸವಾಗಿತ್ತು. ಈ ವ್ರತದಲ್ಲಿ ಉತ್ತರಾದಿಮಠದವರು ಸಾಸಿವೇ ಕಾಳನ್ನು ಉಪಯೋಗಿಸುವದಿಲ್ಲ. ಅದರ ಬದಲು ಹುಳ್ಳೀ ಯುಳ್ಳನ್ನು ಉಪಯೋಗಿಸುವರು. ಮಂತ್ರಾಲಯ ಮಠದವರು ಹೋಮದ್ರವ್ಯ ವೆಂದು ತಿಳಿದು ಸಾಸಿವಿಯನ್ನೇ ತಕ್ಕೊಳ್ಳುತ್ತಿರುವರು. ಇವೆಲ್ಲ ಆಯಾ ಮಠದ ಸಾಂಪ್ರದಾಯಗಳು.

ಈ ಸಾಂಪ್ರದಾಯವನ್ನಿಟ್ಟುಕೊಂಡು ಶ್ರೀನಿವಾಸತೀರ್ಥರು ಶ್ರೀಗಳ ವರ ಪಂಕ್ತಿಯಲ್ಲಿ ಭೋಜನಕ್ಕೆಕುಳಿತಾಗ ಸಾಸಿವೆಗೂಡಿದ ಪದಾರ್ಥವನ್ನು ತೆಗೆದುಕೊಳ್ಳಲಿಲ್ಲ. ಅದನ್ನು ಕಂಡು ಶ್ರೀಗಳವರು ಅವರ ನಿಯಮದಂತೆ ಬೇರೆ ಪದಾರ್ಥಗಳನ್ನೇ ಮಾಡಿಸಿ ಭೋಜನ ಮಾಡಿಸಿದರು. ಹೀಗೆಯೇ ನಾಲ್ಕುದಿವಸ ನಡೆಯಿತು. ನಂತರ ಶ್ರೀನಿವಾಸತೀರ್ಥರು ಫಲ ಮಂತ್ರಾಕ್ಷತೆಯನ್ನು ತಕ್ಕೊಂಡು ಊರಿಗೆ ಹೊರಡಬೇಕೆಂದು ಯೋಚಿಸಿ ಶ್ರೀಗಳವರಹತ್ತರ ಹೋದರು. ಆಗ ಶ್ರೀಗಳು ಯಾದವಾರ್ಯರಿಗೂ-ಇವರಿಗೂ ಬೇರೆ ಬೇರೆಯಾಗಿ ಮಂತ್ರಾಕ್ಷತೆಗಳನ್ನು ಕೊಟ್ಟು ಕಳಿಸಿದರು. ಶ್ರೀನಿವಾಸತೀರ್ಥರು ಊರಿಗೆ ಬಂದು ಕಕ್ಕಂದಿರಾದ ಯಾದವಾರ್ಯರಿಗೆ ತಾವು ಹೋಗಿ ಬಂದ ಸಂಗತಿಯನ್ನೆಲ್ಲ ತಿಳಿಸಿ ಮಂತ್ರಾಕ್ಷತೆಯ ಗಂಟನ್ನು ಬಿಚ್ಚಿದರು. ನೋಡುತ್ತಾರೆ! ಯಾದವಾರ್ಯರಿಗೆ ಕೊಟ್ಟಂಥವು ಚೆನ್ನಾಗಿ ಇದ್ದು, ತಮಗೆ ಕೊಟ್ಟಂಥವು ಮಾತ್ರ ಕಪ್ಪುವರ್ಣವಾಗಿದ್ದವು. ಈ ಕಳಾ ಭೇದವನ್ನು ಕಂಡು ಯಾದವಾರ್ಯರು:—ತಮ್ಮಾ! ನೀನು ಶ್ರೀಗಳವರ ಅನುಗ್ರಹಸಂಪಾದಿಸುವ ಬದಲು ಅವರ ಅವಕೃಪೆಗೆ ಪಾತ್ರನಾಗಿ ಬಂದೆ. ಇಗೋ ನೋಡು, ಎಂದು ಹೇಳಿ, ಅವರ ಮಂತ್ರಾಕ್ಷತೆಗಳನ್ನು ಒಂದು ಗುಬ್ಬಿಯ ಮೇಲೆ ಚಲ್ಲಲು, ಕೂಡಲೆ ಅದು ಸತ್ತುಹೋಯಿತು ಪುನಃ ತಮ್ಮ ಮಂತ್ರಾಕ್ಷತೆಗಳನ್ನು ಹಾಕಲು ಅದು ಮೊದಲಿನಂತೆ ಭುರ್ರನೆ ಹಾರಿಹೋಯಿತು! ಇದನ್ನು ನೋಡಿದ ಕೂಡಲೆ ಶ್ರೀನಿವಾಸತೀರ್ಥರು ಝುರ್ರನೆ ಇಳಿದುಹೋದರು. ಅವರ ಮೋರೆ ಇಷ್ಟಾಯಿತು ಕಕ್ಕಂದಿರೆದು ರಿಗೆ ಮಾತಾಡಲಿಕ್ಕೆ ಬಾಯಿಬಾರದು. ಕಡೆಗೆ ಹೇಗೋ ಭೋಜನ ಸಮ ಯದಲ್ಲಿ ನಡೆದದ್ದನ್ನೆಲ್ಲ ಹೇಳಿದರು. ಯಾದವಾರ್ಯರು ಮುಗುಳ್ನಗೆ ನಕ್ಕು:—ಅಪ್ಪಾ, ಬಾಲಕಾ! ಪಾಂಡಿತ್ಯವನ್ನಾಗಲಿ-ವ್ರತಾಚಾರನಿಯಮ

ಗಳನ್ನಾಗಲಿ ಮಹನ್ನೀಯರಾದವರಲ್ಲಿ ಎಂದಿಗೂ ತೋರಿಸಲಿಕ್ಕೆ ಹೋಗ ಕೂಡದು ಕಂಡಿಯಾ? ಶ್ರೀಗಳವರಂತೂ ಭಗವದ್ಭಕ್ತಶಿಖಾಮಣಿಗಳು; ಅಗಾಧ ತಪಸ್ವಿಗಳು. ಅವರು ನಡೆದದ್ದೇ ಮಾರ್ಗ. ನುಡಿದದ್ದೇ ವೇದ. ಇಂಥ ಶಾಪಾದಪಿ ಶರಾದಪಿಗಳಾದವರ ಎದುರಿನಲ್ಲಿ, ನಮ್ಮಂಥವರು ಯಾವ ಗಿಡದ ತೊಪ್ಪಲು? ಇದನ್ನರಿಯದೆ ಅವರಿಗೆ ವಿರುದ್ಧವಾಗಿ ನಿನ್ನ ನೇಮವನ್ನು ಅವರ ಸಮಕ್ಷಮದಲ್ಲಿಯೇ ನಡಿಸಬಹುದೇ? ಮನೆಯಲ್ಲಿ ದ್ದಾಗ ನಿನ್ನಿಷ್ಟಕ್ಕೆ ನೀನು ಬೇಕಾದ ಹಾಗೆ ನಡಿಸು. ಅಲ್ಲಿ ಹೀಗೆ ಮಾಡಿದ್ದು ತಪ್ಪು. ಅತ ಏವ ನೀನು ಈಗಲೇ ಹೋಗಿ ಅವರಿಗೆ ಶರಣಾಗತನಾಗಿ ಅವರ ನಿಯಮದಂತೆಯೇ ನಡೆದು, ಅವರ ಅನುಗ್ರಹಕ್ಕೆ ಪಾತ್ರನಾಗಿ ಬರ ಬೇಕು, ಎಂದು ಹೇಳಿಕಳಿಸಿದರು.

ಮರುದಿವಸವೇ ಶ್ರೀನಿವಾಸತೀರ್ಥರು ಶಕ್ಕಂದಿರವರ ಮಾತಿನಂತೆ ಹೊರಟುಹೋಗಿ ಶ್ರೀಗಳವರಿಗೆ ಶರಣಾಗತರಾಗಿ ಕ್ಷಮಾಪಣೆಯನ್ನು ಬೇಡಿ ಕೊಂಡರು; ಹಾಗೂ ಅವರು ಸ್ವೀಕರಿಸಿದ್ದನ್ನೇ ತಾವೂ ಸ್ವೀಕರಿಸಿದರು. ಕಡೆಗೆ ಶ್ರೀಗಳವರು ಯಾದವಾರ್ಯರ ನಿಸ್ಸೀಮವಾದ ಭಕ್ತಿಭಾವಕ್ಕೆ ಮೆಚ್ಚಿ, ಶ್ರೀನಿವಾಸ ತೀರ್ಥರನ್ನು ಅನುಗ್ರಹಿಸಿ ಕಳುಹಿದರು. ಅಂದಿನಿಂದ ಬಿದರ ಹಳ್ಳಿ ಆಚಾರ್ಯರ ಮನೆತನದವರು ವ್ರತದಲ್ಲಿ ಸಾಸಿವೆಯನ್ನು ತಕ್ಕೊಳ್ಳ ಹತ್ತಿದರು. ಇದನ್ನು ಅದ್ಯಾಪಿ ನೋಡಬಹುದು.

ಮಹಾತ್ಮರಾದವರಲ್ಲಿ ಎಂಥವಾದರೂ ತಮ್ಮ ಮತವನ್ನು ಪ್ರದರ್ಶಿಸ ಲಿಕ್ಕೆ ಹೋಗಬಾರದು. ಒಮ್ಮೆ ಶ್ರೀಸತ್ಯಪರಾಕ್ರಮ ಸ್ವಾಮಿಗಳವರು ಹಾಲಿನ ವ್ರತವಿದ್ದಾಗ ಬ್ರಾಹ್ಮಣಭೋಜನವು ಸುಖಕರವಾಗಲೆಂಬ ಉದ್ದೇಶದಿಂದ ಖೀರನ್ನು ಮಾಡಿಸಿ ಉಣಿಸಿದರಂತೆ. ಭಗವಂತನು ಭಕ್ತರ ಕೈವಾರಿಯಾದ್ದರಿಂದ ಅವರು ಏನು ನಿಷಿದ್ಧಕರ್ಮಗಳನ್ನು ಮಾಡಿದಾ ಗ್ಯಾದರೂ ಅವು ಅವನಿಗೆ ಪ್ರಿಯವಾಗುವವೇ ಹೊರತು ಅನ್ಯಥಾ ಇಲ್ಲ. ಆದ್ದರಿಂದಲೇ ಮಹಾತ್ಮರಾದ ಜಗನ್ನಾಥದಾಸರು:—

ಬುದ್ಧಿಪೂರ್ವಕವಾಗಿ ವಿಬುಧರು | ಶ್ರದ್ಧೆಯಿಂದರ್ಪಿಸಿದ ಕರ್ಮನಿ |
ಷಿದ್ಧವಾದವರು ಸರಿಯೆ ಕೈಕೊಂಡುದ್ಧರಿಸುತಿಪ್ಪ ||

ಎಂಬದಾಗಿ ಹೇಳಿಕೊಂಡಿರುವರು.

ಈ ಪ್ರಕಾರ ಶ್ರೀಮದ್ರಾಘವೇಂದ್ರ ಸ್ವಾಮಿಗಳವರು ಲೋಕ ಕಲ್ಯಾಣಾರ್ಥವಾಗಿ ದೇಶ ಸಂಚಾರ ಮಾಡಿ ಜನರನ್ನು ಭಕ್ತಿಮಾರ್ಗದ ಕಡೆಗೆ ಬಲುಮೆಯಿಂದ ಎಳೆತಂದರು. ಈಗಲೂ ತರುತ್ತಲಿರುವರು ಮುಂದಾದರೂ ತರುವರೆಂಬುದಕ್ಕೆ ಸಂದೇಹವೇನು? ಇಂಥ ಮಾಹಾತ್ಮರಾದ ದೇವತೆಗಳನ್ನು ಸಾಕಲ್ಯೇನ ವರ್ಣಿಸುವದೆಂದರೆ:—

'ಇಹ ಪುನರುದಧಿ ಸ್ನಾನ ಸಂಕಲ್ಪ ವತ್ಸಾ |'

(ಎಲ್ಲಿಯೋ ಕೊಂಚ ನೀರನ್ನು ಸ್ನಾನಮಾಡುವ ನಾವು, ಸಮುದ್ರಸ್ನಾನ ಮಹಂಕರಿಷ್ಯೆ| ಎಂಬ ಸಂಕಲ್ಪ ಮಾಡುವ ಹಾಗೆ)

ಎಂದು ಹೇಳುವ ಹಾಗೆಯೇ ಸರಿ.

ಶ್ರೀಪಂಡಿತಾಚಾರ್ಯರಂಥವರೂ ಒಂದು ಕಡೆಯಲ್ಲಿ—

ಸಂಕ್ಷಿಪ್ತವಾಕ್ಯೆ ಮಯಿಮಂದ ಬುದ್ಧೌ |
ಸಂತೋ ಗುಣಾಢ್ಯಾಃ ಕುರುಣಾಂ ಕ್ರಿಯಾಸುಃ ||

ಎಂಬದಾಗಿ ಹೇಳಿಕೊಂಡಿರಲು,

ಅತ್ಯಂತ ಗೂಢವಾದ ರಹಸ್ಯಾರ್ಥಗಳನ್ನಿಟ್ಟು ಮೋಕ್ಷದಾಯಕವಾದಂಥ ಹರಿಕಥಾಮೃತಸಾರವನ್ನು ರಚಿಸಿದ ಜಗನ್ನಾಥರಾಯರಂಥವರು:-

ಬುದ್ಧಿ ವಿದ್ಯಾ ಬಲದಿ ಪೇಳಿದ | ಶುದ್ಧಕಾವ್ಯವಿದಲ್ಲತತ್ವಸು|
ಪದ್ಧತಿಗಳನು ತಿಳಿದ ಮಾನವನಲ್ಲ ಬುಧರಿದ ||
ಮಧ್ವವಲ್ಲಭ ತಾನೆಹೃದಯದೊ | ಳಿದ್ದು ನುಡಿದಂದದಲಿನುಡಿದೆನ |
ಪದ್ಧಗಳನೋಡದಲೆ ಕಿವಿಗೊಟ್ಟಾಲಿಪುದು ಬುಧರು ||

ಈ ರೀತಿಯಾಗಿ ಹೇಳಿಕೊಂಡಿರಲು, ನನ್ನಂಥ ಪಾಮರ-ಅಜ್ಞಾನಿಯಾದವನು ಹೇಳಿಕೊಳ್ಳುವದೆಂದರೇನು? ಆದಾಗ್ಯೂ:—

ಜನರಿಗಾಗಿಯೆ ಅವತರಿಸಿ ಪೂರ್ವದಿಬಹು |
ಜನರನುದ್ಧರಿಸಿದಾತನನು ||
ನೆನೆಯುದಾತನೆ ಪಾಪಿಯುವನೆದುರಾತ್ಮನು |
ಮನುಜನವನೆಚಾಂಡಾಲಾ ||

ಎಂಬ ಸದುಕ್ತಿಯನ್ನು ಮನಸ್ಸಿನಲ್ಲಿ ತಂದು ಅವರ ಗುಣಶರಧಿಯೊಳಗಿನ ಒಂದೆರಡು ಬಿಂದುಗಳನ್ನು ಮಾತ್ರ ಬಯಲಿಗಿಟ್ಟಿರುತ್ತೇನೆ.

———

# ತೃತೀಯ ಗುಚ್ಛ.



ವ್ಯಾಸೇನವ್ಯುಪ್ತಬೀಜಃಶ್ರುತಿಭವಿಭಗವತ್ಪಾದಲಬ್ಧಾಂಕುರಶ್ರೀ |
ಪ್ರತ್ನೈರೀಷತ್ಪ್ರಭಿನ್ನೋಽಜನಿಜಯಮುನಿನಾಸಮ್ಯಗುದ್ಭಿನ್ನಶಾಖಃ ||
ಮೌನೀಶವ್ಯಾಸರಾಜಾದುದಿತಕಿಸಲಯಃ ಪುಷ್ಪಿತೋಽಯಂ ಜಯೀಂದ್ರಾ |
ದದ್ಯಶ್ರೀರಾಘವೇಂದ್ರಾದ್ವಿಕಸತಿಫಲಿತೋ ಮಧ್ವಸಿದ್ಧಾಂತಶಾಖೀ ||
(ಗುರುಗುಣಸ್ತವ)

---

## ೧ನೆಯ ಕಥೆ.

—(೦)—

ಸೋಮಪುರವೆಂಬುದೊಂದು ಊರಲ್ಲಿ 'ಅಭಿನವ ಜನಾರ್ದನ ವಿಠ್ಠಲ' ರೆಂಬ ಹೆಸರಿನ ಸತ್ಪುರುಷರೊಬ್ಬರಾಗಿ ಹೋದರು. ಇವರೂ ಹಬ್ಬ ದಾಸಕೂಟಕ್ಕೆ ಸೇರಿದ ಮಹಾತ್ಮರು. ಪ್ರಖ್ಯಾತರಾದ ಶ್ರೀಜಗನ್ನಾಥ ದಾಸರಾಯರ(೧೭೫೭-೧೮೫೯)ಶಿಷ್ಯರು. ಜಗನ್ನಾಥದಾಸರು ಪ್ರಲ್ಹಾದ ರಾಯರ ಸಹೋದರರಾದ ಸಲ್ಹಾದರಾಯರು ಅಂಶವೆಂದು ತಿಳಿದದೆ. ಈ ಅಭಿನವ ಜನಾರ್ದನವಿಠ್ಠಲರಾದರೋ ಪ್ರಲ್ಹಾದರಾಯರ ತಮ್ಮ ಅಲ್ಹಾದ ರಾಯರ ಅಂಶದವರು. ಇದೇ ರೀತಿಯಾಗಿ ಜಗನ್ನಾಥರಾಯರ ಶಿಷ್ಯರಾದ ಕರ್ಜಗಿ ದಾಸಪ್ಪ(ಶ್ರೀದವಿಠಲರು)ಎಂಬವರು ಪ್ರಲ್ಹಾದರಾಯರ ತಮ್ಮ ಅನುಲ್ಹಾದರಾಯರ ಅಂಶವಂತೆ. ಇರಲಿ.

ಲೋಕದಲ್ಲಿ ಸತ್ಪುರುಷರಾದವರು ಯಾವ ರೂಪದಿಂದ ಯಾವ ಸ್ಥಿತಿ ಯಿಂದ ಯಾವ ನಡೆ-ನುಡಿಗಳಿಂದ ಪ್ರಕಟರಾಗುತ್ತಾರೆಂಬದನ್ನು ಹೇಳಲಿ ಕ್ಕಾಗುವದಿಲ್ಲ. ಆದರಿಂದಲೇ ಸತ್ಪುರುಷರ ಸುಳಿವನ್ನು ಕಂಡುಹಿಡಿವುದು ದುಸ್ತರವಾಗಿರುವದು. ಈ ನಿಯಮದಂತೆ ನಮ್ಮ ಅಭಿನವ ಜನಾರ್ದನ ವಿಠ್ಠಲರಾದರೂ ಹುಟ್ಟಿದಂದಿನಿಂದ ಹೆಳವರಾಗಿದ್ದರು. ಹೆಳವರಾದರೇನು? ಕುರುಡರಾದರೇನು? ಉಚ್ಚ ಜಾತಿಯವರಾದರೇನು? ನೀಚ ಜಾತಿಯವ ರಾದರೇನು? ದೇವರಲ್ಲಿ ಅಚಲವಾದ ಭಕ್ತಿಯನ್ನು ಯಾವನು ಇಡುವನೋ ಅವನೇ ನಿಜವಾದ ಭಕ್ತನು; ಅವನೇಸತ್ಪುರುಷನು, ಎಂದೆನ್ನಿಸಿಕೊಳುವನು.

ಅದರಂತೆ ಅಭಿನವ ಜನಾರ್ಧನರು ದೇವರಲ್ಲಿಟ್ಟ ಅತೀವ ಭಕ್ತಿಯಿಂದ ಕರ್ನಾಟಕ ಸತ್ಪುರುಷ ಮಂಡಲದಲ್ಲಿ ಒಬ್ಬ ಪ್ರಮುಖ ಸದಸ್ಯರಾಗಿ ಸೇರಿದರು. ಇವರು ಒಮ್ಮೆ ಸಂಸಾರದ ತಾಪವನ್ನು ಸಹಿಸಲಾರದೆ ಶ್ರೀಮದ್ರಾಘವೇಂದ್ರ ಸ್ವಾಮಿಗಳನ್ನು ಪದ್ಯರೂಪದಿಂದ ಸ್ತೋತ್ರಮಾಡುತ್ತಿರಲು † ಶ್ರೀಗಳವರಿಗೆ ಅಂತಃಕರಣವು ಉಕ್ಕೇರಿಬಂತು. ಕೂಡಲೆ ನಮ್ಮ ಹೆಳವ ಸತ್ಪುರುಷರನ್ನು ಹಿಂದಿನಿಂದ ಯಾರೋ ಕೈಹಿಡಿದು ಎಬ್ಬಿಸಿದಂತಾಯಿತಂತೆ. ಶ್ರೀಕೃಷ್ಣಮೂರ್ತಿಯು ಕುಬ್ಜೆಯನ್ನು ಹಿಡಿದೆತ್ತಿ ನವ ಯೌವನ ರೂಪ ಸಂಪನ್ನೆಯನ್ನು ಮಾಡಿದಂತಾಯಿತು. ಆಗಲೇ ಅವರು ಚನ್ನಾಗಿ ನಡೆಯಲಿಕ್ಕೆ ಹತ್ತಿದರು. ಇದರಿಂದ ಅಭಿನವ ಜನಾರ್ದನರಿಗೆ ಇನ್ನೆಷ್ಟು ಸಂತೋಷವಾಯಿತೆಂಬದನ್ನು ಹೇಳಲಾಸಲ್ಲ. ಆ ಹೊತ್ತಿನಿಂದ ಇವರು ಶ್ರೀಗಳವರನ್ನು ಕೊಂಡಾಡುತ್ತ ದೇಶ ಸಂಚಾರ ಮಾಡಹತ್ತಿದರು. ನೋಡಿದಿರೋ, ಶ್ರೀಗಳವರ ಮಹಿಮೆಯನ್ನು!

ಮುಕ್ತಿಮಾರ್ಗದ ಅನೇಕ ಸಾಧನೆಗಳಲ್ಲಿ ಭಕ್ತಿಗೆ ಸಮಾನವಾದದ್ದು ಇನ್ನಾವುದೂ ಇಲ್ಲ. ಮಹಾತ್ಮರನೇಕರು ಇದನ್ನೇ ರಾಜಮಾರ್ಗವೆಂದು ಸಾರಿರುವರು.

ಶ್ರದ್ಧಯಾ ಭಜತಃ ಪುಂಸಃ ಶಿಲಾಪಿ ಫಲದಾಯಿನೀ |
ಮೂರ್ಖೋಽಪಿ ಪೂಜಿತೋ ಭಕ್ತ್ಯಾ ಗುರುರ್ಭವತಿ ಸಿದ್ಧಿದಃ ||
(ಸ್ಕಂದಪುರಾಣ ಬ್ರಹ್ಮೋತ್ತರ ಖಂಡ)

ಎಂಬ ಪುರಾಣೋಕ್ತಿಯು ಸತ್ಯವಾದದ್ದು. ಸತ್ಯವಾದದ್ದು.

## ೩ನೆಯ ಕಥೆ.

—(೦)—

ಮಂತ್ರಾಲಯಕ್ಕೆ ನಾಲ್ಕು ಹರದಾರಿ ದೂರದಲ್ಲಿ 'ಬಿಚ್ಚಾಲಿ' ಎಂಬುದೊಂದು ಊರಿರುವದು ಇದು ಪ್ರಲ್ಹಾದರಾಜನ ಕಾಲಕ್ಕೆ ಭಿಕ್ಷಾಲಯ ಅಂದರೆ ಜನರಿಗೆ ಭಿಕ್ಷಾಪಾಕಶಕ್ಕ ಬಾಗಿಲವಾಗಿತ್ತೆಂದು ಹಿಂದೆಯೇ ತಿಳಿಸಿದ್ದೇವೆ ಇಲ್ಲಿಯೂ ತುಂಗಭದ್ರಾನದಿಯು ಹರಿಯುತ್ತಿರುವದು. ಆ

† ಗುರುವೆನೀಕರುಣಿಸದಿರಲು ಉದ್ಧರಿಸುವ ಧೊರೆಗಳೀಧರೆಯೊಳುಂಟೀ || ಪಲ್ಲವಿ||

ನದಿಯ ಗಡ್ಡೆಯಲ್ಲಿ ಒಂದು ಪ್ರಾಣದೇವರುಂಟು; ಹಾಗೂ ಒಂದು ಕಟ್ಟೆಯೂ ಇದೆ. ಈ ಕಟ್ಟೆಯ ಮೇಲೆಯೇ ಶ್ರೀಮದ್ರಾಘವೇಂದ್ರ ಸ್ವಾಮಿಗಳವರು ಜಪಕ್ಕೆ ಕುಳಿತಿದ್ದರಂತೆ.

ಈ ಊರಲ್ಲಿ ಅಪ್ಪಣಾಚಾರ್ಯರೆಂಬ ಹೆಸರಿನ ಬ್ರಾಹ್ಮಣರೊಬ್ಬರಿದ್ದರು. ಇವರ ಹೆಸರು ನಮ್ಮ ವಾಚಕರಿಗೆ ಅಪರಿಚಿತವಾದದ್ದಲ್ಲ.

ಪುರಾ ಪ್ರಲ್ಹಾದನಾಮಾಭೂದ್ಧಿರಣ್ಯಕಶಿಪೋಃ ಸುತಃ |
ಯದರ್ಥಂ ಶ್ರೀಮಹಾವಿಷ್ಣುರ್ನೃಕಂಠೀರವತಾಂ ಗತಃ ||
ಸಂಹತಃ ಪ್ರಹತಶ್ಚೇತಿ ತಸ್ಯಾಸ್ತಾಂ ಪರಿಚಾರಿಣೌ |
ಶ್ರೀರಾಘವೇಂದ್ರತೀರ್ಥಾಖ್ಯೋಽವತೀರ್ಯ ಯತಿರೂಪತಃ ||
ವಿವೃತ್ಯಾ ಮಧ್ವಶಾಸ್ತ್ರಸ್ಯ ಲೋಕೋಪಕೃತಿಮಾತನೋತ್ ||
ಅಪ್ಪಣಾಚಾರ್ಯಕೃಷ್ಣಾಖ್ಯೌ ತತ್ರಾಪಿ ದ್ವಿಜರೂಪತಃ ||||
ಸಂಹತಪ್ರಹತೌ ಜಾತೌ ಶಿಷ್ಯೌ ತಸ್ಯ ಪ್ರಿಯೌ ಸದಾ ||

(ರಾಘವೇಂದ್ರತಂತ್ರ)

ಎಂಬಂತೆ ಕೃತಯುಗದಲ್ಲಿ ಅವತರಿಸಿದ ಪ್ರಲ್ಹಾದನಿಗೆ ಪರಿಚಾರಕರಾದ ಸಂಹತ-ಪ್ರಹತರೆಂಬವರೇ ತ್ರೇತಾ-ದ್ವಾಪರಯುಗಗಳಲ್ಲಿ ಬೇರೆ ಬೇರೆ ಹೆಸರಿನಿಂದ ಹುಟ್ಟಿಬಂದು ಕಲಿಯುಗದಲ್ಲಿ ಆ ಪ್ರಲ್ಹಾದನ ಅವತಾರವೇ ಆಗಿದ್ದ ಶ್ರೀರಾಘವೇಂದ್ರರಿಗೆ ಶಿಷ್ಯರಾಗಿ ಅಪ್ಪಣಾಚಾರ್ಯ-ಕೃಷ್ಣಾಚಾರ್ಯರೆಂಬ ಹೆಸರಿನಿಂದ ಹುಟ್ಟಿದರೆಂದು ಮೊದಲನೇ ಭಾಗದಲ್ಲಿಯೇ ತಿಳಿಸಿದ್ದೇವೆ. ಇಷ್ಟೇ ಅಲ್ಲ,

ಸರ್ವೇಷ್ವಪಿ ಚ ಶಿಷ್ಯೇಷು ಅಪ್ಪಣಾಚಾರ್ಯ ಏವ ಸಃ||
ಗುರೋರತಿಪ್ರಿಯೋ ಯಸ್ಮಾತ್ ಸ್ತುತಿಸ್ತೇನ ಸಮಾದೃತಾ ||

(ರಾಘವೇಂದ್ರತಂತ್ರ)

ಎಂಬದಾಗಿ ಶ್ರೀರಾಘವೇಂದ್ರ ಗುರುಗಳಿಗೆ ಇವರು ಪರಮ ಪ್ರೀತ್ಯಾಸ್ಪದರಾದವರು.

ಇವರು ಸಂಸ್ಕೃತದಲ್ಲಿ ಅಪಾರವಾದ ಪಾಂಡಿತ್ಯವನ್ನು ಸಂಪಾದಿಸಿದ್ದಲ್ಲದೆ ಗುರುಗಳಲ್ಲಿ ನಿಸ್ಸೀಮವಾದ ಭಕ್ತಿಯುಳ್ಳವರಾಗಿದ್ದರು 'ರಾಘವೇಂದ್ರಸ್ತೋತ್ರ' ವೆಂಬ ಗುರುಸ್ತುತಿಯನ್ನು ಮಾಡಿದವರು ಇವರೇ, ಒಮ್ಮೆ ಗುರುವೃಂದಾವನದ ಮುಂದೆ ಕುಳಿತು ಭಕ್ತಿಪರವಶತೆಯಿಂದ

ಸ್ತೋತ್ರಮಾಡುತ್ತಿರಲಾಗಿ:—

ಯೋ ಭಕ್ತ್ಯಾ ಗುರುರಾಘವೇಂದ್ರಚರಣದ್ವಂದ್ವಂ ಸ್ಮರನ್ ಯಃ ಪಠೇತ್

.... .... ....

.... .... ....

ಕೀರ್ತಿರ್ದಿಗ್ವಿದಿತಾ ವಿಭೂತಿರತುಲಾ.... .... ||

ಎಂದು ನುಡಿಯುತ್ತಿರಲು——'ಸಾಕ್ಷೀಹಯಾಸ್ಯೋತ್ರಹಿ' ಎಂಬದಾಗಿ ಹಿಮ್ಮಿಂದೊಮ್ಮೆ ವೃಂದಾವನದಲ್ಲಿದ್ದ ಶ್ರೀಪಾದಂಗಳವರಿಂದ ಉಚ್ಚರಿತವಾಯಿತಂತೆ. ಅದನ್ನು ಕೇಳಿ ಅಪ್ಪಣಾಚಾರ್ಯರು ಬೆರಗಾಗಿ ಹೋದರು. ಅನೇಕರು ಈ ದಿವ್ಯ ವಾಣಿಯನ್ನು ಕೇಳಿ ಗುರುಮಾಹಾತ್ಮ್ಯವನ್ನು ಪರಿಪರಿಯಿಂದ ಕೊಂಡಾಡಿದರು.

ಈ ವಿಷಯವಾಗಿ ಶ್ರೀಜಗನ್ನಾಥದಾಸರ ಪ್ರಿಯ ಶಿಷ್ಯರೂ ಅಪರೋಕ್ಷಜ್ಞಾನಿಗಳೂ ಆಗಿದ್ದ ಮನೋಹರವಿಠ್ಠಲರೆಂಬ ದಾಸರು † (ಬುದ್ದಿನ್ನಿನಾರಪ್ಪನವರು) ತಾವು ರಚಿಸಿದ 'ಗುರುರಾಘವೇಂದ್ರಸ್ವಾಮಿಗಳ ಪ್ರಾಕೃತ ಸ್ತೋತ್ರ' ಎಂಬ ಸಣ್ಣದೊಂದು ಗ್ರಂಥದಲ್ಲಿ (೩೧ ಷಟ್ಪದಿಗಳಿವೆ) ಹೀಗೆ ಹೇಳಿದ್ದಾರೆ:—

ಅವನತಿ ಭಕ್ತಿಯಿಂ ಗುರುರಾಘವೇಂದ್ರರಡಿ |
ದಾವರೆಯ ಸ್ತೋತ್ರಮಂ ಪಠಿಸುತ್ತ ಸ್ಮರಿಸಲು ಸು |
ಬಾವಳಿಯ ಹೊಂದುವನು ಲೇಶಕಮಲಾನಾಥನಮಲಪ್ರಸಾದದಿಂದ ||
ಶ್ರೀ ವಿಭೂತಿಯು ಕೀರ್ತಿ ದಿಗ್ವಿಜಯ ಮೊದಲಾದ |
ಈ ವಿಶೇಷಾರ್ಥದ ಸಮೃದ್ಧಿಯಂ ಪಡೆವುದಕೆ |
ವೇದೇಶ ಶ್ರೀಹಯಾಸ್ಯನೆಸಾಕ್ಷಿ ನಾನುಡಿವೆ ಕೇಳ್ವುದೆಲ್ಲಾ ಸುಜನರು||

---

† ಈ ದಾಸರು ಕನ್ನಡದಲ್ಲಿ ರಾಘವೇಂದ್ರಸ್ತೋತ್ರ — ಮನ್ಮಥ ವಿಲಾಸ ಎಂಬೆರಡು ಷಟ್ಪದ್ಯಗ್ರಂಥಗಳನ್ನು ಬರೆದಿದ್ದು ಇವುಗಳನ್ನು—ಶ್ರೀಯುತ ಹಣಮಂತರಾವ ಕುಲಕರ್ಣಿ ಗೋರಬಾಳ ವಕೀಲ—ಲಿಂಗಸೂಗೂರ (ಜಿಲ್ಲಾ-ರಾಯಚೂರ) ಎಂಬ ಮಹಾಶಯರು ಅಚ್ಚುಹಾಕಿಸಿರುವರು. ಅಪೇಕ್ಷಕರು ಅವರಿಂದ ತರಿಸಿಕೊಳ್ಳಬಹುದು.

ಅಲ್ಲದೆ ಈ ದಾಸರು—ಜಗನ್ನಾಥದಾಸರ ಹರಿಕಥಾಮೃತಸಾರದಲ್ಲಿ ಕಡೆಗೆ ಒಂದು ಸಂಧಿಯನ್ನು ಬರೆದಂತೆ ಈಗಲೀಗ ಅಚ್ಚಾದ ಉಡುಪಿಯ ಪ್ರತಿಯ ಮೇಲಿಂದ ಕಂಡುಬರುತ್ತದೆ.

## ೩ನೆಯ ಕಥೆ.

—(೦)—

ಪ್ರಲ್ಹಾದರಾಯರ ತಮ್ಮ ಸಲ್ಹಾದರಾಯರ ಅಂಶಭೂತರಾದ ಶ್ರೀಜಗನ್ನಾಥದಾಸರಾಯರೆಂಬ ಮಹಾತ್ಮರ ಹೆಸರನ್ನು ನಮ್ಮ ವಾಚಕರು ಅರಿಯದವರಲ್ಲ. ಅನೇಕ ಸಾರೆ ಕೇಳಿರುವರು. ಇವರು ವಿಜಯದಾಸರ ಶಿಷ್ಯರಾದ ಗೋಪಾಲದಾಸರು (ಭಾಗಣ್ಣದಾಸರ) ಶಿಷ್ಯರು. ಹಳ್ಳೀ ಅಪರೋಕ್ಷ ಜ್ಞಾನಿಗಳು. ಇವರ ಮಾಹಾತ್ಮೆಯು ಲೋಕಾಶ್ಚರ್ಯ ಕರವಾದದ್ದು.*

ಇಂಥಾ ಸತ್ಪುರುಷರು ಒಮ್ಮೆ ಮಂತ್ರಾಲಯಕ್ಕೆ ಬಂದು ಅಣ್ಣಂದಿರಾದ ಶ್ರೀಗಳವರನ್ನು ಸೇವಿಸಹತ್ತಿದರು. ಆಗ ವೃಂದಾವನಸ್ಥರಾದ ಗುರುಗಳು ದಾಸರಾಯರ ಸಂಗಡ ಏಕಾಂತವಾಗಿ ಮಾತನಾಡುತ್ತಿದ್ದರಂತೆ. ಮುಂದೆ ಈ ಸುದ್ದಿಯು ನಾ ಕೇಳು, ನೀ ಕೇಳು,ಎಂದು ನಾಲ್ಕೂ ಕಡೆಯಲ್ಲಿ ಹಬ್ಬಿತು. ಇದನ್ನು ಪರೀಕ್ಷಿಸಲೇಬೇಕೆಂದು ಕೆಲವರು ಹೊಂಚು ಹಾಕಿಕೊಂಡು ಸಹ ಕುಳಿತರು. ಪಾಪ! ದಾಸರಾಯರಿಗೆ ಇದೆಲ್ಲ ಏನು ಗೊತ್ತು? ಅವರು ಯಾವದನ್ನೂ ಅರಿಯದವರು. ದಿನದಂತೆ ಗುರುಸೇವೆಮಾಡಿ ಮುಗಿಸಿ ವೃಂದಾವನದ ಎದುರಿಗೆ ಕುಳಿತರು. ಗುರುಗಳನ್ನು ಮಾತನಾಡಿಸ ಹತ್ತಿದರು. ಎಷ್ಟು ಹೊತ್ತಾದರೂ ಗುರುಗಳು ಒಂದು ಮಾತು ಕೂಡಾ ಆಡಲಿಲ್ಲ. ದಾಸರಾಯರಿಗೆ ಆಶ್ಚರ್ಯವಾಯಿತು. ದಿನಾಲು ಮಾತನಾಡಿ ನನ್ನನ್ನು ಸಂತೋಷಪಡಿಸುತ್ತಿದ್ದ ಗುರುಗಳು ಇಂದು ಯಾಕೆ ಮಾತನಾಡುತ್ತಿರಲಿಕ್ಕಿಲ್ಲ? ಎಂಬದಾಗಿ ಚಿಂತಿಸುತ್ತ ಹೀಗೆ ಪ್ರಾರ್ಥನೆ ಮಾಡಿಕೊಂಡರು:—

ರಾಗ | ಪೂರ್ವಿ | ಮಟ್ಟತಾಳ

ಯಾಕೆ ಮೂಕನಾದ್ಯೋ| ಎಲೋ ಗುರುವೆ ನೀ| ಯಾಕೆ ಮೂಕನಾದ್ಯೋ||

ಆದರೂ ಗುರುಗಳು ಮಾತನಾಡಲಿಲ್ಲ ಆಗ ದಾಸರಾಯರು

* ಶ್ರೀಯುತ — ನಾರಾಯಣ ಭೀಮರಾವ ಕೆಲಮದಾಸಯವರು ಶ್ರೀಜಗನ್ನಾಥದಾಸರ ಅಲ್ಪ ಚರಿತ್ರವೊಂದನ್ನು ಬರೆದು ಪ್ರಸಿದ್ಧಪಡಿಸಿರುವರು.

ಇದು — ಪಾವಂಜೆ ಗುರುರಾಯರಲ್ಲಿ (ಉಡುಪಿ) ನಾಲ್ಕಾಣೆ ಬೆಲೆಗೆ ಸಿಕ್ಕುವದು.

ಜ್ಞಾನದೃಷ್ಟಿಯಿಂದ ನೋಡಲು—ಜನರು ಇವರ ಸಂಭಾಷಣವನ್ನು ಕೇಳ ಲಿಕ್ಕೆ ಜಪ್ಪಿಸಿ ಕುಳಿತಿರುವರೆಂದೂ ಅದರಿಂದಲೇ ಗುರುಗಳು ಮಾತನ್ನು ಬಿಟ್ಟಿ ರುವರೆಂದೂ ತಿಳಿಯುಬಂತು. ಆ ಹೊತ್ತಿನಿಂದ ಮುಂದೆ ಸಂಭಾಷಣವನ್ನು ಬಂದು ಮಾಡಿದರಂತೆ.

## ೪೧ನೆಯ ಕಥೆ.

—(೦)—

ಮಂತ್ರಾಲಯಕ್ಕೆ ಎರಡು ಹರದಾರಿ ದೂರದಲ್ಲಿ 'ಲಚ್ಚಮರಿ' ಎಂಬ ದೊಂದು ಊರುಂಟು. ಅಲ್ಲಿ ಬೆನಕಪ್ಪನೆಂಬೊಬ್ಬ ಕರಣಿಕ(ಶಾನುಭೋಗ) ನಿದ್ದನು. ಈತನು ರಾಯರಲ್ಲಿ ಅತ್ಯಂತ ನಿಷ್ಠೆಯುಳ್ಳವನು. ರಾಯರಾದರು ಮಹಾ ಕರುಣಾಶಾಲಿಗಳು. ತಮ್ಮನ್ನೇ ನಂಬಿದ ಭಕ್ತರನ್ನು ಅವರು ಎಂದೂ ಕೈಬಿಡಲಾರರು.

ಶ್ರೀರಾಘವೇಂದ್ರಾಯ ನಮಃ ಯೆಂಬ ದಿವ್ಯಾಷ್ಟ |
ಸಾರಾಕ್ಷರದ ಮಂತ್ರದಿಂ ನಿತ್ಯ ಭಕ್ತಿಯಿಂ |
ದಾರಾಧಿಸುತಜಪಿಸಿದವರಿಗಿಷ್ಟಾರ್ಥಕೈಸೇರುವದುನಿಃಸಂಶಯಾ ||
ಚಾರುತರ ಕೀರ್ತಿಯಿಂ ಶ್ರೀಮಧ್ವಮತ |
ಕ್ಷೀರವಾರಿನಿಧಿಚಂದ್ರನೋಳ್ಪೆಚ್ಚಿಸುತಲೋಕದೋಳ್ |
ಸಾರಿಸಿದೆನಿರ್ದೋಷಾಗಮ್ಯಮಹಿಮನೆರಾಘವೇಂದ್ರಗುರುಸಾರ್ವಭೌಮಾ||
(ಮನೋಹರವಿಠಲರು)

ಇಂಥಾ ದಯಾನಿಧಿಗಳಾದ ಗುರುಗಳು ಬೆನಕಪ್ಪನ ಅಪಾರವಾದ ಭಕುತಿಯನ್ನು ನೋಡಿ ಅವನಿಗೆ ಪ್ರತ್ಯಕ್ಷ ದರ್ಶನವನ್ನು ಕೊಟ್ಟಿದ್ದಿಟ್ಟರು. ಅಂದಿನಿಂದ ಬೆನಕಪ್ಪನು ಹಗಲೆಲ್ಲ ರಾಯರಮಠದಲ್ಲಿಯೇ ಇದ್ದುಕೊಂಡು ನಡುರಾತ್ರಿಯಲ್ಲಿ—ರಾಯರು ನದಿಯಲ್ಲಿ ಸ್ನಾನಮಾಡಿಕೊಂಡು ಬಂದು ದೇವತಾರ್ಚನೆಮಾಡುವದನ್ನು ಕಣ್ಣಾರೆ ನೋಡುತ್ತ ಆನಂದಸಾಗರದಲ್ಲಿ ತೇಲಾಡುತ್ತಿದ್ದನು. ಬೆನಕಪ್ಪನು ಏನು ಧನ್ಯನೋ! ಪೂರ್ವಜನ್ಮದಲ್ಲಿ ಇನ್ನೇನು ಸುಕೃತವನ್ನು ಮಾಡಿದ್ದನೋ! ಈ ಜನ್ಮದಲ್ಲಿ ರಾಯರನ್ನು ಪ್ರತ್ಯಕ್ಷೀಕರಿಸಿಕೊಂಡನು.

ಈ ಹೊತ್ತಿಗೂ ಬೆನಕಪ್ಪನ ಮನೆತನದವರು ಪ್ರತಿವರ್ಷ ರಾಯರ ಮಠಕ್ಕೆ ಆರಾಧನೆಯ ಕಾಲದಲ್ಲಿ ಕಟ್ಟಿಗೆಯನ್ನು ಪೂರೈಸಿ ಕೊಡುವರು.

ಯಾರಲ್ಲಿ ಯಾವ ತರದ ದೈವತಭಕುತಿ ಇರುವದೋ ಅದನ್ನು ಕಂಡು ಹಿಡಿಯುವದಾಗುವದಿಲ್ಲ. ಹಿಂದಕ್ಕೆ ಕದರಮಂಡಲಗಿಯಲ್ಲಿದ್ದ ಶ್ರೀನಿವಾಸ ದಾಸರೆಂಬವರು ಕೇವಲ ಸ್ವಪಚರಾಗಿ ಕಂಡು ಬಂದರು. ಅವರು ದೇವರನ್ನು ಮಾತನಾಡಿಸುವ ಶಕ್ತಿಯುಳ್ಳವರಾಗಿದ್ದಾರೆಂಬದನ್ನು ಅವರ ಚರಿತ್ರದಿಂದ ವಾಚಕರು ಅರಿತಿರಬಹುದು. ಕಗ್ಗ ಕುರಬನೂ-ವೇಶ್ಯಾಸಕ್ತನೂ ಆದ ಕನಕದಾಸನು ಅಪಾರವಾದ ದೈವತ ಭಕುತಿಯಿಂದ ಆಶ್ಚರ್ಯಕರವಾದ ಮಾಹಾತ್ಮ್ಯಗಳನ್ನು ತೋರಿಸಿ ಬಿಟ್ಟನು! ಆದ್ದರಿಂದಲೇ ಮಹಾತ್ಮರಾದ ಶಂಕರಾಚಾರ್ಯರು: —

'ಮೋಕ್ಷಕಾರಣಸಾಮುಗ್ರ್ಯಾಂ ಭಕ್ತಿರೇವ ಗರೀಯಸೀ |'

ಎಂಬದಾಗಿ ಹೇಳಿಕೊಂಡಿರುವರು.

---

## ೫ನೆಯ ಕಥೆ.

—(೦)—

ಮಂತ್ರಾಲಯದಲ್ಲಿ ಕೊಪ್ಪರಾಚಾರ್ಯರೆಂಬವರು ಘನ ಪಂಡಿತರು. ಮೇಲಾಗಿ ಮಹಾ ತಪಸ್ವಿಗಳೂ ಆಗಿದ್ದರು. ಇವರಿಗೆ ರಾಯರಲ್ಲಿ ಅತೀವ ಭಕ್ತಿ. ದಿನಾಲು ಹಸ್ತೋದಕವನ್ನು ಕೊಟ್ಟಲ್ಲದೆ ಊಟ ಮಾಡುತ್ತಿರಲಿಲ್ಲ. ಹೀಗೆಯೇ ನಡೆದಿತ್ತು. ಒಮ್ಮೆ ದೀಪಾವಳಿ ಪ್ರತಿಪದೆ. (ಬಲಿಪಾಡ್ಯ) ಪಂಡಿತ ಕೊಪ್ಪರಾಚಾರ್ಯರು ಅದೇಕೋ ಆ ಹೊತ್ತಿನ ದಿವಸ ಅನಾವೃತ ಶಾಕಪಾಕಾದಿಗಳನ್ನು ರಾಯರ ಹಸ್ತೋದಕಕ್ಕೆ ತಂದುಬಿಟ್ಟರು. ಅರ್ಚಕನು ನೋಡಿದನು ಆತನಿಗಿದು ಸರಿಬೀಳಲಿಲ್ಲ. 'ನೀವು ಅನಾವೃತದ ಪಲ್ಯೆ ಮೊದಲಾದವುಗಳನ್ನು ನೈವೇದ್ಯಕ್ಕೆ ತಂದಿರುವದರಿಂದ ಅವು ರಾಯರಿಗೆ ಅರ್ಪಣವಾಗಲಾರವು, ಎಂದು ಭಿಡೆಯಿಲ್ಲದೆ ನುಡಿದು ಬಿಟ್ಟನು. ಪಾಪ! ಕೊಪ್ಪರಾಚಾರ್ಯರ ಭಕ್ತಿಭಾವವು ಆತನಿಗೆ ಹೇಗೆ ಹೊಳೆಯಬೇಕು? ಆಚಾರ್ಯರು ಹಾಗೇ ಹಿಂದಿರುಗಿದರು. ಆ ಹೊತ್ತು ಅವರಿಗೆ ಊಟವೇ ಇಲ್ಲ. ರಾಯರಿಗೆ ಹಸ್ತೋದಕ ಕೊಡದೆ ಊಟ ಮಾಡಲಿಕ್ಕಿಲ್ಲೆಂದು

ಅವರ ನಿಯಮ. ಈ ನಿಯಮವು ಅಂಥ-ಇಂಥದಲ್ಲ. ಅದೊಂದು ರಾಮ ವಾಕ್ಯ; ಅಥವಾ ಭೀಷ್ಮ ಪ್ರತಿಜ್ಞೆ. ಹೀಗಾಗಿ ಕೊಪ್ಪರಾಚಾರ್ಯರು ಅಖಂಡ ಏಳು ದಿವಸಗಳ ವರೆಗೂ ನಿರಾಹಾರಿಗಳಾದರು. ಬಾಯಲ್ಲಿ ನೀರನ್ನೂ ಹಾಕಲಿಲ್ಲ. ರಾಯರ ಭಜನೆಯೊಂದು ನಿರಾತಂಕವಾಗಿ ನಡೆದಿತ್ತು. ರಾಯರಾದರೂ ಎಲ್ಲಿಯ ವರೆಗೆ ನೋಡುವರು? ಕೊಪ್ಪರಾಚಾರ್ಯರ ನಿಃಸೀಮವಾದ ಭಕ್ತಿಗೆ ಮೆಚ್ಚಿದರು. ಕೂಡಲೆ ಅರ್ಚಕನಿಗೆ ಸ್ವಪ್ನವಾಯಿತು:-"ಆಚಾರ್ಯರ ವಿಷಯದಲ್ಲಿ ವಿಧಿನಿಷೇಧಗಳನ್ನೆಣಿಸ ಕೂಡದು. ಅವರು ಭಕ್ತಿಭಾವದಿಂದ ಯಾವುದನ್ನು ಅರ್ಪಿಸುವರೋ ಅದನ್ನೇ ಅರ್ಪಣಮಾಡಿ ಬಿಡಬೇಕು, ಎಂದು" ಅರ್ಚಕನಿಗೆ ಎಚ್ಚರವಾಯಿತು. ಪ್ರಾತಃಕಾಲಕ್ಕೆ ಆಚಾರ್ಯರ ಸಂಗತಿಯನ್ನೆಲ್ಲ ತಿಳಿದುಕೊಂಡು ಗಡಗಡನೆ ನಡುಗಿ ಹೋದನು. ಆಗಲೇ ಆಚಾರ್ಯರ ಮನೆಗೆ ಹೋಗಿ:-- ಸ್ವಾಮಿ! ಪಾಮರನಾದ ನನ್ನಿಂದ ಮಹಾಪರಾಧವಾಗಿರುವದು. ಅದನ್ನು ಕ್ಷಮಿಸಿ ಈ ದೀನನನ್ನು ಉದ್ಧಾರ ಮಾಡಬೇಕೆಂಬದಾಗಿ ಅಡ್ಡಬಿದ್ದು ಬೇಡಿಕೊಂಡನು. ಕೊಪ್ಪರಾಚಾರ್ಯರಿಗೆ ಪರಮಾಶ್ಚರ್ಯವಾಯಿತು. ಅವರು ಇದಾವ ಸುದ್ದಿಯನ್ನೂ ಅರಿಯರು. ಬಳಿಕ ಅರ್ಚಕನು ಹೇಳಿದ್ದರ ಮೇಲಿಂದ ಎಲ್ಲ ಸಂಗತಿಯೂ ತಿಳಿಯ ಬಂತು. ರಾಯರು ಯಃಕಶ್ಚಿತನಾದ ನನ್ನ ಮೇಲೆ ಎಷ್ಟು ಅನುಗ್ರಹ ಮಾಡಿದರಲ್ಲಾ! ಎಂದು ಆಚಾರ್ಯರಿಗೆ ಆನಂದಾಶ್ರುಗಳು ಉದುರಿದವು ತತ್‍ಕ್ಷಣವೇ ಮೊದಲಿನಂತೆ ಅನಾವೃತ ಶಾಕಾದಿಗಳನ್ನೇ ಮಾಡಿಕೊಂಡು ಹೋಗಿ ಹಸ್ತೋದಕವನ್ನು ಕೊಟ್ಟು ಭೋಜನ ಮಾಡಿದರು.

ಅತಏವ ಜಗನ್ನಾಥದಾಸರು----

ಸಾದರದಲಿ ಹಸ್ತೋದಕ ಕೊಡಿಸಲು ನಿ | ಷೇಧಗೆಯ್ಯದೆ
ನಿವೇದಿಪೆ ಹರಿಗೆ ||

ರಾಘವೇಂದ್ರ ರಾಜಿತ ಗುಣಸಾಂದ್ರಾ||

ಎಂಬದಾಗಿ ಹೇಳಿಕೊಂಡಿರುವರು.

ಭಕ್ತರ ಹೃದಯವನ್ನು ಭಕ್ತಪರಿಪಾಲಕನಾದ ಪರಮಾತ್ಮನೊಬ್ಬನು ಬಲ್ಲನೇ ಹೊರತು ಇತರರು ತಿಳಿಯಲಾರರು. ಅಂತೆಯೇ ಶ್ರೀಮದಾಚಾರ್ಯರು:—

ಧರ್ಮೋಽಭವತ್ಯಧರ್ಮೋಽಪಿ ಕೃತೋಭಕ್ತೈಸ್ತವಾಚ್ಯುತ ||
ಪಾಪಂಭವತಿಧರ್ಮೋಽಪಿ ಯೋನಭಕ್ತೈಃಕೃತೋಹರೇಃ ||

[ಸ್ವಾಮೀ! ನಿನ್ನ ಭಕ್ತರಾದವರು ಮಾಡಿದ ಅಧರ್ಮವೂಕೂಡ ಧರ್ಮವೆನಿಸುವದು. (ಪುಣ್ಯ) ಭಕ್ತರಲ್ಲದವರು ಧರ್ಮವನ್ನೇ ಮಾಡಿದಾಗ್ಯಾದರೂ ಅದು ಪಾಪಕ್ಕೆ ಕಾರಣಾಗುವದು.]
ಎಂಬದಾಗಿ ನುಡಿದಿರುವರು

ಮಹಾತ್ಮರಾದ ಜಗನ್ನಾಥದಾಸರೂಕೂಡ ಈ ವಿಷಯದಲ್ಲಿ ಹೀಗೆ ಉಕ್ಕಣಿಸಿದ್ದಾರೆ:—

"ಔಪಚಾರಿಕವಲ್ಲ ಸುಜನರ | ಪಾಪ ಕರ್ಮವು ಪುಣ್ಯವೆನಿಪವು |
ಪಾಪಿಗಳ ಸತ್ಪುಣ್ಯಕರ್ಮವು ಪಾಪವೆನಿಸುವವು" ||

(ಹರಿಕಥಾಮೃತಸಾರ)

---

## ೬ನೆಯ ಕಥೆ.

—( ೦ )—

ರಾಯರು ವೃಂದಾವನಸ್ಥರಾದ ಸುಮಾರು ೧೪೦ ವರ್ಷಗಳ ಮೇಲೆ ಅಂದರೆ ಸನ್ ೧೮೧೧ನೆಯ ಇಸ್ವಿಯಲ್ಲಿ ಹಿಂದುಸ್ಥಾನವೆಲ್ಲ ಬ್ರಿಟಿಶ ಸಾಮ್ರಾಜ್ಯಕ್ಕೆ ಸೇರಿರಲು ಸರಕಾರದವರು ಇಲ್ಲಿಯ ಇನಾಮುಗಳೆಲ್ಲ ನಿಜವಾಗಿ ನಡೆಯತಕ್ಕವೋ ಸರಕಾರಕ್ಕೆ ಸೇರತಕ್ಕವೋ ಎಂಬ ವಿಚಾರಣೆಗಾಗಿ ಒಂದು ಇನಾಮು ಕಮಿಶನ್ನವನ್ನು ನಿಯಮಿಸಿದರು. ಅದಕ್ಕೆ ಮುಖ್ಯಸ್ಥರಾಗಿ 'ಸರ್ ಥಾಮಸ್ ಮನ್ರೋ' ಎಂಬ ಸಾಹೇಬರು ನಿಯಮಿಸಲ್ಪಟ್ಟರು. ಆ ಸಾಹೇಬರು ಒಮ್ಮೆ ಮಂತ್ರಾಲಯಕ್ಕೆ ಬಂದು ರಾಯರಿಗೆ ಇದ್ದ ಇನಾಮುಗಳ ವಿಚಾರಣೆಯಲ್ಲಿ ತೊಡಗಿದರು. ರಾಯರು ಅಗಾಧ ಮಹಿಮಾಶಾಲಿಗಳೂ ಮಹಾ ತಪಸ್ವಿಗಳೂ ಅತ್ಯಂತ ಭಗವದ್ಭಕ್ತರೂ ಆದ್ದರಿಂದ ಇಂಥ ಮಹಾನುಭಾವರ ಇನಾಮುಗಳೆಲ್ಲ ಕಾಯಂ ಆಗತಕ್ಕವೇ ಹೊರ್ತು ಸರಕಾರಕ್ಕೆ ಸೇರತಕ್ಕವಲ್ಲವೆಂದು ಬಹುಜನ ಸಮುದಾಯವು ಕೂಡಿ ಅರಿಕೆ ಮಾಡಿಕೊಂಡಿತು ಅದಕ್ಕೆ ಸಾಹೇಬರು:—ಬರೀ ನಿಮ್ಮ ಮಾತುಗಳಿಗೆ ನಾನು ಲಕ್ಷ್ಯಸುವವನಲ್ಲ. ಸ್ವಾಮಿಗಳು ಅಂಥಾ ಮಹಿಮಾಶಾಲಿಗಳಾಗಿದ್ದರೆ ನನಗೇ ಪ್ರತ್ಯಕ್ಷ ಒಂದೆರಡು ನಿದರ್ಶನಗಳಾಗಬೇಕು. ಅಂದರೆ ಮಾತ್ರ

ಇನಾಮುಗಳನ್ನು ನಡಿಸೇನು ಇಲ್ಲದೆ ಹೋದ ಪಕ್ಷದಲ್ಲಿ ಯಾರ ಮಾತೂ ಕೇಳುವವನಲ್ಲ, ಎಂದು ಗಟ್ಟಿಮುಟ್ಟಿಯಾಗಿ ಹೇಳಿಬಿಟ್ಟರು ಆಗೆ ಯಾರಿಗೂ ಮಾತಾಡಲಿಕ್ಕೆ ಬಾಯಿ ಬರದಂತಾಯಿತು ಆದರೂ ಜನರು ಹೀಗೆ ಹೇಳಿದರು:—ನೀವಂದಂತೆಯೇ ಆಗಲಿ. ನಾವು ೪೧ ದಿವಸ ವೃಂದಾವನದ ಅಭಿಷೇಕಕ್ಕೆ ಹಚ್ಚುವೆವು ಅಷ್ಟರಲ್ಲಿ ನಿದರ್ಶನಗಳು ತೋರಿಬಂದದ್ದೇ ಆದರೆ ಮಾಡಬಹುದು; ಇಲ್ಲವಾದರೆ ಬಿಟ್ಟುಬಿಡಬಹುದು. ಸಾಹೇಬರು ಒಪ್ಪಿಕೊಂಡರು; ಇತ್ತ ಬ್ರಾಹ್ಮಣರು ರಾಯರಿಗೆ ಪ್ರಾರ್ಥನೆ ಮಾಡಿಕೊಂಡು ಅಭಿಷೇಕಕ್ಕೆ ಪ್ರಾರಂಭ ಮಾಡಿದರು. ಒಂದು ದಿನವಾಯಿತು, ಎರಡು ದಿನಗಳಾದವು. ಹೀಗೆಯೇ ನಾಲ್ವತ್ತು ದಿನಗಳೂ ಕಳೆದವು. ವರವಿಲ್ಲ; ಶಾಪವಿಲ್ಲವೆಂಬಂತಾಯಿತು. ಜನರು ನಿರಾಶರಾದರು. ಮನ್ರೋ ಧೊರೆಯಂತೂ ಆಸ್ತಿಕರಾದ ಹಿಂದುಗಳನ್ನು ಮರುಳರೆಂದು ತಿರಸ್ಕರಿಸಹತ್ತಿದನು. ಜನರು ಬಾಯಿ ಬಿಡ ಹತ್ತಿದರು. ಇನ್ನೇನು? ನಾಳೆಯೊಂದೇ ದಿವಸದ ಅವಧಿಯುಳಿದಿರುವದು. ಸಾಹೇಬರು ಬಂದು ಕೇಳಿದರೆ ನಾವೇನನ್ನು ಹೇಳೋಣವೆಂಬ ಯೋಚನೆಯಲ್ಲಿಯೇ ಬಳಲಹತ್ತಿದರು.

ಶರಣಾಗತ ಕಲ್ಪತರುವೆಂದು ಹೊಗಳಿಸಿಕೊಂಡ ರಾಯರು ಇನ್ನು ಮೇಲೆ ಹೇಗೆ ತಡೆದಾರು? ತಡೆಯಲಿಲ್ಲ. ಮರುದಿವಸ ಮನ್ರೋಸಾಹೇಬರು ಹಿಂದೂ ಜನರ ಇನಾಮುಗಳನ್ನೆಲ್ಲ ಸರಕಾರಕ್ಕೆ ಸೇರಿಸುವೆನೆಂಬ ಸಂತೋಷದಿಂದ ಮಠದ ಹತ್ತರ ಬರಲು:—ಒಮ್ಮಿಂದೊಮ್ಮೆ ವೃಂದಾವನದೆದುರಿಗೆ ಒಬ್ಬ ಸಂನ್ಯಾಸಿಗಳು ಜಪ ಮಾಡುತ್ತ ಕುಳಿತಿರುವದು ಅವರ ದೃಷ್ಟಿಗೆ ಬಿತ್ತು. ಈಗ ನಾಲ್ವತ್ತು ದಿವಸದಿಂದಲೂ ಇಲ್ಲದ ಇವರು ಯಾರಾಗಿರಬಹುದೆಂದು ಯೋಚಿಸುತ್ತ ಅಲ್ಲಿದ್ದ ಬ್ರಾಹ್ಮಣರನ್ನು ಕೇಳಿದರು ಬ್ರಾಹ್ಮಣರ ಕಣ್ಣಿಗಾದರೋ ಏನೂ ಕಾಣಿಸುತ್ತಿರಲಿಲ್ಲ. ಆದರಿಂದಲವರು ಇಲ್ಲಿ ಯಾರೂ ಇಲ್ಲವೆಂದು ಹೇಳಿದರು. ಸಾಹೇಬರಿಗೆ ಆಗ ಸ್ವಲ್ಪ ವಿಸ್ಮಯವಾಯಿತು. ವೃಂದಾವನದ ಹತ್ತರ ಒಬ್ಬರು ಜಪಮಾಡುತ್ತ ಕುಳಿತಿರುವರು ನಿಮಗೆ ಕಾಣುವದಿಲ್ಲವೇ? ಎಂದು ಕೇಳಿದರು. ಈ ಮಾತಿಗೆ ಬ್ರಾಹ್ಮಣರು ಏನು ಉತ್ತರ ಕೊಡಬೇಕು? ಕಾಣದೆ ಕಾಣಿಸುವದೆಂದು ಹೇಳಬಹುದೇ? ಇನಾಮು ಹೋಗುವದೆಂಬ ಆಶೆಗೆ ಒಳ

ಗಾಗಿ ಏನೋ ಸುಳ್ಳೊಂದು ಸೊಟ್ಟೊಂದು ನುಡಿಯುತಕ್ಕವರು ಆಗಿನ ಕಾಲದ ಬ್ರಾಹ್ಮಣರಲ್ಲ. ಇನ್ನೂ ಆಗ ಜನರಲ್ಲಿ ಸ್ವಾಭಿಮಾನವು ತುಂಬಿತ್ತು. ಈ ಕಾಲದ ನಮ್ಮಂತೆ ಕೇವಲ ಅಭಿಮಾನಶೂನ್ಯರಾಗಿರಲಿಲ್ಲ. ಸರಕಾರದ ಚಾಕರಿಯಿಂದಲೇ ತಮ್ಮ ಜೀವನಸರ್ವಸ್ವವೂ ನಡೆಯುವದೆಂದು ನಂಬಿ ಲಾಂಗೂಲಚಾಲನ ಮಾಡುತ್ತ ಈಗಿನಂತೆ ನಿರ್ವೀರ್ಯರೂ ನಿಸ್ತೇಜರೂ ಆಗಿರಲಿಲ್ಲ. ಅಂದಮೇಲೆ ಅವರು ಸುಳ್ಳು ಹೇಳಲು ಕಾರಣವೇನು? ಯಥಾರ್ಥವಾದುದನ್ನೇ ನುಡಿದರು. ಇದರಿಂದ ಮನ್ರೋಧೊರೆಗೆ ಮತ್ತಿಷ್ಟು ನಂಬಿಗೆ ಹುಟ್ಟಿತು. ಆತನು ಸಂನ್ಯಾಸಿಗಳ ಆಕಾರ, ರೂಪ, ಲಕ್ಷಣಗಳನ್ನೆಲ್ಲ ಒಂದೊಂದಾಗಿ ಹೇಳಹತ್ತಿದನು. ಕೂಡಲೆ ಬ್ರಾಹ್ಮಣರಿಗೆ ತಿಳಿದು ಹೋಯಿತು. ನಮ್ಮೆಲ್ಲರ ಮೇಲೆ ಅನುಗ್ರಹಮಾಡಿ, ರಾಯರೇ ಬಂದು ಕುಳಿತಿರುವರಲ್ಲಾ! ಎಂದಂದುಕೊಂಡು ಅವರೇ ಸ್ವಾಮಿಗಳವರೆಂದು ಬಿನ್ನವಿಸಿದರು. ಆಗ ಸಾಹೇಬರು ಟೊಪ್ಪಿಗೆ ತೆಗೆದು ಸಲಾಂ ಮಾಡಿ ಹಿಂದುಸ್ಥಾನೀ ಭಾಷೆಯಿಂದ ಮಾತನಾಡಿಸಲು, ರಾಯರು ಸಂಜ್ಞೆಯಿಂದ ಏನೋ ತಿಳಿಸಿ ವೃಂದಾವನದಲ್ಲಿ ಅಗೃಶ್ಯರಾದರು. ಧೊರೆಯು ಪುನಃ ಸಲಾಂ ಮಾಡಿ ಸ್ವಾಮಿಗಳು ಅದೃಶ್ಯರಾದದ್ದನ್ನು ಬ್ರಾಹ್ಮಣರಿಗೆ ಹೇಳಿದನು.

ಈಗ ಸಾಹೇಬನಿಗೆ ಬ್ರಾಹ್ಮಣರ ಮಾತಿನಲ್ಲಿ ಬಹಳ ವಿಶ್ವಾಸವು. ಸ್ವಾಮಿಗಳಲ್ಲಿ ಆಸ್ತಿಕ್ಯ ಬುದ್ಧಿಯೂ ಉಂಟಾಯಿತು ಅರ್ಚಕರನ್ನು ಕರೆದು:—ಇದೊಂದು ನನಗೆ ಪ್ರತ್ಯಕ್ಷ ನಿದರ್ಶನವಾದಂತಾಯಿತು. ಇನ್ನು ನನಗೆ ಮದ್ರಾಸದ ಗವ್ಹರ್ನರ ಪದವಿಯು ದೊರೆಯಬೇಕೆಂಬುದೊಂದು ಹಾಗೂ ನನ್ನ ಹೆಂಡತಿಯು ಗಂಡುಕೂಸನ್ನು ಹಡೆಯಬೇಕೆಂಬುದೊಂದು ಹೀಗೆ ಎರಡು ಅಪೇಕ್ಷೆಗಳಿರುವವು. ಅವೆರಡು ಪೂರೈಸುವಂತೆ ರಾಯರಲ್ಲಿ ಪ್ರಾರ್ಥನೆಮಾಡಿಕೊಳ್ಳಿರೆಂದು ಹೇಳಿದನು. ಅರ್ಚಕರಿಗೆ ಅತ್ಯಾನಂದವಾಯಿತು. ಅದರಂತೆ ರಾಯರಿಗೆ ಪ್ರಾರ್ಥನೆಮಾಡಿದ್ದೂ ಆಯಿತು.

ಕಲೌ ಯುಗೆ ಕಲ್ಪತರುಪ್ರಭಾವ-।
ಉದ್ಧಾರಕತ್ವೇ ಕಲಿತಾಗಸೋಽಪಿ ॥
ಜೀಯಾಚ್ಚಿರಂ ವಿಷ್ಣುಪರಾಗ್ರಗಣ್ಯಃ ।
ಶ್ರೀರಾಘವೇಂದ್ರೋಗುರುರಾಡ್ವದಾರಃ॥

(ರಾಘವೇಂದ್ರತಂತ್ರ)

ಎಂಬಂತೆ ರಾಯರೆಂದರೆ ಭಕ್ತರ ಕಾಮಧೇನು-ಕಲ್ಪತರು-ಚಿಂತಾಮಣಿಗಳು. ಇಂಥ ಮಹಿಮಾಶಾಲಿಗಳಲ್ಲಿ ಕುಚ್ಛಿತಗಳಾದ ನಮ್ಮ ಬಯಕೆಗಳು ನೆರವೇರುವದೇನಾಶ್ಚರ್ಯ! ಮುಂದೆ ತುಸು ದಿವಸದಲ್ಲಿಯೇ ಸಾಹೇಬನ ಹೆಂಡತಿಯು ಗಂಡುಕೂಸು ಹಡೆದಳೆಂದು ಇಂಗ್ಲೆಂಡದಿಂದ ತಾರಿನ ವರ್ತಮಾನ ಬಂತು! ಮತ್ತು ಕಂಪನಿ ಸರಕಾರದವರಿಂದ ಮದ್ರಾಸದ ಗವ್ಹರ್ನರ ಪದವಿಯೂ ದೊರೆಯಿತು. ಈ ಪ್ರಕಾರ ಒಂದಲ್ಲ, ಎರಡಲ್ಲ; ಮೂರು ನಿದರ್ಶನಗಳು ತೋರಿಬಂದದ್ದರಿಂದ ಸಾಹೇಬನು ಆಸ್ತಿಕನಾಗಿ ರಾಯರ ಇನಾಮುಗಳನ್ನೆಲ್ಲ ಕಾಯಂ ಮಾಡಿದನಂತೆ.

ಇದೇಮನ್ರೋಸಾಹೇಬನು ಗುತ್ತಿಯಲ್ಲಿ ಒಂದು ದೊಡ್ಡ ಅನ್ನಛತ್ರವನ್ನೂ ಪುಷ್ಕರಣಿಯನ್ನೂ ಕಟ್ಟಿಸಿರುವನು.

ತಿರುಪತಿಯ ಶ್ರೀವೆಂಕಟೇಶ ದೇವರಿಗೆ ನೈವೇದ್ಯಕ್ಕೆಂದು ಒಂದು ಗ್ರಾಮವನ್ನು ಇನಾಮಾಗಿ ಹಾಕಿಕೊಟ್ಟಿರುವನು.

ಈ ವಿಷಯವೆಲ್ಲ ಬಲ್ಲಾರೀ ಜಿಲ್ಲೆಯ ಗ್ಯಾಝೀಟಿಯರದಲ್ಲಿ ಪ್ರಸಿದ್ಧವಾಗಿರುವದು.

---



# ಚತುರ್ಥ ಗುಚ್ಛ.

ವೇದಶಾಸ್ತ್ರಪುರಾಣಪುಣ್ಯದ | ಹಾದಿಯನು ನಾನರಿಯೆ ತರ್ಕದ |
ವಾದದಲಿ ಗುರು-ಹಿರಿಯರೆನ್ನದ ಮೂಢಮತಿಯೆನಗೆ ||
ಆದಿಮೂರುತಿ ನೀನು ನೆರೆ ಕರು| ಣೋದಯನೆ ಹೃದಯಾಂಗಣದಿಜ್ಞಾ
ನೋದಯವನೆನಗಿತ್ತು ರಕ್ಷಿಸು ನಮ್ಮನನವರತ ||

(ಭಕ್ತಿಸಾರ)

---

ಈ ಭಾಗದಲ್ಲಿ ಶ್ರೀಗಳವರ ಕಾಲವಿಚಾರ-ಗ್ರಂಥನಿರ್ಮಾಣ ಮೊದಲಾದ ವಿಷಯಗಳು ಯಥಾಮತಿ ಹೇಳಲ್ಪಡುವವು.

## ೧ ಕಾಲವಿಚಾರ—

ಕಾಲವಿಚಾರಮಾಡುವದು ಎರಡು ಬಗೆಯಾಗಿರುವದು; ಅಂದರೆ ಪರಂಪರಾಗತವಾಗಿ ನಡೆದು ಬಂದ ಮಠೀಯ ಹೀಳಿಗೆಯ ಮೇಲಿಂದ ತಿಳಿದುಕೊಳ್ಳುವದೊಂದು. ಶಿಲಾಶಾಸನ-ತಾಮ್ರಪಟ-ಗ್ರಂಥಗಳು ಇವುಗಳ ಮೇಲಿಂದ ಸಿದ್ಧಿಮಾಡುವದು ಮತ್ತೊಂದು. ಇದರಲ್ಲಿ ಮೊದಲನೇದನ್ನು ಕೇವಲ ಗುರುಭಕ್ತಿಯುಳ್ಳವರೂ-ಸ್ವಮತೀಯರೂ ಮಾತ್ರ ಒಪ್ಪುವರೇ ಹೊರತು, ಅನ್ಯಮತೀಯರೂ ಸ್ವತಂತ್ರವಿಚಾರದವರೂ ಅದಕ್ಕೆ ಒಡಂಬಡಲಾರರು. ಅದ್ದರಿಂದ ಸರ್ವಸಮ್ಮತವಾಗುವಂತೆ ಇಲ್ಲಿ ಎರಡನೇ ಮಾರ್ಗವನ್ನೇ ನಾವು ಕೈಕೊಂಡಿರುವೆವು.

ಶ್ರೀವ್ಯಾಸರಾಯರೇ ರಾಘವೇಂದ್ರಸ್ವಾಮಿಗಳಾಗಿ ಹುಟ್ಟಿದರೆಂಬದನ್ನು ಹಿಂದೆಯೇ ಹೇಳಿದ್ದೇವೆ.

"ಪ್ರಲ್ಹಾದರಾಜಃ ಪ್ರಥಮೋ ವ್ಯಾಸರಾಜೋ ದ್ವಿತೀಯಕಃ |
ರಾಘವೇಂದ್ರಸ್ತೃತೀಯಸ್ತು ಸತ್ಯಸಂಧಶ್ಚತುರ್ಥಕಃ||"

ಎಂಬುದಾದರೂ ಇದನ್ನೇ ಹೇಳುವದು. ಈ ವ್ಯಾಸರಾಯರು ವಿಜಯನಗರದ ಕೃಷ್ಣದೇವರಾಯ--(೧೫೦೯--೧೫೨೯) ಅಚ್ಯುತದೇವರಾಯರ (೧೫೩೦--೧೫೪೨) ಕಾಲದಲ್ಲಿದ್ದರೆಂದೂ ಅಚ್ಯುತರಾಯರ ಕಾಲದಲ್ಲಿಯೇ

ಇವರು (೧೫೩೯ ರಲ್ಲಿ) ಮುಕ್ತರಾದರೆಂದೂ ಹೇಳುವದಕ್ಕೆ—

೧ ಪುಳಂಬಾಕಂಗ್ರಾಮದ ದಾನಶಾಸನಶಾ. ಶ. ೧೪೩೩ (೧೫೧೧)

೨ ತಿರುಪತಿಯಲ್ಲಿರುವ ಮಠದ ದಾನದ ಶಿಲಾಶಾಸನ ಶಾ. ೧೪೪೫ (೧೫೨೩)

೩ ಚನ್ನಪಟ್ಟಣತಾಲೂಕ ಬ್ರಹ್ಮಣ್ಯಪುರದ ದಾನದ ತಾಮ್ರಶಾಸನ ಶಾ. ೧೪೪೫ (೧೫೨೩)

೪ ಹಾನಗಲ್ಲ ತಾಲೂಕ ಗೌರಾಪುರದ ಗ್ರಾಮದ ತಾಮ್ರಶಾಸನ ಶಾ. ಶ. ೧೪೪೯ (೧೫೨೭)

೫ ಕುಂದಾಪುರಗ್ರಾಮದ ದಾನದ ಶಿಲಾಶಾಸನ ಶಾ. ಶ. ೧೪೪೭ (೧೫೨೫)

೬ ಕಂದಕೂರು ವ್ಯಾಸಸಮುದ್ರದ ಕೆಳಗಿನ ಜಮೀನು ದಾನದ ತಾಮ್ರಶಾಸನ ಶಾ. ಶ. ೧೪೪೭ (೧೫೨೫)

೭ ಅಚ್ಯುತರಾಯರು ಶ್ರೀವ್ಯಾಸರಾಯರಿಂದ ವಿಠ್ಠಲದೇವರ ಗುಡಿಯಲ್ಲಿ ದೇವರನ್ನು ಪ್ರತಿಷ್ಠೆಮಾಡಿಸಿದ ಶಿಲಾಶಾಸನಗಳು (೧೫೩೨)

ಇವೇ ಮುಂತಾದ ತಾಮ್ರ-ಶಿಲಾಶಾಶನಗಳು ಬಲವಾದ ಪ್ರಮಾಣಗಳಾಗಿವೆ. ಇವುಗಳನ್ನೆಲ್ಲ ಶ್ರೀವ್ಯಾಸರಾಯರ ಚರಿತ್ರೆಯಲ್ಲಿ ವಿಸ್ತಾರವಾಗಿ ಬರೆಯುವೆವು.

ಈ ವ್ಯಾಸರಾಯರಿಗೆ ಇವರ ತಮ್ಮನ ಮಕ್ಕಳೇ ಆದ ಶ್ರೀವಿಜಯೀಂದ್ರತೀರ್ಥರೆಂಬವರು † ಶಿಷ್ಯರಾಗಿದ್ದರು. ಇವರ ಪಾಂಡಿತ್ಯಕ್ಕೆ ಮೆಚ್ಚಿ ರಾಮರಾಜನು ರತ್ನಾಭಿಷೇಕವನ್ನು ಮಾಡಿಸಿ ಅನರ್ಘ್ಯವಾದ ಮುತ್ತು-ರತ್ನಗಳನ್ನೂ ಅಗ್ರಹಾರಾದಿಗಳನ್ನೂ ದಾನಕೊಟ್ಟನಂತೆ

ವಿದ್ವದ್ವರೋಽಸ್ಮಾದ್ವಿಜಯೀಂದ್ರಯೋಗೀ ।
ವಿದ್ಯಾಸು ಸ್ವಾದ್ಯಸ್ವತುಲಪ್ರಭಾವಃ ॥

† ಇವರು ಮಂತ್ರಾಲಯ ಮಠದಲ್ಲಿ ಅತ್ಯಂತ ಪ್ರಸಿದ್ಧರಾದ ಸ್ವಾಮಿಗಳು.

. ಚತುರಧಿಕಶತಗ್ರಂಥರತ್ನಪ್ರಣೇತಾ ಎಂಬದಾಗಿ ೧೦೪ ಗ್ರಂಥಗಳನ್ನು ಬರೆದ ಮಹಾತ್ಮರು. (ಇದರಲ್ಲಿ ೪೩ ಮಾತ್ರವೇ ಈಗ ಸಿಕ್ಕಿರುವವು) ಚತುಃಷಷ್ಟಿಕಲೆಗಳಲ್ಲಿಯೂ ಪಂಡಿತರಾಗಿದ್ದರು.

ರತ್ನಾಭಿಷೇಕಂ ಕಿಲ ರಾಮರಾಜಾತ್ |
ಪ್ರಾಪ್ಯಾಗ್ರ್ಯಲಕ್ಷ್ಮೀನ ಕೃತಾಗ್ರಹಾರಾನ್ ||
(ರಾಘವೇಂದ್ರವಿಜಯ ಸರ್ಗ ೨-ಶ್ಲೋ ೨೧)

ಇದರಿಂದ ತಿಳಿದು ಬರುತ್ತದೆ

ಈ ರಾಮರಾಜನು (೧೫೪೩-೧೫೬೫) ತಾಳೀಕೋಟಿಯ ಕಾಳಗ ವನ್ನು ನಡಿಸಿದ ವಿಜಯನಗರದ ಧೊರೆಯೆಂದು ಬೇರೆ ಹೇಳಬೇಕಾಗಿಲ್ಲ

ಇದು ಅಲ್ಲದೆ, ತಂಜಾವರದ ಶಿವಪ್ಪನಾಯಕನು ೧೫೭೬ರಲ್ಲಿ 'ಅರಿ ವಿಲಿಮಂಗಲಂ' ಎಂಬ ಗ್ರಾಮವನ್ನು ಈ ಸ್ವಾಮಿಗಳಿಗೆ ದಾನಕೊಟ್ಟಂತೆ ತಿಳಿದು ಬರುವದು.

ವಿಜಯೀಂದ್ರರ ತರುವಾಯದಲ್ಲಿಯೇ ಶ್ರೀಸುಧೀಂದ್ರಸ್ವಾಮಿಗಳು ಸಂಸ್ಥಾನಕ್ಕೆ ಬಂದರು. ಇವರ ದಿಗ್ವಿಜಯಕಾಲದಲ್ಲಿ ವಿಜಯನಗರದ ಅರಸರ ವಂಶಜರಾದ ವೆಂಕಟಪತಿರಾಯರು (೧೫೮೬-೧೬೧೪) ಆಳುತ್ತಿದ್ದರೆಂಬಂಶವು—

ಸಾರಾಮಚಂದ್ರಪ್ರತಿಮಾಜಯೀಂದ್ರಾ |
ತ್ಸುಧೀಂದ್ರಯೋಗೀಂದ್ರಮಗಾತ್ಕ್ರಮೇಣ ||
ವಿಸ್ತೀರ್ಣಕೀರ್ತಿರ್ವಿಬಭಾವವನ್ಯಾಂ |
ವಿಖ್ಯಾತವಿದ್ವಜ್ಜನವಂದ್ಯಪಾದಃ ||
ಪವಿತ್ರಿತಾಮೇಷಧರಾಂವಿತನ್ವನ್ |
ಸಂಚಾರತೋದಿಗ್ವಿಜಯಾಪದೇಶಾತ್ ||
ಶ್ರೀವೆಂಕಟಕ್ಷ್ಮಾಪರಿಷತ್ಸಮಕ್ಷ |
ವಾದೇನವಿದ್ವೇಷಿಬುಧಾನ್ವಿಜಗ್ಯೇ ||
(ರಾ. ವಿಜಯ ಸರ್ಗ-೨-೨೩-೨೪)

ಇದರಿಂದ ವ್ಯಕ್ತವಾಗುತ್ತಿರುವದು.

ಮತ್ತು ಇದೇ ಸುಧೀಂದ್ರರಿಗೆ ರಘುನಾಥ ಭೂಪಾಲಕನು ಕನಕಾಭಿಷೇಕ ಮಾಡಿಸಿದನೆಂದು

ಅತುಲವಿವಿಧವಿದ್ವನ್ಮಂಡಲೀಲಾಲ್ಯಮಾನಃ|
ಪ್ರಭುಮಣಿರಘುನಾಥಃಪ್ರೌಢಭೂಪಾಲಕೇನ ||

ನಿಹಿತನಿಖಿಲವಿದ್ವಸ್ಮಾಲಿಪಾದಃಸುಧೀಂದ್ರಃ ।
ಪರಜನದುರವಾಪಂಪ್ರಾಪಹೇಮಾಭಿಷೇಕಂ ॥
(ರಾ ವಿಜಯ ಸರ್ಗ ೨-೫೩)

ಎಂಬುದರಿಂದ ತಿಳಿಯ ಬರುವದು ಈ ರಘುನಾಥ ಭೂಪಾಲನು ತಂಜಾವರದ ಧೊರೆಯೆಂದೂ ಅನೇಕ ಪಂಡಿತರಿಗೆ ಆಶ್ರಯದಾತನಾಗಿದ್ದನೆಂದೂ ಹಿಂದೆಯೇ ಹೇಳಿದ್ದೇವೆ ಅದನ್ನೇ ಇಲ್ಲಿ ಇನ್ನಿಷ್ಟು ವಿಸ್ತಾರವಾಗಿ ಬರೆಯುವೆವು. †

ವಿಜಯನಗರದ ಅಚ್ಯುತದೇವರಾಯರಲ್ಲಿ ಗೋವಿಂದ ದೀಕ್ಷಿತರೆಂಬ ಮಹಾತ್ಮರೊಬ್ಬರಿದ್ದರು. ಅವರ ಮನೆಯಲ್ಲಿ ಚವ್ವನೆಂಬ ಹುಡುಗನು ದನಕಾಯುತ್ತಿದ್ದನು ದೀಕ್ಷಿತರು ಚವ್ವನ ರಾಜಲಕ್ಷಣಗಳನ್ನು ನೋಡಿ ಚಿರಗಾಗಿ ಮುಂದೆ ಅವನನ್ನು ಅರಸನಲ್ಲಿ ತಾಂಬೂಲವಾಹಿನೀ ಕಾರ್ಯಕ್ಕೆ ನಿಯಮಿಸಿದರು. ಅಚ್ಯುತದೇವರಾಯರಿಗೆ ಮಕ್ಕಳಿರಲಿಲ್ಲ. ತಮ್ಮ ಹೆಂಡತಿಯ ತಂಗಿಯಾದ 'ಮೂರ್ತೀದೇವಿ'ಯನ್ನೇ ಮಗಳಂತೆ ಭಾವಿಸಿ ಬಹಳ ಪ್ರೀತಿಮಾಡುತ್ತಿದ್ದರು. ದೈವವಶಾತ್ತಾಗಿ ಮೂರ್ತೀದೇವಿಯನ್ನು ದೀಕ್ಷಿತರ ಅನುಮತಿಯಂತೆ ಚವ್ವನಿಗೆ ಕೊಟ್ಟುಬಿಟ್ಟರು; ಹಾಗೂ ಆತನಿಗೆ ತಂಜಾವೂರಿನ ದೊರೆತನವನ್ನು ಕೊಟ್ಟು ಗೋವಿಂದದೀಕ್ಷಿತರನ್ನೇ ಮಂತ್ರಿಗಳನ್ನಾಗಿ ಮಾಡಿ ಅಲ್ಲಿಗೆ ಕಳುಹಿಕೊಟ್ಟರು. ಅಂದಿನಿಂದ ಚವ್ವನು-ಚವ್ವಪ್ಪನಾಯಕನೆಂಬ ಹೆಸರಿನಿಂದ ಪ್ರಸಿದ್ಧನಾದನು.

ಈ ಚವ್ವಪ್ಪನಾಯಕನಿಗೆ ಅಚ್ಯುತನಾಯಕನೆಂಬವನು ಮಗನಾದನು. ಅಚ್ಯುತನಾಯಕನ ಮಗನೇ ಮೇಲೆ ಹೇಳಿದ ರಘುನಾಥ ಭೂಪಾಲನು

ಚವ್ವನಾಯಕನು:—(೧೫೪೦-೧೫೭೨)
ಅಚ್ಯುತನಾಯಕನು:—೧೫೭೨-೧೬೧೪)
ರಘುನಾಥನಾಯಕನು ತಂಜಾವೂರಿನ ದೊರೆತನವನ್ನು ಸ್ವೀಕರಿಸಿದ್ದು

† ಈ ವಿಷಯವನ್ನು 'ತಮಿಳನಾಡಿನ ಕರ್ನಾಟಕ ಮಂತ್ರಿ' ಎಂಬ ಐತಿಹಾಸಿಕ ಗ್ರಂಥದಿಂದ ಉದ್ಧರಿಸಿ ಬರೆದಿರುವೆವು. ರಸಿಕ ವಾಚಕರು ಒಮ್ಮೆಯಾದರೂ ಈ ಗ್ರಂಥವನ್ನು ಆಗತವಾಗಿ ಓದಬೇಕೆಂದು ಹೇಳುವೆವು. ಇದು ಚಾಮರಾಜ ನಗರದ ಕಾದಂಬರೀ ಸಂಗ್ರಹ ಮಾಪತ್ರಿಕಾ ಸಂಪಾದಕರಲ್ಲಿ ೧ ರೂಪಾಯಿ ಬೆಲೆಗೆದೊರೆಯುವದು.

೧೬೧೪ರಲ್ಲಿ. ಅಂದಮೇಲೆ ಸುಧೀಂದ್ರರಿಗೆ ಕನಕಾಭಿಷೇಕವಾದದ್ದು೧೬೧೪ರ ತರುವಾಯದಲ್ಲಿಯೇ ಎಂಬುದು ಸ್ಪಷ್ಟವಾಗುವದು,

ಇದಲ್ಲದೆ ಸುಧೀಂದ್ರರಿಗೆ ಕರ್ನಾಟಕ ಭೂಪತಿಯೂ ರತ್ನಾಭಿಷೇಕ ಮಾಡಿಸಿದನೆಂದು—

ವ್ಯಾಧೂತಾವದ್ಯಹೃದ್ಯಾಮಿತಕೃತಿರಚನಾ ಚಾರುಚಾತುರ್ಯಹೃಷ್ಯತ್ |
ಕರ್ಣಾಟಕ್ಷ್ಮೋಣಿಪಾಲಪ್ರತಿಪದರಚಿತಾನೇಕರತ್ನಾಭಿಷೇಕಃ ||
ಪತ್ರೀಶಾರೂಢಲಕ್ಷ್ಮೀಪತಿಪದನಲಿನೋದಗ್ರಲೋಲಂಬಲೀಲೋ |
ವಿಖ್ಯಾತಃ ಶ್ರೀಸುಧೀಂದ್ರವ್ರತಿಪತಿರತುಲಂ ಭದ್ರಮನ್ನಿದ್ರಯೇನ್ನಃ ||
(ಗುರುಗುಣಸ್ತವನ)

ಈ ಶ್ಲೋಕದಿಂದ ತಿಳಿದು ಬರುವದು. ೧೬೧೫ರಲ್ಲಿ ಪಟ್ಟಕ್ಕೆ ಕುಳಿತ ರಾಮರಾಯನೇ (ವೆಂಕಟಪತಿರಾಯರ ಅಣ್ಣನ ಮಗನಾದ ಶ್ರೀರಂಗರಾಯರ ಮಗನು) ಈತನಾಗಿರಬೇಕು.

ಇದರ ಹೊರತು ಶ್ರೀಸುಧೀಂದ್ರರು ತಮ್ಮ ಶಿಷ್ಯರಾದ ಪಂಡಿತ ವೆಂಕಟಾಚಾರ್ಯರನ್ನು (ಶ್ರೀರಾಘವೇಂದ್ರಸ್ವಾಮಿಗಳ ಪೂರ್ವಾಶ್ರಮದ ಹೆಸರು.) ಕರಕೊಂಡು ತಂಜಾವರಕ್ಕೆ ಹೋದಾಗ ಅಲ್ಲಿದ್ದ 'ಯಜ್ಞನಾರಾಯಣ ದೀಕ್ಷಿತ'ನೆಂಬ ಪಂಡಿತನು ಈ ವೆಂಕಟಾಚಾರ್ಯರ ವಿದ್ವತ್ತೆಯನ್ನು ನೋಡಿ ಬಹುಮಾನ-ಮರ್ಯಾದೆ ಮಾಡಿದನೆಂದು—

"ತಂಜಾಪುರ್ಯಾಮನ್ಯದಾ ಶುಲ್ಬಸೂತ್ರಂ |
ವ್ಯಾಖ್ಯಾತಾರಂ ವಾವದೂಕಂ ಯಜಂತಂ ||
ರಾಜ್ಞೋ ವಿದ್ವಾನ್ಯಜ್ಞನಾರಾಯಣೇಜ್ಯಾ |
ಶೀಲೋತ್ತಂಸಸ್ತಂ ಸನಂದಾದಿಮಾತ್ರಂ ||
ಕಾಲೇನಾಸ್ಮಿನ್ ಕಾಕತಾಲೀಯಶಬ್ದೇ |
ಜೇತಾರಂ ತಂ ಯಾಯಜೂಕಾನ್ ಕವೀಂದ್ರಾನ್ ||
ತಸ್ಯಾಂ ಪುರ್ಯಾಂ ತಪ್ತಮುದ್ರಾಂಕನೇ ಚ !
ಪ್ರೌಢಂ ಮೇನೇ ಯಜ್ಞನಾರಾಯಣಸ್ತಂ ||"
(ರಾ. ವಿಜಯ. ಸ. ೬-೧೬-೧೭)

ಇದರಿಂದ ಸ್ಪಷ್ಟವಾಗುತ್ತಿರುವದು. ಯಜ್ಞನಾರಾಯಣದೀಕ್ಷಿತನೆಂದರೆ ಚವ್ವನಾಯಕನಲ್ಲಿ ಮಂತ್ರಿಗಳಾಗಿದ್ದ ಗೋವಿಂದದೀಕ್ಷಿತರ ಹಿರಿ

ಯ ಮಗನು ಈತನು ರಘುನಾಥಭೂಪಾಲನಲ್ಲಿ ಆಸ್ಥಾನಪಂಡಿತನಾಗಿದ್ದು 'ರಘುನಾಥ ಭೂಪಾಲವಿಜಯ, ರಘುನಾಥವಿಲಾಸ ನಾಟಕ' ಮುಂತಾದ ಗ್ರಂಥಗಳನ್ನು ಬರೆದಿರುವರು. ಆ ಕಾವ್ಯದ ಪ್ರತಿ ಸರ್ಗಾಂತ್ಯದಲ್ಲಿಯೂ

'ಗೋವಿಂದದೀಕ್ಷಿತನಂದನೇನ ಯಜ್ಞನಾರಾಯಣದೀಕ್ಷಿತೇನ ವಿರಚಿತಂ ರಘುನಾಥಭೂಪವಿಜಯಂ' ಹೀಗೆ ಬರೆದಿದೆ.

ಅಲ್ಲದೆ—'ಸಂಗೀತಸಂಪ್ರದಾಯಪ್ರದರ್ಶಿನಿ' ಯೆಂಬ ತೆಲಗುಗ್ರಂಥದಲ್ಲಿ—ಗೋವಿಂದದೀಕ್ಷಿತರ ಹಾಗೂ ನಾಯಕರಾಜರ ವಿಷಯವಾಗಿ ಒಂದುವಿಸ್ತಾರವಾದ ಲೇಖವಿದೆ. ಅದರಲ್ಲಿ:—

||...........ತಂಜಾವೂರು ಸಂಸ್ಥಾನಮುನು ಮಿಕ್ಕಿಲಿ ಪ್ರಬಲಮುಗಾ ಪರಿಪಾಲಿಂಚುಕೊನಿ ವಚ್ಚಿನ ನಾಯಕಮಹಾರಾಜವಂಶಮುಲೊ ಮೊದಟಿ ರಾಜಯಿನ ಚೆವ್ವಪ್ಪನಾಯಕ ಮಹಾರಾಜು ಶಕಾಬ್ದಮು ೧೪೫೨ (ಕ್ರಿಸ್ತುಶಕಮು ೧೫೩೦) ಮೊದಲು ಕೊನಿ ಶಕಾಬ್ದಮು ೧೪೯೪ (ಕ್ರಿ. ಶಕಮು ೧೫೭೨)........ಈ ಚೆವ್ವಪ್ಪನಾಯುನಿ ಕುಮಾರುಂಡು ಅಚ್ಯುತಪ್ಪಮಹಾರಾಜು........ಕೊನಿ ಶಕಮು ೧೫೩೬ (ಕ್ರಿ. ಶಕಮು ೧೬೧೪) ಈ ಗೋವಿಂದದೀಕ್ಷಿತುಲ ಭಾರ್ಯ ನಾಗಮಾಂಬ ಈತನಿಕುಮಾರಲುಲೋ ಜ್ಯೇಷ್ಠುಲು ಯಜ್ಞನಾರಾಯಣದೀಕ್ಷಿತುಲು ಕನಿಷ್ಠುಲು ವೆಂಕಟಮಖಿ-ಈ ನಾಯಕರಾಜವಂಶಮುಂದು ಮೂಡವರಾಜು ರಘುನಾಥನಾಯಕುಲು ....ಶಕಾಬ್ದಮು ೧೫೩೬ (ಕ್ರಿ. ಶಕಮು ೧೬೧೪)ಲೋ ಪಟ್ಟಾಭಿಷಿಕ್ತುಂಡೈ ಗೋವಿಂದದೀಕ್ಷಿತುಲಂ............ ||

ಹೀಗೆ ಹೇಳಿದೆ.

ಇವೆಲ್ಲವುಗಳ ಮೇಲಿಂದ ಶ್ರೀಸುಧೀಂದ್ರರು ೧೬೨೦ರಲ್ಲಿದ್ದರೆಂದು ಹೇಳಲು ಸಂದೇಹವೇನು?

ಶ್ರೀರಾಘವೇಂದ್ರಸ್ವಾಮಿಗಳವರಾದರೂ ಯಜ್ಞನಾರಾಯಣ ದೀಕ್ಷಿತರ ಭೇಟಿಯಾದನಂತರ ಕೆಲವು ದಿವಸಗಳ ಮೇಲೆ ಆಶ್ರಮವನ್ನು ತಕ್ಕೊಂಡದ್ದರಿಂದ ಇವರು ೧೬೨೫ರ ಸುಮಾರಕ್ಕೆ ಇದ್ದರೆಂದು ನಿಃಸಂದೇಹವಾಗಿ ಹೇಳಬಹುದು.

ಇನ್ನೊಂದೇನೆಂದರೆ:—

ಶ್ರೀರಾಘವೇಂದ್ರಸ್ವಾಮಿಗಳವರ ತಾತಂದಿರಾದ ಕೃಷ್ಣಮಾಚಾ

ರ್ಯರು ವಿಜಯನಗರದ ದೊರೆಯಾದ ಕೃಷ್ಣರಾಯನಿಗೆ ಗುರುಗಳಾಗಿ ಆತನಿಂದ ಅನೇಕ ಸಂಭಾವನೆಗಳನ್ನೂ-ಬಿರುದಾವಳಿಗಳನ್ನೂ ಪಡೆದಿದ್ದರೆಂದು ಹಿಂದೆಯೇ ತಿಳಿಸಿರುವೆವು. ಮುಂದೆ ಇವರ ಮೊಮ್ಮಕ್ಕಳಾದ (ರಾಯರ ತಂದೆಯವರು) ತಿಮ್ಮಣಾಚಾರ್ಯರು ವಿಜಯನಗರವನ್ನು ಬಿಟ್ಟು ಬಂದರೆಂಬದೂ ಶ್ರೀಸುಧೀಂದ್ರತೀರ್ಥರ ಆಶ್ರಯದಲ್ಲಿದ್ದು ಜೀವನ ಮಾಡಿದರೆಂಬದೂ ತಿಳಿದ ವಿಷಯವೇ ಆಗಿದೆ. ಅಲ್ಲದೆ ಸುಧೀಂದ್ರತೀರ್ಥರ ಕಾಲಕ್ಕೇನೇ ವೆಂಕಟಪತಿರಾಯರು ಅರಸರಾಗಿದ್ದರು. ಅಂದಮೇಲೆ ಶ್ರೀರಾಯರು ವಿಜಯನಗರದ-ರಾಮದೇವ-ರಂಗರಾಯರ ಕಾಲದಲ್ಲಿದ್ದರೆಂದು ಸಹಜವಾಗಿ ವ್ಯಕ್ತವಾಗುವದು.

ಇಲ್ಲಿಯ ವರೆಗೆ ಹೇಳಿದುದು ಗ್ರಂಥಸ್ಥ ಪ್ರಮಾಣವಾಯಿತು; ಆದರೆ ಇದಕ್ಕೂ ಹೆಚ್ಚಿನ ಬಲವಾದ ಪ್ರಮಾಣವಿನ್ನೊಂದಿರುವದು. ಅದೇನಂದರೆ:—

ನಂಜನಗೂಡು ಮಠದಲ್ಲಿ ಒಂದು ಶಾಸನವು ದೊರೆಯುತ್ತದೆ:— ಅದರಲ್ಲಿ—ಮೈಸೂರ ದೊಡ್ಡದೇವರಾಜನು (೧೬೫೯-೧೬೭೩) ಶ್ರೀರಾಘವೇಂದ್ರಸ್ವಾಮಿಗಳವರಿಗೆ ಗ್ರಾಮವನ್ನು ಬಿಟ್ಟಂತೆ ಹೇಳಿರುವದು. ಈ ಶಾಸನವು ಕ್ರಿ. ಶ. ೧೬೬೩ರಲ್ಲಿ ಬರೆಯಲ್ಪಟ್ಟದ್ದು (ಪ್ರಾಕ್ತನ ವಿಮರ್ಶ ವಿಚಕ್ಷಣ. ರಾ. ಬ. ಆರ್ ನರಸಿಂಹಾಚಾರ್ಯರ ಶಾಸನದ ರಿಪೋರ್ಟ್ ೧೯೧೭ ಪುಟ ೫೮ರಲ್ಲಿ ನೋಡಬಹುದು)

ಮತ್ತೀಯ ಹೇಳಿಗೆಯಾದರೂ ಶ್ರೀರಾಘವೇಂದ್ರ ಗುರುಗಳೇ ೧೬೨೩-೧೬೭೧ರ ವರೆಗೆ ಸಂಸ್ಥಾನವಾಳಿದರೆಂದು ಹೇಳುವದು.



## ೨ ಗ್ರಂಥರಚನೆ.

ಶ್ರೀಗಳವರು ಪ್ರತಿದಿನದಲ್ಲಿಯೂ ತ್ರಿಕಾಲಸ್ನಾನ ಮಾಡುತ್ತ ವಿಧಿವತ್ತಾಗಿ ಮಾಡುತ್ತಿರುವ ಶ್ರೀರಾಮದೇವರ ಪೂಜೆ-ಬ್ರಾಹ್ಮಣ ಭೋಜನ, ಶಿಷ್ಯರಿಗೆ ಪಾಠ ಹೇಳೋಣ-ಗ್ರಂಥಾವಲೋಕನ ಇಷ್ಟೆಲ್ಲ ಕಾರ್ಯಗಳನ್ನು ಯೋಚಿಸಿದರೆ ಗ್ರಂಥರಚನಾಕಾರ್ಯಕ್ಕೆ ಇನ್ನೆಷ್ಟು ಅವಕಾಶವು ದೊರೆತಿರಬಹುದೆಂಬದನ್ನು ವಾಚಕರೇ ಊಹಿಸಬಹುದು. ಆದರೂ ಇವರು ಸಿಕ್ಕಷ್ಟು ಅವಕಾಶದಲ್ಲಿಯೇ ಸಜ್ಜನರ ಉದ್ಧಾರಾರ್ಥವಾಗಿ ಅನೇಕಾನೇಕ ಗ್ರಂಥಗಳನ್ನೂ ಟೀಕಾ-ಟಿಪ್ಪಣಿಗಳನ್ನೂ ಬರೆದು ಲೋಕೋಪಕಾರ ಮಾಡಿದ್ದನ್ನು ನೋಡಿದರೆ ಅತ್ಯಾಶ್ಚರ್ಯವಾಗುತ್ತಿರುವದು. ಹಾಗೂ ಪಂಡಿತರಾದವರು ತಮ್ಮ ತಮ್ಮ ಪಾಂಡಿತ್ಯಕ್ಕೆ ಅನುಗುಣವಾಗಿ ಮಂದಮತಿಗಳ ದೆಸೆಯಿಂದ ಗ್ರಂಥ ನಿರ್ಮಾಣಕಾರ್ಯದಲ್ಲಿ ತೊಡಗಬೇಕೆಂಬ ತತ್ವವು ಇವರ ಉದಾಹರಣೆಯಿಂದ ಸ್ಪಷ್ಟವಾಗುತ್ತಿರುವದು.

ಶ್ರೀವಾದೀಂದ್ರತೀರ್ಥರವರಿಂದ ವಿರಚಿತವಾದ 'ಗುರುಗುಣಸ್ತವ' ಎಂಬುದೊಂದು ಸಣ್ಣ ಗ್ರಂಥವಿದೆ. ಅದರಲ್ಲಿ—ಕನ್ನಡ ಮಹಾಭಾರತವನ್ನು ಬರೆದ ಕುಮಾರವ್ಯಾಸನು ಗ್ರಂಥರಚನಾ ವಿಷಯದಲ್ಲಿ ತನ್ನ ಸಾಮರ್ಥ್ಯವನ್ನು

ಹಲಗೆಬಳಹವಪಿಡಿಯದೊಂದ| ಗ್ಗಳಿಕೆಪದವಿಟ್ಟಳಿಪದೊಂದ|
ಗ್ಗಳಿಕೆಪರರೊಡ್ಡವದರೀತಿಯಕೊಳ್ಳದಗ್ಗಳಿಕೆ ||
ಬಳಸಿಬರೆಯಲು ಕಂಠಪತ್ರದ| ಉಲುಹುಕೆಡದಗ್ಗಳಿಕೆಯೆಂಬೀ |
ಬಲುಹುಗದುಗಿನವೀರನಾರಾಯಣನ ಕಿಂಕರಗೆ ||

ಎಂಬೀ ರೀತಿಯಾಗಿ ಹೇಗೆ ಹೇಳಿಕೊಂಡಿರುವನೋ ತದ್ವತ್ ಶ್ರೀಗಳವರ ಸಾಮರ್ಥ್ಯವನ್ನು ಬಣ್ಣಿಸಿರುತ್ತಾರೆ ಅದರ ಮುಖ್ಯ ತಾತ್ಪರ್ಯವೇನೆಂದರೆ—

(ಇವರು ತಮ್ಮ ಮನಸ್ಸಿನಲ್ಲಿ ಅಯುಕ್ತವಾದ ಅರ್ಥಗಳನ್ನು ತೋರಿಕೊಳ್ಳುವದಿಲ್ಲ. ಅವಿಚಾರಿತವಾಗಿ ಮಾತನಾಡುವದಿಲ್ಲ. ಸಂದೇಹಗ್ರಸ್ತರಾಗಿ ಇತರ ಪಂಡಿತರ ಸಂಗಡ ವಿಚಾರಮಾಡುವದಿಲ್ಲ. ತಿದ್ದುವಹಾಗೆ ಬರೆಯುವದಿಲ್ಲ. ಹಿಂದಾವರ್ತಿ ಹೇಳಿದ್ದನ್ನು ಪುನಃ ಹೇಳುವದಿಲ್ಲ. ಎಲ್ಲಿಯೇ ಆಗಲಿ ಬರೆದದ್ದನ್ನು ಅಳಿಸುವದಿಲ್ಲ.)

ಶ್ರೀಗಳವರು ಬರೆದ ಗ್ರಂಥಗಳು:—

೧ ತತ್ವೋದ್ಯೋತ
೨ ಪ್ರಮಾಣ ಪದ್ಧತಿ
೩ ಗೀತಾ ವಿವೃತ್ತಿ
೪ ತಂತ್ರ ದೀಪಿಕಾ
೫ ಪ್ರಮೇಯ ದೀಪಿಕಾ
೬ ನ್ಯಾಯ ದೀಪಿಕಾ
೭ ಋಗರ್ಥ ಮಂಜರಿ
೮ ಭಾಟ್ಟ ಮೀಮಾಂಸ
೯ ಮಂತ್ರಾರ್ಥ ಸಂಗ್ರಹ
೧೦ ಕೃಷ್ಣ ಮಂಜರಿ
೧೧ ರಾಮ ಮಂಜರಿ
೧೨ ಗೀತಾರ್ಥ ಮಂಜರಿ
೧೩ ಋಗ್ಭಾಷ್ಯ
೧೪ ಪುರುಷ ಸೂಕ್ತಾರ್ಥ
೧೫ ಯಜುರ್ವೇದ ಟಿಪ್ಪಣಿ
೧೬ ಸಾಮವೇದ ಟಿಪ್ಪಣಿ
೧೭ ಸುಧಾ ವ್ಯಾಖ್ಯಾನ
೧೮ ಪ್ರಾತಃ ಸಂಕಲ್ಪ ಗದ್ಯ
೧೯ ಅಂಭೃಣೀಸೂಕ್ತಭಾಷ್ಯ
೨೦ ತತ್ವವಿವೇಕ ಟಿಪ್ಪಣಿ
೨೧ ತತ್ವಸಂಖ್ಯಾನ ಟಿ.
೨೨ ವಿಷ್ಣುತತ್ವ ನಿರ್ಣಯ.
೨೩ ಕಥಾ ಲಕ್ಷಣ ಟಿ.
೨೪ ಪ್ರಮಾಣ ಲಕ್ಷಣ ಟಿ.
೨೫ ಕರ್ಮ ನಿರ್ಣಯ ಟಿ
೨೬ ತತ್ವಪ್ರಕಾಶಿಕಾ ಟಿ.
೨೭ ವಾದಾವಲಿ ಟಿ.
೨೮ ಉಪಾಧಿ ಖಂಡನ ಟಿ.
೨೯ ಮಾಯಾವಾದಖಂಡನ ಟಿ.
೩೦ ಮಿಥ್ಯಾತ್ವಅನುಮಾನಖಂಡನ
೩೧ ದಶೋಪನಿಷತ್ ಖಂಡಾರ್ಥ
೩೨ ತರ್ಕ ತಾಂಡವ ಟಿ.
೩೩ ಚಂದ್ರಿಕಾ ಟಿ
೩೪ ಅಣುಭಾಷ್ಯ ಟೀಕಾ
೩೫ ನ್ಯಾಯ ಮುಕ್ತಾವಲಿ
೩೬ ಈಶಾವಾಸ್ಯೋಪನಿಷತ್ ಟಿ
೩೭ ಅಥರ್ವಣೋಪನಿಷತ್‌ಟಿಪ್ಪಣಿ

ಈ ಪ್ರಕಾರ ಶ್ರೀಮದಾಚಾರ್ಯರು ಹೇಗೆ ಮೂಲ ಮೂವತ್ತೇಳು ಗ್ರಂಥಗಳನ್ನು ಬರೆದರೋ, ಅದರಂತೆ ಇವರಾದರೂ ಮಂದಮತಿಗಳ ಉದ್ಧಾರಾರ್ಥವಾಗಿ ಸಂಸ್ಕೃತ ಭಾಷೆಯಲ್ಲಿ ಅದ್ವಿತೀಯವಾದ ಮೂವತ್ತೇಳು ಗ್ರಂಥಗಳನ್ನು ರಚಿಸಿದರು. ಇದರ ಮೇಲಿಂದ ಶ್ರೀಗಳವರ ಪಾಂಡಿತ್ಯವೆಷ್ಟಿತ್ತೆಂಬದು ತಿಳಿದು ಬರಬಹುದು. ಅಂತೆಯೇ ಇವರ ಪಾಂಡಿತ್ಯವನ್ನು ಅನ್ಯಮತೀಯರೂ ಕೂಡ ನಿರ್ಮಾತ್ಸರ್ಯದಿಂದ ಶ್ಲಾಘಿಸಿದ್ದಾರೆ. ಇಂಥ ಮಾಹಾತ್ಮರಿಂದ ಬರೆಯಲ್ಪಟ್ಟ ವೇದಭಾಷ್ಯದ ತಾಳಪತ್ರಪ್ರತಿಯೊಂದನ್ನು ತಮ್ಮ ಮಿತ್ರರಲ್ಲಿ ಕೆಲವು ದಿನಗಳ ಹಿಂದೆ ಕಂಡಿದ್ದೆನೆಂದೂ ಪುನಃ ಅದೀಗ

ದ್ವೀಪಾಂತರಗತವಾಯಿತೆಂದೂ (ಜರ್ಮನಿಯಲ್ಲಿ ಹೋಗಿ ಸೇರಿದೆ) ಮೈಸೂರ ಅರಮನೆಯ ಧರ್ಮಾಧಿಕಾರಿಗಳಾದ ಶ್ರೀಯುತ ಪಂಡಿತರತ್ನಂ ರಾಘವೇಂದ್ರಾಚಾರ್ಯರವರು ತಮ್ಮದೊಂದು ಉಪನ್ಯಾಸದಲ್ಲಿ ಹೇಳಿ ದುಃಖಾಶ್ರುಗಳನ್ನು ಸುರಿಸಿರುವರು. ನಮ್ಮಲ್ಲಿಯ ಗ್ರಂಥಗಳೆಲ್ಲ ಬಹುಶಃ ತಾಳಪತ್ರದಲ್ಲಿಯೇ ಇದ್ದು ಅವುಗಳನ್ನು ಎಷ್ಟೋ ಜನರು ತಾವೂ ನೋಡದೆ ಇತರರಿಗೂ ಕೊಡದೆ ಸಂದಿಗೊಂದಿಗಳಲ್ಲಿ ಹಿಗೆದು ಗೆದ್ದಲು ಪಾಲುಮಾಡಿಬಿಡುತ್ತಿರುವರು. ಇದೊಂದು ನಮ್ಮ ಗ್ರಂಥಗಳಿಗೆ ಒದಗಿರುವ ದೊಡ್ಡ ಕುತ್ತೆಂದೇ ಹೇಳಬಹುದು. ಇನ್ನಾದರೂ ಅಲ್ಲಲ್ಲಿಯ ಮಹಸ್ನೀಯರು ಇಂಥ ತಾಳಪತ್ರ ಪ್ರತಿಗಳನ್ನು ಹಿಂದೆಡೆಯಲ್ಲಿ ಶೇಖರಿಸಿಟ್ಟು ವಿದ್ವಾಂಸರಿಂದ ಪ್ರಕಟಮಾಡಿಸುತ್ತ ಹೋದರೆ, ಈಗ ಲೋಪವೆಂದು ಕಂಡು ಬರುವ ಎಷ್ಟೋ ಅಮೌಲ್ಯ ಗ್ರಂಥಗಳು ಬೈಲಿಗೆ ಬರಬಹುದೆಂಬ ಆಶೆಯುಂಟು. ಇರಲಿ.

ಇನ್ನು—ಶ್ರೀಗಳವರು ಬರೇ ಸಂಸ್ಕೃತ ಗ್ರಂಥಗಳನ್ನು ಮಾತ್ರ ರಚಿಸಿದರೇ ಅಥವಾ ಕನ್ನಡದಲ್ಲಿಯೂ ಸಾಹಿತ್ಯಸೇವೆಯನ್ನು ಮಾಡಿದರೇ ಎಂಬುದೊಂದು ಪ್ರಶ್ನೆಯು ಮುಂದೆ ಬರುವದು. ಯಾವ ಮಹಾತ್ಮರು ಕರ್ನಾಟಕದಲ್ಲಿಯೇ ಹುಟ್ಟಿ ಬೆಳೆದು ಕರ್ನಾಟಕದ ಉದ್ಧಾರಕ್ಕೋಸ್ಕರವಾಗಿಯೇ ಹಗಲಿರುಳು ಯತ್ನಗೆಯ್ದರೋ, ಅಂಥವರು ಕರ್ನಾಟಕ ಭಾಷಾ ಸೇವೆಯನ್ನು ಅಲ್ಪವಾಗಿಯಾದರೂ ಮಾಡಿಲ್ಲವೆಂದು ಹೇಳುವದು ಸಮಂಜಸವಾಗಲಾರದು. ಆದರೂ ಪುರಂದರಾದಿ ದಾಸರ ಪದಗಳಂತೆ ಇವರ ಪದ ಪದ್ಯಗಳು ಯಥೇಚ್ಛವಾಗಿ ಸಿಗದೆ, ಒಂದೇ ಹಿಂದು ಪದ್ಯವು ಮಾತ್ರ ದೊರೆತಿರುವದು ಅತ್ಯಂತ ಶೋಚನೀಯವಾದ ಸಂಗತಿಯಾಗಿರುತ್ತದೆ. ಇಂಥ ಹಿಂದು ಪದ್ಯಕ್ಕಾಗಿಯೇ ಇವರು 'ವೇಣುಗೋಪಾಲ' ಎಂಬ ಅಂಕಿತವನ್ನು ಧರಿಸುತ್ತಿದ್ದಿಲ್ಲವೆಂದು ನಮಗಂತೂ ಅನಿಸುತ್ತಿರುವದು. ಕರ್ನಾಟಕಾಭಿಮಾನಿಗಳೂ ಬಲ್ಲವರೂ ಈ ವಿಷಯದಲ್ಲಿ ಹೆಚ್ಚಿಗೆ ಶೋಧಮಾಡಬೇಕೆಂದು ವಿಜ್ಞಾಪಿಸಿಕೊಳ್ಳುವೆವು

## ೩ ನಾಲ್ಕನೆಯ ಅವತಾರ.

ಶ್ರೀಗಳವರು ಅಖಂಡವಾಗಿ ೪೦|೫೦ ವರುಷ ಶ್ರೀರಾಮದೇವರ †

† ರಾಯರು ಮೂಲರಾಮದೇವರ ಪೂಜಾಮಾತ್ರ ಮಾಡಿ ಮೂಲ ಸೀತಾ ಅಮ್ಮನವರ

ಪೂಜೆಯನ್ನು ಮಾಡಿದವರಾದರೂ ಅವರಿಗೆ ಇನ್ನೊಂದು ಬಯಕೆಯುಳಿಯಿತು. ಅದು ಈ ಜನ್ಮದಲ್ಲಿ ಕಡೆತನಕ ಈಡೇರಲಿಲ್ಲ. ಶ್ರೀರಾಮದೇವರೊಡನೆ ಶ್ರೀಸೀತಾಅಮ್ಮನವರನ್ನು ಪೂಜೆ ಮಾಡಲಿಲ್ಲವಲ್ಲಾ? ಎಂಬುದೇ ಅವರ ಬಯಕೆ. ಮಂತ್ರಾಲಯಮಠಕ್ಕೆ ಶ್ರೀರಾಮದೇವರ ಮೂರ್ತಿಯೊಂದು ದೊರೆತಿತ್ತಲ್ಲದೆ ಸೀತಾಪ್ರತಿಮೆಯು ದೊರೆತಿದ್ದಿಲ್ಲ. (ಅದ್ಯಾಪಿ ಸೀತಾಪ್ರತಿಮೆಯು ಈ ಮಠದಲ್ಲಿಲ್ಲ )ಇದು ಇರುವದು ಉತ್ತರಾದಿ ಮಠದಲ್ಲಿ ಆದ್ದರಿಂದ ಶ್ರೀರಾಘವೇಂದ್ರಸ್ವಾಮಿಗಳವರು—ಸತ್ಯಸಂಧರೆಂಬ * ಹೆಸರಿನಿಂದ ಪುನಃ ಅವತಾರ ಮಾಡಿ ಶ್ರೀಮದುತ್ತರಾದಿ ಮಠದಲ್ಲಿ ಹನ್ನೊಂದು ವರ್ಷಗಳ ವರೆಗೆ ಸೀತಾರಾಮರ ಪೂಜೆಯನ್ನು ಮನದಣಿಯಾಗಿ ಮಾಡಿದರು.

ಪುನಶ್ಚ ಸತ್ಯಸಂಧಾಖ್ಯೋ ಮಠಾಂತರ ನಿವಾಸಿನೀ ||
ಅನರ್ಚಿತಾಚ ಸೀತಾಯಾಃ ಪ್ರತಿಮಾಮರ್ಚಯದ್ಯತಿಃ ||
ವಿಷ್ವಕ್ಸೇನಾಹೀಶ ಪುತ್ರಾವತಾರಾಃ ಷಡಿಮೇಮತಾಃ ||
ತಸ್ಯ ಶ್ರೀರಾಘವೇಂದ್ರಾರ್ಯ ಗುರೋಃ ಕಾಮ್ಯಾರ್ಥದಾಯಿನಃ ||
(ರಾಘವೇಂದ್ರ ತಂತ್ರ ಪಟಲ ೪)

ಮಂತ್ರಾಲಯ ಮಹಾಕ್ಷೇತ್ರ ವೃಂದಾವನ ನಿವಾಸಿನೆ ||
ಶ್ರೀಸತ್ಯಸಂಧ ರೂಪೇಣ ಶ್ರೀಸೀತಾಪ್ರತಿಮಾರ್ಚಕ ||
(ರಾ. ತಂತ್ರ ಪಟಲ ೭)

ಈ ಸತ್ಯಸಂಧರ ಮೂಲವೃತ್ತಾಂತವನ್ನು ಸಂಕ್ಷೇಪವಾಗಿ ಇಲ್ಲಿ ಹೇಳಿಬಿಡುವೆವು.

---

ಪೂಜೆಗೋಸ್ಕರರಾಗಿಯೇ ಪುನಃ ಅವತರಿಸಿದರೆಂದು ಹೇಳುವದರಿಂದ ಮೂಲರಾಮದೇವರು ನಮ್ಮ ಮಠದಲ್ಲಿಯೇ ಇರುವದೆಂದು ಮಂತ್ರಾಲಯ ಮಠದವರ ಅಭಿಪ್ರಾಯವು.

ಈ ವಿಷಯವನ್ನು ಕಡೆಗೆ ಪರಿಶಿಷ್ಟದಲ್ಲಿರುವ --ಮೂಲರಾಮದೇವರ ವೃತ್ತಾಂತ ಎಂಬ ಲೇಖದೊಳಗೆ ನೋಡಿರಿ.

— — —

* ಇವರ ವಿಸ್ತಾರವಾದ ಚರಿತ್ರವನ್ನು ಸತ್ಯಸಂಧಕಥಾಮೃತ ಎಂಬ ಹೆಸರಿನಿಂದ ಹೋದ ವರ್ಷ ಸದ್ಬೋಧ ಚಂದ್ರಿಕೆಯಲ್ಲಿ ಪ್ರಕಟಿಸಿರುವೆವು. ಅಪೇಕ್ಷಕರು ಅಲ್ಲಿಂದ ತರಿಸಿಕೊಳ್ಳಬಹುದು.

ಮದ್ರಾಸ ಇಲಾಖಾ ಹಿಂದೂಪುರ ತಾಲೂಕ ಸಂತೇಬಿದನೂರಲ್ಲಿ ರಾಘವೇಂದ್ರಾಚಾರ್ಯರೆಂಬೊಬ್ಬ ಸತ್ವಶೀಲರಾದ ಬ್ರಾಹ್ಮಣರಿದ್ದರು. ಇವರು ಬಾಲ್ಯದಲ್ಲಿಯೇ ಚನ್ನಾಗಿ ವಿದ್ಯಾಭ್ಯಾಸಮಾಡಿ ಪಂಡಿತರಾದರು; ಮತ್ತು ತಮ್ಮ ಕರ್ಮಾನುಷ್ಠಾನಗಳನ್ನು ಸರಿಯಾಗಿ ಸಾಗಿಸುತ್ತಾ ಸಾತ್ವಿಕತನದಿಂದ ಸದಾ ಹರಿಸೇವೆಯಲ್ಲಿಯೇ ಮಗ್ನರಾಗಿ ಪರಮಾತ್ಮನ ಪ್ರೀತಿಗೆ ಪಾತ್ರರಾದರು. ಆಗ ಸವಣೂರಲ್ಲಿ ಉತ್ತರಾದಿಮಠದ ಶ್ರೀಸತ್ಯ ಬೋಧ ಸ್ವಾಮಿಗಳಿದ್ದರು. ಇವರ ಚರಿತ್ರೆಯೂ ಲೋಕಾದ್ಭುತ ವಾದದ್ದು. † ಇವರು ಒಮ್ಮೆ ತಿರುಪತಿಯ ಯಾತ್ರೆಗೆಂದು ಹೊರಟು ಬೆಟ್ಟಹತ್ತುವಾಗ ಎಲ್ಲರನ್ನೂ ಉದ್ದೇಶಿಸಿ:—"ನಮಗೆ ಹಸ್ತಲಾಘವವನ್ನು ಕೊಟ್ಟು ಒಂದೂ ತಪ್ಪಿಲ್ಲದಂತೆ ಋಗ್ಭಾಷ್ಯವನ್ನು ಪಠನಮಾಡುತ್ತ ಇಲ್ಲಿಂದ ವರಾಹಮೂರ್ತಿಯ ಪಾದದವರೆಗೂ ಯಾರು ಗಿರ್ಯಾರೋಹಣ ಮಾಡುವಿರೋ ಅವರಿಗೆ ಸೀತಾಪತಿಯಾದ ಶ್ರೀರಾಮನು ಇಕೋ ಈ ತುಲಸೀಮಾಲೆಯನ್ನು ಅನುಗ್ರಹಾರ್ಥವಾಗಿ ದಯಪಾಲಿಸುತ್ತಾನೆ. ಭಗವಂತನ ಅನುಗ್ರಹಕ್ಕೆ ಪಾತ್ರರಾದವರು ಮುಂದೆ ಬರಬಹುದು." ಹೀಗೆಂದು ಹೇಳಿ ತುಲಸೀಮಾಲೆಯನ್ನು ಹಿಡಿದುಕೊಂಡು ಕುಳಿತರು. ಪಂಡಿತರೊಬ್ಬರಾದರೂ ಮುಂದೆ ಬರಲಿಲ್ಲ ಎಷ್ಟು ಜನರಿದ್ದರೇನು? ಋಗ್ಭಾಷ್ಯವನ್ನು ಒಂದಾದರೂ ತಪ್ಪಿಲ್ಲದಂತೆ ಪಠಣ ಮಾಡುವೆವೆಂದು ಹೇಳುವ ಧೈರ್ಯವು ಯಾರದೂ ಆಗಲಿಲ್ಲ. ಎಲ್ಲರಿಗೂ ಒಂದೊಂದು ತರದ ಸಂಶಯ. ಹೆದರಿಕೆ. ಆಗ ನಮ್ಮ ರಾಘವೇಂದ್ರಾಚಾರ್ಯರು ಧೈರ್ಯದಿಂದ ಮುಂದೆ ಬಂದು:—"ಮಹಾಸ್ವಾಮಿ, ನಾನು ಋಗ್ಭಾಷ್ಯ ವನ್ನು ತಪ್ಪಿಲ್ಲದಂತೆ ಪಠನ ಮಾಡುತ್ತಾ ತಮಗೆ ಹಸ್ತಲಾಘವವನ್ನು ಕೊಟ್ಟು ವರಾಹಮೂರ್ತಿಯ ಸನ್ನಿಧಿಗೆ ಅದನ್ನು ಮುಗಿಸುವೆನೆಂದು ಪ್ರತಿಜ್ಞಾಪುರಃಸರವಾಗಿ ಹೇಳಬಲ್ಲೆನು. ಆದರೆ ಇದು ಅಹಂಭಾವದ ಮಾತೆಂದು ಶ್ರೀಗಳವರು ಎಣಿಸಕೂಡದು. ಬ್ರಹ್ಮವೃಂದದಲ್ಲಿ ಅಭಿ ಮಾನದಿಂದ ಹೇಳುತ್ತೇನೆ ಇದರ ಮೇಲೆ ಶ್ರೀಸೀತಾಪತಿಯ ಅನುಗ್ರಹ

† ಶ್ರೀಸತ್ಯಬೋಧ ಶ್ರೀಗಳವರ ಚರಿತ್ರೆಯನ್ನು ಅವರ ವಂಶಜರೇ ಆದ ಶ್ರೀಯುತ ಪುರುಷೋತ್ತಮಾಚಾರ್ಯ ರಾಯಚೂರ ಪ್ಲೀಡರ-ಹಾವೇರಿ ಎಂಬ ಮಹಾಶಯರು ಬಹು ಸುಂದರವಾಗಿ ಬರೆದಿರುವರು. (ಬೆಲೆ ಅರೇ ಆಣೆ) ಅದನ್ನು ವಾಚಕರು ಓದಿಸಂತೋಷಿಸಬಹುದು

ಶ್ರೀ ಪ್ರಲ್ಹಾದರು.



ಶ್ರೀ ವ್ಯಾಸ ತೀರ್ಥರು.




ಶ್ರೀಮದ್ರಾಘವೇಂದ್ರರು.



ಶ್ರೀ ಸತ್ಯಸಂಧತೀರ್ಥರು.



ಪ್ರಲ್ಹಾದರಾಜಃ ಪ್ರಥಮೋವ್ಯಾಸರಾಜೋದ್ವಿತೀಯಕಃ ॥ ರಾಘವೇಂದ್ರ ಸ್ತೃತೀಯಸ್ತು ಸತ್ಯಸಂಧಶ್ಚತುರ್ಥಕಃ ॥

ವಿದ್ದಂತಾಗಲಿ" ಎಂದು ಕೈಜೋಡಿಸಿ ಬೇಡಿಕೊಂಡರು. ಬ್ರಹ್ಮವೃಂದವು ಬೆರಗಾಯಿತು ಹಿಂದಕ್ಕೆ ದ್ರೌಪದಿಯ ಸ್ವಯಂವರಕಾಲದಲ್ಲಿ ಧನುಸ್ಸನ್ನು ಎತ್ತಲಿಕ್ಕೆ ಎದ್ದಂಥ ಬ್ರಾಹ್ಮಣ ವೇಷದ ಅರ್ಜುನನನ್ನು ನೋಡಿ ಬ್ರಹ್ಮ ವೃಂದವು ಯಾವ ಪ್ರಕಾರವಾಗಿ:—

ಏನು ಸಿದ್ಧಿಯುಪಾಧ್ಯರಿದ್ದಿರಿ । ಧೇನುಧನುವಿಂಗಲ್ಲಲೇತಾ ।
ನೇನುಮನದಂಘವಣೆ ಬಯಸಿದಿರೇನಿತಂಬಿನಿಯಾ ॥
ವೈನತೇಯನ ವಿಗಡಿಸಿದ ವಿಷ । ವೇನು ಸದರವೂ! ಹಾಪಡಿಗರಿಗಿ
ದೇನು ನಿಮ್ಮುತ್ಸಾಹವೆಂದುದು ಧೂರ್ತವಟುನಿಕರ ॥ (ಮಹಾಭಾರತ)

ಮಾತನಾಡಿತೋ ತದ್ವತ್ ಇಲ್ಲಿಯಾದರೂ ರಾಘವೇಂದ್ರಾಚಾರ್ಯರಿಗೆ ಅನೇಕರು ಅನೇಕ ಮಾತುಗಳನ್ನಾಡಿದರು. ಆದರೇನು? ಅವರು ಹಳ್ಳೀ ಸತ್ವಶೀಲರು ದೃಢಚಿತ್ತವುಳ್ಳವರು. ಜನರಾಡಿದ ಮಾತನ್ನು ಹಚ್ಚಿಕೊಳ್ಳಲಿಲ್ಲ ಸೀತಾಪತಿಯು ಮನಸಿಗೆ ಬಂದಂತಾಗಲಿ ಎಂದಿಷ್ಟೇ ನುಡಿದು ಸುಮ್ಮನಾದರು ಆಗ ಮಹಾನುಭಾವರಾದ ಶ್ರೀಗಳವರು ಸಂತೋಷದಿಂದ ಆಚಾರ್ಯರನ್ನು ಮುಂದಕ್ಕೆ ಕರೆಯಲು, ಅವರು ಯತಿವರರಿಗೆ ಹಸ್ತಲಾಘವವನ್ನು ಕೊಟ್ಟು ಖುಗ್ಬಾಷ್ಪ ಪಠಣಮಾಡುತ್ತ ಗಿರ್ಯಾರೋಹಣ ಮಾಡಿದರು. ಶ್ರೀಗಳವರಿಗಾದ ಸಂತೋಷವನ್ನು ಹೇಳತೀರದು. ಅವರು ಸಂತೋಷಭರದಲ್ಲಿ ರಾಘವೇಂದ್ರಾಚಾರ್ಯರ ಕೊರಳಿಗೆ ತುಲಸೀಮಾಲೆಯನ್ನು ಹಾಕಿ:—ಮುಂದೆ ನೀವೇ ಶ್ರೀರಾಮದೇವರ ಪೂಜೆಗೆ ಯೋಗ್ಯರೆಂದು ಹೇಳಿದರು; ಮತ್ತು ಅ[illegible]ತಿ ತಾವು ವೃಂದಾವನಸ್ಥರಾಗುವ ಮುಂಚೆ ಇವರಿಗೇ ಸಂಸ್ಥಾನವನ್ನೊಪ್ಪಿಸಿ ಸತ್ಯಸಂಧರೆಂಬ ಹೆಸರನ್ನಿಟ್ಟರು. ಇವರೇ ಪ್ರಲ್ಹಾದಾಂಶರಾದ ಶ್ರೀಮದ್ರಾಘವೇಂದ್ರಸ್ವಾಮಿಗಳವರೆಂದು ಬೇರೆ ಹೇಳಲಿಕ್ಕೆ ಬೇಡ. ಅಂದಮೇಲೆ ಇವರ ಮಾಹಾತ್ಮೆಯನ್ನು ಕೇಳುವದೇನು? ಪರಮಾತ್ಮನು ಬ್ರಹ್ಮಚಾರಿಯ ರೂಪದಿಂದ ಇವರಿಗೆ (ಸತ್ಯಸಂಧರಿಗೆ)ಪ್ರತ್ಯಕ್ಷ ದರ್ಶನ ಕೊಟ್ಟುಬಿಟ್ಟನು! ಹಿಮ್ಮೆ ಕಾಶಿಯಲ್ಲಿ ಭಾಗೀರಥಿಯನ್ನು ಸ್ತೋತ್ರಮಾಡಲಾಗಿ ಭಾಗೀರಥಿಯು ಹೆಂಗಸಿನ ರೂಪದಿಂದ ಬಂದು ಇವರ ಸೇವೆಯನ್ನು ಸ್ವೀಕರಿಸಿದಳು. ಇಂಥಾ ಮಹಿಮಾಶಾಲಿಗಳಾದ ಸತ್ಯಸಂಧರು ಹನ್ನೊಂದು ವರ್ಷ ಸಂಸ್ಥಾನ ವಾಳಿ ತಮ್ಮ ಬಯಕೆಯನ್ನು ಪೂರ್ಣಮಾಡಿಕೊಂಡರು. ಇವರ ವೃಂದಾ

ವನವು ಮಹಿಷಿಯಲ್ಲಿದೆ. ಇವರ ವಂಶದವರು ಮಹಿಷೀ ಆಚಾರ್ಯ ರೆಂದೇ ಈಗಲೂ ಕರೆಯಲ್ಪಡುವರು. ಅಹಾ! ಪರಮಾತ್ಮನ ಪ್ರೀತಿಗೆ ಪಾತ್ರರಾದವರು ಧನ್ಯರು! ಧನ್ಯರು!!

೪ ಅದರ್ಶನ—ಈ ರೀತಿಯಾಗಿ ಶ್ರೀಮದ್ರಾಘವೇಂದ್ರ ಗುರುಗಳು ೫೦ ವರ್ಷ ಸಂಸ್ಥಾನವನ್ನಾಳಿ ಶ್ರೀಯೋಗೀಂದ್ರರೆಂಬವರಿಗೆ ಸಂಸ್ಥಾನವ ನ್ನೊಪ್ಪಿಸಿ ತಾವು ವೃಂದಾವನದಲ್ಲಿ ಪ್ರವೇಶಿಸಬೇಕೆಂದು ಸಿದ್ಧರಾದರು. ಶಿಷ್ಯ ಮಂಡಲಿಗೂ ದಿವಾನ ವೆಂಕಟಪಂತನಿಗೂ ಅಪಾರವಾದ ದುಃಖವಾ ಯಿತು. ರಾಯರು ಅವರೆಲ್ಲರನ್ನೂ ಸಾಂತ್ವ ವಚನಗಳಿಂದ ಸಂತೈಸಿ:— 'ನಾವು ಈಗ ಅದರ್ಶನರಾದಾಗ್ಯೂ ಏಳುನೂರು ವರ್ಷ ವೃಂದಾವನ ದಲ್ಲಿದ್ದು ನಿಮ್ಮ ಬಯಕೆಗಳನ್ನು ಕೈಗೂಡಿಸುವೆವು.' ಹೀಗೆಂದು ಹೇಳಿ ಶಾ. ಶಕೆ ೧೫೯೩ನೇ ಶ್ರಾವಣವದ್ಯ ದ್ವಿತೀಯಾ ಗುರುವಾರ ದಿವಸ ಸಮಸ್ತ ವೈದಿಕ-ಲೌಕಿಕ ಶಿಷ್ಯ ಮಂಡಲಿಯ ಎದುರಿಗೆ ಸಶರೀರವಾಗಿ ವೃಂದಾವನ ದಲ್ಲಿ ಪ್ರವೇಶಮಾಡಿ ಬಿಟ್ಟರು. * ಮಂಗಲವಾದ್ಯಗಳು ಭೋರ್ಗರೆಯು ತ್ತಿದ್ದವು. ಬ್ರಾಹ್ಮಣರು ವೇದಘೋಷ ಮಾಡುತ್ತಿದ್ದರು. ಸುವಾಸಿನಿ ಯರು ಗಾಯನ ಮಾಡುತ್ತಿದ್ದರು. ಕೂಡಲೆ ವೆಂಕಟಪಂತನೆ ಮೊದಲಾ ದವರು ವೃಂದಾವನವನ್ನು ಮುಚ್ಚಿಸಿ ಶ್ರೀಮದ್ರಾಘವೇಂದ್ರತೀರ್ಥ ಜಯ! ಶ್ರೀಗುರು ಸಾರ್ವಭೌಮ ಜಯ! ಎಂದು ರಾಯರನ್ನು ನುತಿಸುತ್ತಿದ್ದರು.

ಹೀಗೆ ಸಶರೀರರಾಗಿ ವೃಂದಾವನಸ್ಥರಾದ ಗುರುಗಳನ್ನು ಸಾಕ್ಷಾತ್ತು ದೇವತೆಗಳೆಂದೇ ಹೇಳಲು ಸಂದೇಹವೇನು? ಇಂಥಾ ದೇವಾಂಶಸಂಭೂತ ರಾದವರ ಸಮಾಗಮವನ್ನು ಹೊಂದಿದ ಆ ಕಾಲದ ಶಿಷ್ಯ ಮಂಡಲಿಯು ಧನ್ಯವಾದುದಲ್ಲವೇ?

ಲೋಕದಲ್ಲಿ ಸಾಧುಸಮಾಗಮಕ್ಕೆ ಸರಿಯಾದದ್ದು ಇನ್ನಾವುದಿರು ವದೋ ಕಾಣೆವು ಈ ಸಾಧು ಸಮಾಗಮದಿಂದ ಎಂತಹ ಫಲವಾಗುತ್ತ

* ಈ ವಿಷಯವನ್ನು ಅನೇಕ ದಾಸರು ಹೇಳಿಕೊಂಡಿರ ವರು;—

೧ ತುಂಗಾತೀರಮಂತ್ರಾಲಯದಲ್ಲಿ ಶ್ರಾವಣ ಬಹುಳ |ಮಂಗಳಬಿದಿಗೆಯಲ್ಲಿ ನಿವಾಸರಾದರು ಸುವ್ವಿ||
ಸುವ್ವಿ ಸುವ್ವಾಲೆ | ಸುವ್ವಿಸಾಧ್ವಿಯರು ರಾಘವೇಂದ್ರರ ಪಾಡಿ || (ಪ್ರಾಣೇಶ ವಿಠ್ಠಲದಾಸರು)

೨ ಸುವಿರೋಧಿ ವತ್ಸರೆ ಶ್ರಾವಣಪರದ್ವಿತೀಯಾ | ಕವಿವಾರ ತುಂಗಭದ್ರಾತೀರಗಾ ||
ನವಸುಮಂತ್ರಾಲಯದಿದೇಹವನುಬಿಟ್ಟು ವಾ | ಧವನಪುರಕ್ಕೈದಿದಮಹಾತ್ಮರಿವರೆಂದು ||೧||
ವಂದಿಸುವೆ ಗುರು ರಾಘವೇಂದ್ರಾರ್ಯರ || (ಜಗನ್ನಾಥ ದಾಸರು)

ದೆಂಬದನ್ನು ಸುಭಾಷಿತಕಾರರು ಹೀಗೆ ಹೇಳಿಕೊಂಡಿರುವರು:—

ವಿವೇಕಃ ಪರಮೋದೀಪೋ ಜಾಯತೆ ಸಾಧುಸಂಗಮಾತ್ ||
ಮನೋಹರೋಜ್ವಲೋನೂನಂ ಅಸೇಕಾದಿವಗುಚ್ಛಕಃ ||

(ನೀರು ಹುಯ್ಯೋಣದರಿಂದ ಮನೋಹರವಾಗಿಯೂ, ಪ್ರಕಾಶಮಾನವಾಗಿಯೂ ಇರುವ ಪುಷ್ಪಗುಚ್ಛವು ಹುಟ್ಟುವಂತೆ, ಸಾಧುಸಮಾಗಮದಿಂದ ವಿವೇಕವೆಂಬ ಸರ್ವೋಕೃಷ್ಟವಾದ ದೀಪವು ಹುಟ್ಟುವದು) ಆದ್ದರಿಂದಲೇ—'ತ್ಯಜ ದುರ್ಜನಸಂಸರ್ಗಂ ಭಜಸಾಧುಸಮಾಗಮಂ|' ಎಂಬದಾಗಿ ಹಿರಿಯರು ಉಪದೇಶ ಮಾಡಿರುವರು.

ಇನ್ನು ಇದನ್ನೇ ದಾಸಕೂಟಸ್ಥರು--ಎಷ್ಟು ಮಾರ್ಮಿಕರೀತಿಯಿಂದ ಕನ್ನಡ ಭಾಷೆಯಲ್ಲಿ ಹೇಳಿದ್ದಾರೆ ನೋಡಿರಿ:—

೧ ಕೆಂಡಕಾಣದೆ ಮುಟ್ಟಿದರು ಸರಿ | ಕಂಡು ಮುಟ್ಟಲುದಹಿಸಲಿಪ್ಪುದೆ|
ಪುಂಡರೀಕದಳಾಯತಾಕ್ಷನ ವಿಮಲಪದಪದ್ಮಾ ||
ಬಂಡುಣಿಗಳೆಂದೆನಿಪಭಕ್ತರ | ಹಿಂಡುನೋಡಿದ ಮಾತ್ರದಲಿ ತನು|
ದಿಂಡುಗೆಡಹಿದ ನರನೆ ಪಾವನ ಮಾಳ್ಪರಾಕ್ಷಣದಿ || (ಜಗನ್ನಾಥದಾಸರು)
೨ ಹರಿದಾಸರಿದ್ದ ಸ್ಥಳಾವರಕಾಶಿಮೊದಲಾದ |ಕುರುಕ್ಷೇತ್ರಕಿಂತ ಅಧಿಕವೊ|
ಸುರಋಷಿಮುನಿಗಳು ಅಲ್ಲಿಹರು ವೈಕುಂಠಕ್ಕೆ ಸರಿಯೆಂತೆಂಬರೋ ||
(ಶ್ರೀದವಿಠಲರು)
೩ ಗಂಗಿಮಿಂದರೆ ಮಲವು ಹಿಂಗೊದಲ್ಲದೆ |
ರಂಗ ಒಲಿಯುನೊ ಭಕತಸಂಗದೊರೆಯದೆ || (ಕಲ್ಲೂರಸುಬ್ಬಣ್ಣದಾಸರು)
೪ ಅರಸುಮಕ್ಕಳು ನಾಡತಳವಾ|ರರನು ಕೊಂಬರೆ ನಿನ್ನ ಪದಯುಗ|
ಶರಣರಾರಿಂಗಂಜುವರು ವಿಶ್ವೇಶ್ವರೇಶ್ವರರಾ ||
ಶಿರವನೊದದಾಡುವರು ಪಾವನ | ಚರಿತರೊಲಿದಂದದಲಿ ಲೋಕೋ |
ತ್ತರವಿಹಾರರು ಚರಿಸುತಿಹುದೀ ಧರೆಗೆಹಿತವೆಂದ||
(ನಿತ್ಯಾತ್ಮಶುಕ-ಭಾಗವತ)

ಈ ರೀತಿಯಾಗಿ ಹರಿಮಹಿಮೆಗಿಂತಲೂ ಹರಿಶರಣರ ಮಹಿಮೆಯನ್ನೇ ಹೆಚ್ಚಾಗಿ ವರ್ಣಿಸಿರುವದರಿಂದಲೂ ಅದು ಅನೇಕ ಕಾಲದಲ್ಲಿ ಅನೇಕರ ಅನುಭವಕ್ಕೆ ಬಂದ ವಿಷಯವಾದ್ದರಿಂದಲೂ ಅಲ್ಪಾಯುಷಿಗಳೂ ಮಂದಮತಿಗಳೂ ಆದ ನಾವು ಇಂಥಾ ಮಹಾನುಭಾವರನ್ನು ಸ್ತೋತ್ರ

ಮಾಡಿ ಕಡೆಗೆ ಅಂಧವರ ಚರಿತ್ರಾಮೃತವನ್ನಾದರೂ ಪಾನಮಾಡಿ ಪುನೀತರಾಗುವದು ಅವಶ್ಯಕರ್ತವ್ಯವಾಗಿರುವದು. ಹಾಗೂ ಮನುಷ್ಯಜನ್ಮವನ್ನು ಧರಿಸಿದ್ದಕ್ಕೆ ಸಾರ್ಥಕವೂ ಆಗುವದು.

ಹಾಗಾದರೆ ಈಗಲೇ ನಡೆಯಿರಿ. ಹಿಂದಕ್ಕೆ ಮಹಾನುಭಾವರಾದ ಶ್ರೀಜಗನ್ನಾಥದಾಸರು ಪರಮಾತ್ಮನನ್ನು ಏನೆಂದು ಬೇಡಿಕೊಂಡರೋ ನಾವು ಅದನ್ನೇ ಬೇಡಿಕೊಳ್ಳೋಣ! ಪುನಃ ಪುನಃ ಪ್ರಾರ್ಥಿಸೋಣ!

ಮೂಢಮಾನವ ಎಲ್ಲ ಕಾಲದಿ। ಬೇಡಿಕೊಂಬಿನಿತೆಂದು ದೈನ್ಯದಿ।
ಬೇಡದಂದದಿ ಮಾಡು ಪುರುಷಾರ್ಥಗಳ ಸ್ವಪ್ನದಲಿ॥
ನೀಡುವಡೆ ನಿನ್ನಮಲಗುಣಕೊಂ। ಡಾಡಿ ಹಿಗ್ಗುವ ಭಾಗವತರೊಡ।
ನಾಡಿಸೆನ್ನನು ಜನುಮಜನುಮಗಳಲ್ಲಿ ಮರೆಯದಲೆ॥(ಹರಿಕಥಾಮೃತಸಾರ)

ಭೋ! ಕರುಣಾನಿಧೇ! ಭಕ್ತವತ್ಸಲಾ! ಭಗವಂತಾ! ನಮ್ಮ ಪ್ರಾರ್ಥನೆಯನ್ನು ಲಾಲಿಸು. ಸತ್ಸಮಾಗಮವನ್ನು ಕೊಡು

ನೀರಂಗಡಿನೀಂನಳಧಾ। ತ್ರೀರಮಣನೆ ನಿನ್ನ ಪಾಲ್ಗಡಾಭೈಮಿವಲಂ॥
ನೀರಕ್ಷೀರವಿಭೇದಕ। ನೀರಾಜಮರಾಳನೊಂದಿಸುತ್ತಿರ್ದುದು ಚಿತ್ರಂ॥
(ದಮಯಂತಿ ಸ್ವಯಂವರ)

[ಎಲೈ ನಳನೇ, ನೀನು ನೀರಂ-ನೀರು (ಸುಂದರನು) ಭೈಮಿಯು ನಿನ್ನ ಪಾಲ್ (ಹಾಲು-ಪಾಲಿನವಳು) ಇಂಥ ನೀರು-ಹಾಲುಗಳನ್ನು ರಾಜಹಂಸವು ಕೂಡಿಸಿಬಿಟ್ಟದ್ದು ಬಹಳ ಆಶ್ಚರ್ಯವು ಯಾಕಂದರೆ ಹಂಸವು ನೀರನ್ನೂ ಹಾಲನ್ನೂ ಬೇರೆ ಬೇರೆ ಮಾಡುವ ಗುಣವುಳ್ಳದ್ದು )

ಎಂಬಂತೆ ಜಲರೂಪಿಯಾದ ಕ್ಷುದ್ರಾದಪಿ ಕ್ಷುದ್ರರಾದ ನಮ್ಮನ್ನು ಸಜ್ಜನರ ಸಹವಾಸವೆಂಬ ಕ್ಷೀರಸಾಗರದಲ್ಲಿ ಮುಳುಗಿಸಿ ಬಿಡು. ಇದಕ್ಕೂ ಹೆಚ್ಚಿನದಿನ್ನೇನನ್ನು ನಿನ್ನಲ್ಲಿ ಬೇಡಿಕೊಳ್ಳೋಣ!

ಬಡವನ ಮನೋರಥವ ಪೂರೈಸು ಹರಿಯೆ। ಒಡೆಯ ನೀನಲ್ಲದೆ
ಪೂರೈಸುವವರಿಲ್ಲ॥ (ವ್ಯಾಸತತ್ವಜ್ಞರು)

ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯಚ॥
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ॥

॥ಸಮಾಪ್ತೋಽಯಂ॥



# ಪರಿಶಿಷ್ಟ. (ಅ)



## ಶ್ರೀಮದ್ರಾಘವೇಂದ್ರಸ್ವಾಮಿಗಳವರ ಮಠದ ಗುರುಪರಂಪರಾಸ್ತೋತ್ರ.



ಹರಿಃ ಓಂ ||

ಶ್ರೀಶಾದಿದೇವತಾರಂಭಾಂ ಶ್ರೀಮನ್ಮಧ್ವಸುಮಧ್ಯಮಾಂ |
ಸಾಕ್ಷಾನ್ಮದ್ಗುರುಪರ್ಯಂತಾಂ ವಂದೇ ಗುರುಪರಂಪರಾಂ ||
ಶ್ರೀಮದ್ಧಂಸಂ ವಿಧಾತಾರಂ ಸನಕಾದಿಗುರೂನಪಿ |
ದೂರ್ವಾಸಸಂ ಜ್ಞಾನನಿಧಿಂ ಗರುಡವಾಹನಸಂಜ್ಞಿತಂ ||
ಕೈವಲ್ಯತೀರ್ಥಂ ಜ್ಞಾನೇಶಂ ಪರತೀರ್ಥಗುರುಂ ತಥಾ ||
ಸತ್ಯಪ್ರಜ್ಞಗುರುಂ ಪ್ರಾಜ್ಞಂ ಚಾನ್ಯಾನ್ ಸನಕವಂಶಜಾನ್ ||
ನತ್ವಾಚ್ಯುತಪ್ರೇಕ್ಷತೀರ್ಥಂ ಮಧ್ವತೀರ್ಥಸ್ಯ ಸದ್ಗುರುಂ |
ಶ್ರೀಮಧ್ವತೀರ್ಥನಾಮಾನಂ ಭಾಷ್ಯಕಾರಂ ಭಜೇಽನಿಶಂ ||



ಬ್ರಹ್ಮಾಂತಾ ಗುರವಃ ಸಾಕ್ಷಾದಿಷ್ಟಂ ದೈವಂ ಶ್ರಿಯಃ ಪತಿಃ |
ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ ||೧||
ಪೂರ್ಣಪ್ರಜ್ಞಕೃತಂ ಭಾಷ್ಯಮಾದೌ ತದ್ಭಾವಪೂರ್ವಕಂ |
ಯೋವ್ಯಾಕರೋನ್ನಮಸ್ತಸ್ಮೈ ಪದ್ಮನಾಭಾಖ್ಯಯೋಗಿನೇ ||೨||
ಸಸೀತಾಮೂಲರಾಮಾರ್ಚಾ ಕೋಶೇ ಗಜಪತೇಃ ಸ್ಥಿತಾ |
ಯೇನಾನೀತಾ ನಮಸ್ತಸ್ಮೈ ಶ್ರೀಮನ್ನೃಹರಿಭಿಕ್ಷವೇ ||೩||
ಸಾಧಿತಾಖಿಲಸತ್ತತ್ವಂ ಬಾಧಿತಾಖಿಲದುರ್ಮತಂ |
ಬೋಧಿತಾಖಿಲಸನ್ಮಾರ್ಗಂ ಮಾಧವಾಖ್ಯಯತಿಂ ಭಜೇ ||೪||
ಯೋಽವಿದ್ಯಾರಣ್ಯವಿಪಿನಂ ತತ್ವಮಸ್ಯಸಿನಾಚ್ಛಿನತ್ |
ಶ್ರೀಮದಕ್ಷೋಭ್ಯತೀರ್ಥಾಯ ನಮಸ್ತಸ್ಮೈ ಮಹಾತ್ಮನೇ ||೫||

ಯಸ್ಯ ವಾಕ್ಯಾಮೃತೇನ ಸ್ವಃ ಕಾಮಿತಾರ್ಥಾನ್ ಪ್ರಯಚ್ಛತಿ ।
ಸೇವೇ ತಂ ಜಯ ಯೋಗೀಂದ್ರಂ ಕಾಮಬಾಣಭಿದಂ ಸದಾ ॥೭॥
ಮಾಧ್ವದಪ್ವೈತ್ಯಂಧಕಾರಪ್ರದ್ಯೋತನಮಹರ್ನಿಶಂ ।
ವಿದ್ಯಾಧಿರಾಜಂ ಸಗುರುಂ ಹೃದ್ಯಾಮಿತಗುರುಂ ಭಜೆ ॥೭॥
ವೀಂದ್ರಾರೂಢಪದಾಸಕ್ತಂ ರಾಜೇಂದ್ರಮುನಿಸೇವಿತಂ ।
ಶ್ರೀಕವೀಂದ್ರಗುರುಂ ವಂದೆ ಭಜತಾಂ ಚಂದ್ರಸನ್ನಿಭಂ ॥೮॥
ವಾಸುದೇವಪದದ್ವಂದ್ವವಾರಿಜಾಸಕ್ತಮಾನಸಂ ।
ಪದವ್ಯಾಖ್ಯಾನಕುಶಲಂ ವಾಗೀಶಯತಿಮಾಶ್ರಯೆ ॥೯॥
ದ್ಯುಮಣ್ಯಭಿಜನಾಬ್ಧೀಂದು ರಾಮವ್ಯಾಸಪದಾರ್ಚಕಃ ।
ರಾಮಚಂದ್ರಗುರುರ್ಭೂಯಾತ್ಕಾಮಿತಾರ್ಥಪ್ರದೋ ಮಮ ॥೧೦॥
ಆಕೇರಳಂ ತಥಾ ಸೇತುಮಾಗಂಗಂ ಚ ಹಿಮಾಲಯಂ ।
ನಿರಾಕೃತಾದ್ವೈತಶೈವಂ ವಿಬುಧೇಂದ್ರಗುರುಂ ಭಜೆ ॥೧೧॥
ಸಪ್ತರಾತ್ರಂ ಕೃಷ್ಣವೇಣ್ಯಾಮುಷಿತ್ವಾ ಪುನರುತ್ಥಿತಂ ।
ಜಿತಾಮಿತ್ರಗುರುಂ ವಂದೆ ವಿಬುಧೇಂದ್ರಕರೋದ್ಭವಂ ॥೧೨॥
ಪರೈರಪಹೃತಾಮೂಲರಾಮಾರ್ಚಾ ಗುರ್ವನುಗ್ರಹಾತ್ ।
ಯೇನಾನೀತಾ ನಮಸ್ತಸ್ಮೈ ರಘುನಂದನಭಿಕ್ಷವೆ ॥೧೩॥
ಯಶ್ಚಕಾರೋಪವಾಸೇನ ತ್ರಿವಾರಂ ಭೂಪ್ರದಕ್ಷಿಣಂ ।
ತಸ್ಮೈ ನಮೋ ಯತೀಂದ್ರಾಯ ಶ್ರೀಸುರೇಂದ್ರತಪಸ್ವಿನೆ ॥೧೪॥
ಶ್ರೀಮಧ್ವಜಯರಾಜೇಂದ್ರವಿಬುಧೇಂದ್ರಾರ್ಯವಂಶಜಂ ।
ಸುರೇಂದ್ರಕರಸಂಜಾತಂ ವಿಜಯೀಂದ್ರಗುರುಂ ಭಜೆ ೧೫॥
ಕುಶಾಗ್ರಮತಯೇ ಭಾನುದ್ಯುತಯೆ ವಾದಿಭೀತಯೇ ।
ಆರಾಧಿತಶ್ರೀಪತಯೇ ಸುಧೀಂದ್ರಯತಯೇ ನಮಃ ॥೧೬॥
ದುರ್ವಾದಿಧ್ವಾಂತರವಯೆ ವೈಷ್ಣವೇಂದೀವರೇಂದವೆ ।
ಶ್ರೀರಾಘವೇಂದ್ರಗುರವೇ ನಮಃ ಕಾರುಣ್ಯಸಿಂಧವೆ ॥೧೭॥
ಸಾಂದ್ರಬೋಧಾಯ ಶಾಸ್ತ್ರೇಷು ನಿಸ್ತಂದ್ರಮನಸೆ ಹತಾ ।
ರಾಘವೇಂದ್ರಕುಮಾರಾಯ ನಮೋ ಯೋಗೀಂದ್ರಯೋಗಿನೆ ॥೧೮॥
ರಾಘವೇಂದ್ರಾರ್ಪಿತಧಿಯೆ ಯೋಗೀಂದ್ರಾರ್ಪಿತಸೂನವೆ ।
ಶ್ರೀಮತ್ಸುಧೀಂದ್ರಯತಯೆ ಸುತಪೋನಿಧಯೆ ನಮಃ ॥೧೯॥

ಪೂರ್ಣಬೋಧಮತಾಂಬೋಧಿ ಪೂರ್ಣೇಂದುಮಕಳಂಕಿನಂ ।
ಸುಜನಾಂಬುಧಿಭಾಸ್ವಂತಂ ಸುಮತೀಂದ್ರಗುರುಂ ಭಜೆ ॥೨೦॥
ಕೃಪಾರಸಾಮೃತಾಂಬೋಧಿಮಪಾರಮಹಿಮಾನ್ವಿತಂ ।
ಉಪಾಸ್ಮಹೆ ತಪೋಮೂರ್ತಿಮುಪೇಂದ್ರಗುರುಪುಂಗವಂ ॥೨೧॥
ಮಂದಾಜನಸಂದೋಹಮಂದಾರತರುಸನ್ನಿಭಂ ।
ವೃಂದಾರಕಗುರುಪ್ರಖ್ಯಂ ವಂದೇ ವಾದೀಂದ್ರದೈಶಿಕಂ ॥೨೨॥
ವಸುಧಾತಲವಿಖ್ಯಾತಂ ವೈರಾಗ್ಯಾದಿಗುಣಾನ್ವಿತಂ ।
ವೇದವೇದಾಂಗಚತುರಂ ವಸುಧೇಂದ್ರಗುರುಂ ಭಜೆ ॥೨೩॥
ವಾದೇ ವಿಜಯಶೀಲಾಯ ವರದಾಯ ವರಾರ್ಥಿನಾಂ ।
ವದಾನ್ಯಜನಸಿಂಹಾಯ ವರದೇಂದ್ರಾಯತೆ ನಮಃ ॥೨೪॥
ಭೂದೇವವಂದ್ಯಪಾದಾಬ್ಜ ಭೂತಿಮಂತಮಭೀಷ್ಟದಂ ।
ಭೂತಲೇ ಸಾಧುವಿಖ್ಯಾತಂ ಭುವನೇಂದ್ರಗುರುಂ ಭಜೆ ॥೨೫॥
ಸುಧಾಸೇವಾಸಮುದ್ಭೂತಸುಖಸಂವಿತ್ಸಮಾಶ್ರಯಃ ।
ಸುಜನಾಭೀಷ್ಟದಾತಾರಂ ಸುಬೋಧೇಂದ್ರಗುರುಂ ಭಜೆ ॥೨೬॥
ಸುಯುಕ್ತಿಜಾಲಸಹಿತಂ ಸುಜನಾಮೋದಕಾರಿಣಂ ।
ಸುರೋತ್ತಮಗುರುಪ್ರಖ್ಯಂ ಸುಜನೇಂದ್ರಗುರುಂ ಭಜೆ ॥೨೭॥
ಸುಧಾಸಾರಾರ್ಥತತ್ವಜ್ಞಂ ಸುಧರ್ಮಸಮಂ ಸತಾಂ ।
ಸುರಾಧಿಪಗುರುಪ್ರಖ್ಯಂ ಸುಜ್ಞಾನೇಂದ್ರಗುರುಂ ಭಜೆ ॥೨೮॥
ಸುಧಾಂಶುಮಿವ ಸಂಭೂತಂ ಸುಜ್ಞಾನೇಂದ್ರಸುಧಾಂಬುಧೌ ।
ಸುಧೀಸಂದೋಹಸಂಸೇವ್ಯಂ ಸುಧರ್ಮೇಂದ್ರಗುರುಂ ಭಜೆ ॥೨೯॥
ಸುಧರ್ಮೇಂದ್ರಕರಾಬ್ಜೋತ್ಥಂ ಸುವಿದ್ವನ್ಮಣಿರಾಜಿತಂ ।
ಸುಮೃಷ್ಟಾನ್ನಪ್ರದಾತಾರಂ ಸುಗುಣೇಂದ್ರಗುರುಂ ಭಜೆ ॥೩೦॥
ಸುಧಾಜಿಜ್ಞಾಸಯಾ ಸರ್ವವಿವಿಧಾನಂದದಾಯಕಂ ।
ಸುಪ್ರಜ್ಞೇಂದ್ರಗುರುಂ ವಂದೆ ಸದಾ ವಿದ್ಯಾಗುರೂನ್ಮಮ ॥೩೧॥
ಸುವಿದ್ವತ್ಕಮಲೋಲ್ಲಾಸಂ ಮಾರ್ತಂಡಂ ಸುಗುಣಾಕರಂ ।
ಸಚ್ಛಾಸ್ತ್ರಾಸಕ್ತಹೃದಯಂ ಸುಕೃತೀಂದ್ರಗುರುಂ ಭಜೆ ॥೩೨॥

॥ ಇತಿ ಶ್ರೀಗುರುಪರಂಪರಾಸ್ತೋತ್ರಂ ಸಂಪೂರ್ಣಂ ॥

# ಪರಿಶಿಷ್ಟ [ಬ]

—(೧)—

## ಮನೋಹರವಿಠ್ಠಲ ವಿರಚಿತ ಶ್ರೀಗುರುರಾಘ ವೇಂದ್ರಸ್ವಾಮಿಗಳ ಪ್ರಾಕೃತಸ್ತೋತ್ರ.



ವಾರ್ಧಿಕ ಷಟ್ಪದಿ.

ಶ್ರೀಜನಕಜಾರಮಣನಂತಭಾಸ್ಕರ ಸೋಮ |
ತೇಜರಾಜೀವ ಭವಭಯವಿನುತಭಕ್ತಸುರ-|
ಭೂಜಸದ್ಗುಣಸಾಂದ್ರರವಿಕುಲಾಂಬುಧಿಚಂದ್ರರಾಜೇಂದ್ರರಾಘವೇಂದ್ರಾ ||
ರಾಜಿಸುವ ತವ ನಾಮಧರಿಸಿ ಪೂಜಿಸುವ ಗುರು|
ರಾಜ ಮಂತ್ರಾಲಯನಿವಾಸ ನಮಲಸ್ತೋತ್ರ |
ರಾಜಿಯೊಳ್ ವಿರಚಿಸುವೆ ಕನ್ನಡದಿ ಸನ್ಮತಿಗೆ ಮಂಗಳವನಿತ್ತು ಸಲಹೋ||
ಶ್ರೀಪೂರ್ಣ ಬೋಧಗುರುತೀರ್ಥಪಯೋನಿಧಿಯ |
ತಾಪಾರಗಂಡು ಸ್ಮರರಿಪುಮಾಕ್ಷವಿಷಮಾಂಬ-|
ಕಾ ಪಿನಾಕಿಯುಶಿರವಕಾರಿ ಪೂರ್ವೋತ್ತರದ ಸಿದ್ಧಾಂತಮೆಂಬೂರ್ಮಿಯಾ||
ಆ ಪರಮಹಂಸಚಾರದಿ ದೇವಾಳಿಯಿಂ ಮ|
ಹಾಪೂಜೆಯಿಂದ ಸೇವಿತನಾದ ಪರಮಾತ್ಮ |
ನಾ ಪಾದಪದ್ಮಗಳ ರಜವನ್ನು ಪ್ರಕ್ಷಾಲನಂ ಗೆಯ್ದು ಲಗ್ನವಾಗೀ ||೨||
ಜೀವೇಶ ಭೇದಗುಣಪೂರ್ಣತ್ವನೀಚೋಚ್ಚ |
ಭಾವದಿ ಜಗತ್ಸತ್ಯವೆಂಬ ಪ್ರಮುಖ ನ-|
ಕ್ರಾವಳಿಸಮೇತದಿಂ ದುರ್ವಾದಿಕುಲಬಸ್ತ್ರಗಳ ನುಂಗಿ ಜೀರ್ಣಗೈದಾ ||
ಭೂವಲಯಕೆಲ್ಲ ಗುರುರಾಘವೇಂದ್ರಾರ್ಯ ವಾ-|
ಗ್ದೇವನದಿಸರ್ವದಾ ಭಕ್ತರಘಮಂ ಕಳೆದು |
...ನಸಂ ಗೆಯು ತಾಪತ್ರಯವ ಶಾಂತಿಯುಂ ಮಾಡಿನಿರ್ಮಲವೆಸಗಲಿ||೩||

ಪರಿಪೂರ್ಣಕಾಂತಿಯಿಂ ಬುಧಗೆ ಗುರುಜನಕನಾ ।
ಗಿರುವ ಶಶಿಗುದಿಸಲಾಸ್ಪದಕ್ಷೀರಶರಧಿಯೊಳು ।
ನೆರೆದು ಮಾರಾರಿಜಾಹ್ನವಿನಾತ್ಕಮುಕ್ತಣನ ಜಟಾಮುಕುಟಮಂ ಚುಂಬಿಸಿ ॥
ಚರಿಪಹಂಸಗಳು ಪೂರ್ವೋತ್ತರ ತರಂಗಗಳ ।
ನೆರವಿನಿಂ ದೇವಾಲಿಯಿಂವ ಸೇವಿಕವಾದ ।
ಪರಮಾತ್ಮನಂಘ್ರಿಕಮಲದೊಳುದಿಸಿ ಪ್ರಕ್ಷಾಲನಂ ಗೆಯ್ದು ಲಗ್ನವಾಗಿ॥೪॥
ಚರಿಪ ಜೀವಶ್ರೇಷ್ಠ ಭೇದನಂಗೆಯ್ವ ಗುಣ।
ಭರಿತಸತ್ವದಕಿರಿದು ಹಿರಿದಾದ ನಕ್ರಗಳು ।
ಕುರವದಿಂ ಸಂಚರಿಪಜಾಪತಿಗಳಂ ನುಂಗಿ ಘೋರ್ಗರೆದು ತ್ರಿಪಥದಲ್ಲಿ ॥
ಪರಿದು ಪಾವನಗೆಯ್ದು ಗುರುರಾಘವೇಂದ್ರವಾ-।
ಕ್ಸುರತರಂಗಿಣಿ ಶರಣರನುತಾಪ ಪರಿಹರಿಸಿ ।
ಶರಣುಸುಧೆಯನ್ನೆಸಗಿಜನಸ್ವಾಂತರಂದದೋಷಮಂಕಳೆದುನಿರ್ಮಲಗೆಯ್ಕಲಿ ॥

ಭಾಮಿನಿ ಷಟ್ಪದಿ—

ಯತಿವರ ಶ್ರೀರಾಘವೇಂದ್ರನೆ ।
ಸತತ ಸಕಲೇಷ್ಟ ಪ್ರದಾಯಕ ।
ನುತಿಸಿ ತವಪದಕುಂಜಯುಗದಲಿ ಭಕುತಿಮಾಳ್ಪವರಾ ॥
ಅತಿಶಯದ ದೋಷೌಘಪರ್ವತ ।
ತತಿಯ ತರಿದ್ವೈ ದೃಷ್ಟಿವಜ್ರದಿ ।
ಕ್ಷಿತಿಸುರೇಂದ್ರನೆ ಪ್ರೇಮೆಯಿಂದೆನ್ನನವರತ ಸಲಹೈ ॥೬॥
ಹರಿಯ ಪದಪಂಕಜವ ಭಜಿಸಲು ।
ದೊರೆವುದೈ ನಿನಗಖಿಳ ಸಂಪದ ।
ಗುರುವೆ ನೀದೇವಸ್ವಭಾವನು ದಿಟ ಸುರದ್ರುಮದಾ ॥
ತೆರದೊಳೆನ್ನಯ ಮನದಭೀಷ್ಟೆಯ ।
ಕರುಣಿಸುವ ದಾತಾರನಾಗುತ ।
ಪೊರೆದಪುದು ಶ್ರೀರಾಘವೇಂದ್ರನೆ ಸುಗುಣಮಂದಿರನೆ ॥೭॥
ಮೌನಿಮಣಿ ಭವ್ಯ ಸ್ವರೂಪನೆ ।
ದೀನಜನ ಭವದುಃಖತೂಲವಿ- ।
ತಾನಕಗ್ನಿಯುಸಮನೆ ದುಸ್ತರವಾದುಪದ್ರವದಾ ॥

ಹಾನಿಶರಧಿಗೆ ಸೇತುವೆನಿಸುತ |
ಹೀನದುಷ್ಟಗ್ರಹಸುನಿಗ್ರಹ |
ನೀನಲಾಸುಖಧೈರ್ಯಶಾಲಿಯು ಪಾಲಿಸುವುದೆಮ್ಮ ||೮||
ದೋಷರಹಿತನವದ್ಯ ನಿರ್ಮಲ |
ವೇಷನೇ ಪ್ರಾರ್ಥಿಸುವೆ ಜನರಭಿ- |
ಲಾಷೆ ಸಲಿಸುತ ಮೂಕರಿಂಗೆ ಸುಭಾಷೆಕರುಣಿಸುತ ||
ಶೇಷ ವಿದ್ವಜ್ಜನ ಮಹಾವಿ |
ಶೇಷಗುಣಸ್ತುತಿಸುವರು ಮಂಗಳ |
ಶೇಷನಂ ಸೋಲಿಸುವ ವಚನವಿಲಾಸಕಭಿನಮಿಪೆ ||೯||
ಸಕಲಸಂಪದ್ಭಕ್ತಿಸಂತತ |
ಸುಕಲಪಾದ್ಗೇಹದ ಸುಪಾಟವ |
ಭಕುತರಿಗೆ ವಿಜ್ಞಾನಸುಮ್ಮಾನಾದಿಗಳನಿತ್ತು ||
ವಿಕಳಮತಿ ಕಾಯಜದಪಿಳಪಾ- |
ತಕವ ತರಿವುತ ಸಲಹೊ ಗುರುಗಳ |
ಮಕುಟಮಣಿ ಶ್ರೀರಾಘವೇಂದ್ರನೆ ಲೋಕಸುಂದರನೆ ||೧೦||

ವಾರ್ಧಿಕ ಷಟ್ಪದಿ—

ಆವವನು ಪಾದೋದಕವ ಶಿರದಿ ಧರಿಸಿದರೆ |
ದೇವಗಂಗಾದ್ಯಖಿಲ ಮುಖ್ಯ ನದಿಗಳಲಿಸ- |
ದ್ಭಾವದಿಂ ಸ್ನಾನದಾನಂಗಳೆಸಗಿದ ಪುಣ್ಯಮಿತಪುಣ್ಯದಿಟದೊರೆವುದು ||
ಆ ವ್ಯಂಗಸ್ವಾಂಗಶವೃದ್ಧಿಯಾಗಿ ತಾಪಪಾ- |
ಪಾವಲಿಗ್ರಹನಾಶ ಬಂಜೆಸುತರಂ ಪಡೆವ |
ಕೇಳೆಲೆ! ಶ್ರೀರಾಘವೇಂದ್ರಗುರುಗಳಮಹಿಮೆ,ಪೊಗಳುತಶ್ರೈಸಿಭಜಿಪೆ||
ಆವವನಪದಕಂಜರಜದಿ ತನುಭೂಷಿತನೊ |
ಆವನಡಿದಾವರೆಯೊಳಳಿಯಂತೆ ಮನವಿಹುದೊ |
ಆವವನ ಚರಣಾಬ್ಜಕೀರ್ತನೆಗಳಿಂ ವಚನಪರಿಪಕ್ವಮಾಗಿಹದೋ ||
ಈ ವಿಧದೊಳಿಪ್ಪವನ ಸಂದರ್ಶನಂಗಯ್ಯೆ |
ದಾವ ಸಮವಲ್ಲವೆಂದುರಿತ ಕಾನನಕಿನ್ನು |
ದೇವಾಂಶಗುರುಗಳಂ ಪ್ರತ್ಯಕ್ಷಭಜಿಸುವನ ಬಣ್ಣಿಸುವರಾರ್ ಜಗದೊಳು||

ಧರೆಯೊಳಗೆ ವಿಜಯೀಂದ್ರ ಕರಕಮಲಸಂಜಾತ |
ಗುರುಸುಧೀಂದ್ರಾರ್ಯರಾವರಪುತ್ರರಾದ ಯತಿ |
ವರರಾಘವೇಂದ್ರನೆಂಬಭಿಧಾನದಿಂ ಕರೆಸಿ ಶ್ರೀಮಧ್ವಮತಪೆರ್ಚಿಸಿ ||
ಬಿರಿದು ಪಸರಿಸಿ ಸರ್ವತಂತ್ರ ಸ್ವತಂತ್ರರೆನೆ |
ಮೆರೆದ ಮಹಿಮನೆ ಪುತ್ರಸಂಪತ್ಕಳತ್ರಯಶ |
ಪರಮಾಯುಜ್ಞಾನ ಸದ್ಭಕ್ತಿ ಪುಣ್ಯಗಳಿತ್ತು ಹರಿಸಿ ನೀಸಲಹೊ ಎನ್ನ ||೧೩||

ಭಾಮಿನಿ ಷಟ್ಪದಿ—

ವಾದಿಗಳ ಜಯಶೀಲದಲಿ ಪ್ರತಿ |
ವಾದಿಗಳ ಸ್ವಾಂತ ಪ್ರಭೇಧನ |
ಗೆಯ್ದು ಚಂಚಲ ಮಾಳ್ಪಚಿಹ್ನೆಗೆ ಯರಡರಲಿ ಸತತಾ ||
ಆದರವು ಗುರುರಾಘವೇಂದ್ರಗೆ |
ಮೇದಿನಿಯೊಳನ್ಯೋರ್ವರೋರ್ವರು |
ಬೋಧಸರ್ವಸುವಿದ್ಯ ಕುಶಲೋನ್ನತಿ ಸುಗುಣದಲ್ಲಿ ||೧೪||
ಶ್ರೀಶನಪರೋಕ್ಷೀಕರಿಸಿ ಸಂ |
ನ್ಯಾಸವಿಷಯದಿ ಮಾಡಿಕಾಮನ |
ಪೂಶರವುಪೇಕ್ಷಿಸಿಜರಿದು ದೇಹಾದಿಮಮತೆಯನು ||
ಭೂಸುರೋತ್ತಮರಿಂಗಪೇಕ್ಷಿತ |
ರಾಶಿಫಲಗಳ ನೀವನಿಗೆ ಸಮ |
ವೀಶರಧಿ ಮೇಖಲೆಯೊಳಿಲ್ಲವೊ ರಾಘವೇಂದ್ರಂಗೆ ||೧೫||
ಸದ್ದಯಾದಾಕ್ಷಿಣ್ಯ ವಿಷಯದಿ |
ಹೊದ್ದದಿಹವೈರಾಗ್ಯಭಾಗ್ಯ ಸು-|
ಬುದ್ಧಿವಾಕ್ಪಾಟವ ಮುಖಾಂಕಿತ ಸದ್ಗುಣಗಳಲ್ಲಿ ||
ಸಿದ್ಧಿಶಾಪಾನುಗ್ರಹದ ಪ್ರ-|
ಸಿದ್ಧಶಕ್ತಿಗಳಿಂದ ಶೋಭಿಸು |
ತಿದ್ದ ಶ್ರೀಗುರುರಾಘವೇಂದ್ರರಿಗಿಲ್ಲ ಸಮನೋವ- ||೧೬||

ವಾರ್ಧಕ ಷಟ್ಪದಿ—

ಕಪಟಕುಟಿಲಜ್ಞಾನವಿಸ್ಮೃತಿಭ್ರಾಂತಿಕ್ಷ-|
ಯಪಸ್ಮಾರತಂದ್ರಸಂಶಯುವಚಃಕೌಂತ್ಯಬಾ |
ಧಿಪಕಂಪನಾದಿ ಪ್ರಮುಖೇಂದ್ರಿಯಗಳಿಂದುದಿಸಿದತಿ ದೋಷಸಂಘವೆಲ್ಲ ||

ಅಪರಿಮಿತಮಹಿಮ ಶ್ರೀರಾಘವೇಂದ್ರನೆ ನಿನ್ನ |
ಕೃಪೆಯಾಗಲವು ನಾಶವಾಗದಿರ್ದಪವೆ ರಾ |
ಜಿಪ ದಿವ್ಯಸಾಕ್ಷಾತ್ ಸ್ವರೂಪವಂ ಕಂಡವಗೆ ದುರಿತದಟ್ಟುಳಿಯೆತಿಳಿಯೆ||
ಶ್ರೀರಾಘವೇಂದ್ರಾಯ ನಮಃ ಎಂಬ ದಿವ್ಯಾಷ್ಟ |
ಸಾರಾಕ್ಷರದ ಮಂತ್ರದಿಂ ನಿತ್ಯಭಕ್ತಿಯಿಂ |
ದಾರಾಧಿಸುತ ಜಪಿಸಿದವರಿಗಿಷ್ಟಾರ್ಥಕೈಸಾರುವದು ನಿಃಸಂಶಯಾ ||
ಚಾರುತರ ಕೀರ್ತಿಯಿಂ ಶ್ರೀಮಧ್ವಮತಕ್ಷೀರ |
ವಾರಿನಿಧಿ ಚಂದ್ರನೊಳ್ಪೆಚ್ಚಿಸುತ ಲೋಕದೊಳು |
ಸಾರಿಸಿದೆ ನಿರ್ದೋಷಗಮ್ಯಮಹಿಮನೆರಾಘವೇಂದ್ರಗುರುಸಾರ್ವಭೌಮಾ||
ತನ್ನ ಕಾಯಜ ದೋಷಯಾತ್ಮವಾತ್ಮೀಯಭವ |
ಘನ್ನ ಪಾಪಂಗಳಂ ಸರ್ವದುರಿತಂಗಳಂ |
ಚನ್ನಾಗಿ ಪರಿಹರಿಸಿ ಪುರುಷಾರ್ಥಕೊಡುವಪರಮಾತ್ಮವಿದನೀತನೆಂದು ||
ಮನ್ನಿಸಿ ತ್ರಿಕಾಲದೊಳಜಸ್ರಪ್ರಾರ್ಥನೆಗೆಯ್ವ |
ಧನ್ಯನಾವನೊ ಅವನು ಸರ್ವೇಷ್ಟಪಡದು ಸುಖ |
ವನ್ನೆ ಭೋಗಿಸುವನಿಹಪರದೊಳಗಸಂದೇಹಮಿಲ್ಲದಕೆಸುಗತಿಸಾರ್ವಾ ||೧೯

ಭಾಮಿನಿ ಷಟ್ಪದಿ—

ಸಕಲಯಾತ್ರಾಫಲದಗೋಸ್ಕರ |
ಸುಕಲಿವೃಂದಾವನಪ್ರದಕ್ಷಿಣೆ |
ಶಕುತಿಯಿದ್ದಷ್ಟೆಸಗುವೆನು ಸರ್ವೇಷ್ಟಸಿದ್ಧಿಂಗೆ ||
ಭಕುತಿಯಿಂ ನಮಸ್ಕಾರ ಮಾಳ್ಪೆನು |
ಯುಕುತಿಶ್ರುತಿಶಾಸ್ತ್ರಾರ್ಥಜ್ಞಾನದ |
ನಿಕರಕೈ ಸಾರ್ವದಕೆ ತವ ಸಂಕೀರ್ತನಂ ಗೆಯ್ವಾ ||೨೦||
ಭುವನದೊಳಗಿದ್ದಖಿಳತೀರ್ಥದ |
ನಿವಹದೊಳು ಮಜ್ಜನವನೆಸಗಿದ |
ಸವೆಯುದತಿಫಲದೊರೆವುದಕೆ ವೃಂದಾವನಭಿಷೇಕಾ ||
ಸ್ನಾವನದಿಂ ಎಸಗಿರಲು ತಜ್ಜಲ |
ವವಯುವದಿ ಶಿರದಲ್ಲಿ ಧರಿಸುವೆ |
ತವಮಹಾತ್ಮ್ಯ ವಿಚಿತ್ರವೈಗುರುರಾಜ ಸುರಭೂಜಾ ||೨೧||

ವಾರ್ಧಕ ಷಟ್ಪದಿ.

ಕಾಮಾದಿಭಂಗ ಸಂಕುಲದಿಂದ ವಿಷಯ ಸು |
ಪ್ರೇಮವಿಭ್ರಮ ದುರ್ಭ್ರಮಗಳಿಂದ ವದ್ಯಗ್ರಹ |
ಸ್ತೋಮದಿಂದವಿತಭಯವೆಂಬ ಫೇನಗಳಿಂದ ಉತ್ಕೃಷ್ಟದುಃಖವಿಷಧೀ||
ಆಮಹಾಕ್ಷಯಪ್ರಕೃತಿಬದ್ಧದುಸ್ತರಸದಾ |
ಸೀಮವರ್ಜಿತ ವಾದಗಾಧ ಸಂಸಾರವೆಂ-|
ಬೀಮಹಾರ್ಣವದೊಳಗೆಮಗ್ನನಾಗಿದ್ದೆನ್ನನುದ್ಧರಿಸೊ ರಾಘವೇಂದ್ರಾ||೨೨||
ಶ್ರೀರಾಘವೇಂದ್ರ ಗುರುಸ್ತೋತ್ರಮಂಭಕ್ತಿಯಿಂ |
ದಾರಾದೊಡಂಪಠಿಸಿಜಪಿಸಿದರೆ ಕುಷ್ಠಾದಿ |
ಕ್ರೂರರೋಗಗಳೆಲ್ಲವತಿತ್ವರ್ಯದಿಂದಂಧಜಪಿಸಿದರೆ ದಿವ್ಯದೃಷ್ಟಿ ||
ಸಾರುವನವಂ ಏಡಮೂಕಾದರುಂ ಸರಿಯೆ |
ಸಾರಸ್ತೋತ್ರದಿ ಜಪಂಗೆಯ್ಸೆ ವಾಕ್ಪತಿಯಂತೆ |
ಚಾರುವಾಚಾಲನಾಗುವಸ್ತುತಿಯಪಠಿಸಿದವ ಪೂರ್ಣಾಯುಸಿರಿತಾಳ್ವನು ||
ಆವನೀಸ್ತೋತ್ರದಿಂದಭಿಮಂತ್ರಿತೋದಕವ |
ಭಾವಶುದ್ಧದಿಕುಡಿಯಲವನ ಕುಕ್ಷಿಯೊಳಿರ್ದ-|
ಘಾವಳಿಗಳೆಲ್ಲ ತಕ್ಷಣದೊಳಳಿವವುಯಿನ್ನುಪೊಳೆವ ವೃಂದಾವನವನು ||
ಸೇವಿಸೆಪ್ರದಕ್ಷಿಣೆಯ ಪಂಗುಖಂಜಗಳನಿಬ |
ರಾವಿಮಲಸ್ತೋತ್ರದಿಂದೆಸಗೆ ಜಂಘಾಲಾಗಿ |
ತಾವೆಚರಿಸುವರು ಶ್ರೀರಾಘವೇಂದ್ರಾರ್ಯರಮಹಾಪ್ರಸಾದವಪೊಗಳುತಾ|
ಸೋಮಸೂರ್ಯಗ್ರಹಣದಲ್ಲಿ ಪುಷ್ಯಾರ್ಕಾದಿ |
ರಾಮಣೀಯಕ ಪುಣ್ಯಪರ್ವಣಿ ಸಮಾಗಮದೊ |
ಳೀಮಹಾದಿವ್ಯಸ್ತೋತ್ರವನು ನೂರೆಂಟುಬಾರೆಜಪಿಸಿದ ಮಾನವನಿಗೆ ||
ಚಾಮರ ಚೋರಸರ್ಪಗ್ರಹಪಿಶಾಚಿ ನೃಪ |
ಸಾಮಜಮಕರ ಭೂತಪ್ರೇತಾದಿ ಭಯಪೀಡೆ |
ತಾಮಸರುಪದ್ರವೆಂದೆಂದು ಬಾರದೆಪೋಪವೇವೇಳ್ವೆ! ಗುರುಮಹಿಮೆಯಾ ||
ಈ ದಿವ್ಯಸ್ತೋತ್ರವುಚ್ಚರಿಸುತ್ತ ಮುಖದಿಗುರು |
ಪಾದವನ್ನೆನೆನೆದು ತದ್ವೃಂದಾವನದ ಬಳಿಯೊ |
ಳಾದರದಿ ದೀಪಸಂಯೋಜನಂಗೆಯ್ದರ್ಗೆಸುಜ್ಞಾನಪುತ್ರಲಾಭಾ ||

ವಾದಿಗಳ ಜಯಭಕ್ತಿ ಹರಿಗುರುಗಳಲಿ ಪೆಚ್ಚಿ |
ಮೋದತೀರ್ಥರಮತವ ಪೊಂದಿದವಂಗೆ ಸತತ |
ಭೂದೇವಮೌಳಿಮಣಿ ಸಕಲಭೀಷ್ಟೆಯು ನೀವಸಂದೇಹವಿನಿತಿಲ್ಲವು ||೨೬||
ಆವನತಿಭಕ್ತಿಯಿಂ ಗುರುರಾಘವೇಂದ್ರರಡಿ |
ದಾವರೆಯ ಸ್ತೋತ್ರಮಂ ಪಠಿಸುತ್ತ ಸ್ಮರಿಸಲು ಸು |
ಖಾವಳಿಯ ಹೊಂದುವನು ಲೇಶ ಕಮಲಾನಾಥನಮಲಪ್ರಸಾದದಿಂದ ||
ಶ್ರೀವಿಭೂತಿಕೀರ್ತಿದಿಗ್ವಿಜಯ ಮೊದಲಾದ |
ಈ ವಿಶೇಷಾರ್ಥಸಮೃದ್ಧಿಯಂ ಪಡೆವುದಕೆ |
ದೇವೇಶಶ್ರೀಹಯಾಸ್ಯನೆ ಸಾಕ್ಷಿನಾ ನುಡಿವೆ ಕೇಳ್ವುದೆಲ್ಲಾ ಸುಜನರು ||೨೭||



# ಫಲಶ್ರುತಿ.

—(೦)—

ವಾರ್ಧಿಕ ಷಟ್ಪದಿ.

ವೃಂದಾವನದೊಳಿರ್ಪ ಮೃತ್ತಿಕೆಯನನುದಿನದಿ |
ತಂದು ಸೇವಿಸಲವನ ಮುಟ್ಟಲರಿಯವು ಪಾಪ |
ವೆಂದು ರೋಗಿಷ್ಠ ಸಾಧಿಸುತ ಲೇಪಿಸೆ ಮೆಯ್ಗೆ ಕುಂದಣದ ತೆರನಾಗುವಾ ||
ವೃಂದಾರಕರ ಮಣಿಯೊಳೀಪ್ಸಿತವನೀವುದಿ |
ನ್ನೆಂತು ಬಣ್ಣಿಸಲಿ ಮಂತ್ರಾಕ್ಷತೆಯ ಮಹಿಮೆ ನಾ |
ಬಂದೆಮುಂದೆಂದುಗುರುರಾಘವೇಂದ್ರಾರ್ಯರಿಗೆಸಮವಿಲ್ಲಲೋಕದಲ್ಲಿ||೨೮|
ಸುರಮಹೀರುಹಭಕ್ತಿಯಿಂ ಭಜಿಸುವರ್ಗಮರ |
ಸುರಭಿನಮಿಪರ್ಗೆ ವರಸತ್ಯಧರ್ಮಾಸಕ್ತ |
ನರೆಯೊಳತಿಪೂಜ್ಯ ಶ್ರೀರಾಘವೇಂದ್ರರ ನಾಮನಿರ್ವಚನಮಂ ಪೇಳುವೆ ||
ಬರಿಕಾಂತಿದೊರಕುವದು ಶ್ರೀಯೆನಲು ರಾಘಯೆನೆ |
ಭರಿತ ಪಾಪಂಗಳಂ ದ್ರಾಯೆನಲು ಓಡಿಸುತ |
ತ್ವರಿತದಿಂವೇಯೆನಲುವಾಂಛಿತಫಲವನೀವಗುರುಗಳಪೊರ್ಗಳಲೊಶವೆ|೨೯|
ಶ್ರೀಯೆನಲು ಸುಜ್ಞಾನ ರಾಯೆನಲು ರಾಜವಶ |
ಘಯೆನಲು ಘನಶಕ್ತಿ ವೇಯೆನಲು ವೇದಾಢ್ಯ |
ದ್ರಾಯೆನಲುದ್ರವ್ಯವಶಯಯೆನಲು ಯಶಪ್ರಾಪ್ತಿನಯೆನಲುನರವರನಹಾ|
ಮ ಯೆನಲು ಮನಸುಚಂಚಲವಾಗದೀಯಂಟು ಬ |
ಗೆಯ ದಿವ್ಯಾಕ್ಷರದ ಮಂತ್ರವನು ಭಕ್ತಿಯಿಂ |
ಬಾಯೊಳನವರತಶ್ರೀರಾಘವೇಂದ್ರಾಯನಮಃಯೆಂದುಜಪಿಸುವನೆಧನ್ಯ೩೦
ಈ ತೆರದಿ ಗುರುರಾಘವೇಂದ್ರಪ್ರಸಾದದಿಂ |
ಪ್ರೀತಿಯಿಂದಪ್ಪಣಾಚಾರ್ಯರೆಂಬಭಿಧಾನಾ |
ಖ್ಯಾತರಿಂ ಗೀರ್ವಾಣದಿಂದ ರಚಿಸಿರಲವರಭಾವಮಂ ಕನ್ನಡದಲೀ ||
ಜ್ಯೋತಿಕನ್ನಡಿಯೊಳಗೆ ಮುಖಸ್ಪಷ್ಟಕಾಣಿಸುವ |
ರೀತಿಯಿಂ ಗ್ರಹಿಸಿ ಶ್ರೀಮನೋಹರವಿಠಲದಾಸ |
ಚಾತುರ್ಯದಿಂ ಪೇಳ್ಗನೆಂದರಿದು ಬರೆದೋದಿ ಕೇಳ್ವುದೆಲ್ಲಾಸುಜನರು|೩೧|

( ಶ್ರೀಗುರುರಾಜಾಂತರ್ಗತ ಶ್ರೀಗುರುಮಧ್ವೇಶಾರ್ಪಣಮಸ್ತು )

# ಪರಿಶಿಷ್ಟ [ಕ]

## ಶ್ರೀ ಮಂತ್ರಾಲಯ ಮಠದ ಉತ್ಪತ್ತಿ.

ಶ್ರೀಮದುತ್ತರಾದಿ ಮಠದಲ್ಲಿ ರಾಮಚಂದ್ರತೀರ್ಥರೆಂಬ ಸ್ವಾಮಿಗಳು (ಶ್ರೀಮದಾಚಾರ್ಯರಿಂದ ೧೦ನೆಯವರು) ವಿಬುಧೇಂದ್ರತೀರ್ಥರಿಗೆ ಉಪದೇಶಮಾಡಿ ಕೆಲವು ಪ್ರತಿಮಾ ಹಾಗೂ ಸಾಲಿಗ್ರಾಮಗಳನ್ನು ಕೊಟ್ಟು ಮತಪ್ರಸಾರ ಮಾಡಬೇಕಾಗಿ ದೇಶ ಸಂಚಾರಕ್ಕೆ ಕಳಿಸಿದರು. ವಿಬುಧೇಂದ್ರತೀರ್ಥರು ಅಸಾಮಾನ್ಯ ಪಂಡಿತರು. ಪಾಂಡಿತ್ಯ ಬಲದಿಂದ ಹೋದ ಹೋದಲ್ಲಿ ವಾದಿಗಳನ್ನು ಗೆದ್ದು ವಿಜಯವನ್ನು ಸಂಪಾದಿಸುತ್ತ ಮಠವನ್ನೂ ಗುರುಗಳನ್ನೂ ಕೂಡಾ ಮರೆತುಬಿಟ್ಟರು. ಸ್ವಾಮಿಗಳವರು ಎಷ್ಟೆಷ್ಟೋ ಜನರಿಂದ ಹೇಳಿಕಳಿಸಿದರು; ಪತ್ರಹಾಕಿ ನೋಡಿದರು. ಯಾವುದಕ್ಕೂ ಇವರಿಂದ ಉತ್ತರವೇ ಇಲ್ಲ. ಕಡೆಗೆ ಶ್ರೀಗಳವರಿಗೆ ಅವಸಾನಕಾಲವು ಸಮೀಪಿಸಿತು. ಆಗಂತೂ ನೀವು ಬರಲಿಕ್ಕೇಬೇಕೆಂದು ವಿಬುಧೇಂದ್ರರಿಗೆ ಕಟ್ಟಪ್ಪಣೆಯು ಕಾಗದವು ಹೋಯಿತು. ಏನಾದರೇನು? ಅವರು ಬರಲೇ ಇಲ್ಲ. ಉಪಾಯವಿಲ್ಲದೆ ಸ್ವಾಮಿಗಳವರು (ರಾಮಚಂದ್ರತೀರ್ಥರು) ವಿದ್ಯಾನಿಧಿಗಳೆಂಬವರಿಗೆ ಆಶ್ರಮಕೊಟ್ಟರು. ಆದರೂ ಅವರಿಗೆ ಸಂಸ್ಥಾನವನ್ನೊಪ್ಪಿಸದೆ ಕೆಲವು ಪ್ರಮುಖ ಜನರನ್ನು ಕರೆಯಿಸಿ:—ವಿಬುಧೇಂದ್ರತೀರ್ಥರು ಸಂಸ್ಥಾನಕ್ಕೆ ಅರ್ಹರಾದವರು. ಮಹಾ ಪಂಡಿತರು. ಮೇಲಾಗಿ ಅತ್ಯಂತ ವಿರಕ್ತರು; ಆದರೆ ಅವರು ಈ ವರೆಗೂ ಬಾರದೆ ಇದ್ದುದರಿಂದ ವಿದ್ಯಾನಿಧಿಗಳಿಗೆ ಆಶ್ರಮ ಕೊಟ್ಟಿರುವೆವು ಇವರಾದರೂ ಮಹಾಸಾಧುಗಳು. ಆದಾಗ್ಯೂ ನೀವೆಲ್ಲರೂ ಕೂಡಿ ಇವತ್ತಿನಿಂದ ಆರು ತಿಂಗಳ ವರೆಗೆ ವಿಬುಧೇಂದ್ರರ ಮಾರ್ಗನೋಡಿ ಅಷ್ಟರಲ್ಲಿ ಅವರು ಬಂದದ್ದಾದರೆ ಸಂಸ್ಥಾನವನ್ನು ಅವರಿಗೊಪ್ಪಿಸಬೇಕು; ಇಲ್ಲದೆ ಹೋದಲ್ಲಿ ವಿದ್ಯಾನಿಧಿಗಳಿಗೆ ಒಪ್ಪಿಸಿಬಿಡಿರಿ ಅಲ್ಲಿಯ ವರೆಗೂ ಶ್ರೀಮೂಲ ರಾಮದೇವರ ಪೆಟ್ಟಿಗೆಯನ್ನು ಇಲ್ಲಿ ನೆಲದೊಳಗೆ ಹೂಳುವೆವು, ಎಂಬದಾಗಿ ಹೇಳಿದರು. ಮುಂದೆ ಶ್ರೀಗಳವರು ವೃಂದಾವನಸ್ಥರಾಗಲು ನಾಲ್ಕೈದು ತಿಂಗಳ ವರೆಗೆ ನೋಡಿ, ಊರ ಪ್ರಮುಖರು ತಾವೇ ವಿಬುಧೇಂದ್ರತೀರ್ಥರ ಹತ್ತರ ಹೋಗಿ ನಡೆದ ಸಂಗತಿ

ಯನ್ನೆಲ್ಲ ವಿಜ್ಞಾಪನೆ ಮಾಡಿಕೊಂಡರು. ಆಗ್ಯೂ ಅವರು ಬರಲಿಲ್ಲ. ಸಂಪೂರ್ಣ ಆರು ತಿಂಗಳ ಅವಧಿಯು ಮುಗಿಯಿತು. ವಿದ್ಯಾನಿಧಿಗಳಿಗೆ ಸಂಸ್ಥಾನವನ್ನೊಪ್ಪಿಸಲಿಕ್ಕೆ ಸಿದ್ಧರಾದರು ಅಷ್ಟರಲ್ಲಿ ಮಧ್ಯಾಹ್ನದ ಹೊತ್ತಿಗೆ ವಿಬುಧೇಂದ್ರರು ಅಕಸ್ಮಾತ್ತಾಗಿ ಬಂದು ಸಂಸ್ಥಾನವನ್ನು ಕೇಳಿದರು. ಆಗ ಊರ ಪ್ರಮುಖರು:—ಗುರುಗಳು ಹೇಳಿದ ಅವಧಿಯು ಮುಗಿದು ಹೋದದ್ದರಿಂದ ನಿಮಗೀಗ ಸಂಸ್ಥಾನವನ್ನು ಒಪ್ಪಿಸಲಿಕ್ಕೆ ಬರುವದಾಗಿಲ್ಲ. ಆದ್ದರಿಂದ ಇರಲಿ, ಈ ಸ್ಥಳದಲ್ಲಿ ಶ್ರೀಮೂಲ ರಾಮದೇವರ ಪೆಟ್ಟಿಗೆಯನ್ನು ಹೂಳಿಟ್ಟಿರುವರು. ತಾವು ಉಭಯತರು ಈಗ ಬೇಗೆಯಾಗಿ ಪ್ರಾರ್ಥನೆ ಮಾಡಿಕೊಳ್ಳಬೇಕು. ಯಾರ ಪ್ರಾರ್ಥನೆಗೆ ಪೆಟ್ಟಿಗೆಯು ತನ್ನಷ್ಟಕ್ಕೆ ತಾನೆ ಮೇಲೆ ಬರುವದೋ ಅವರಿಗೆ ಸಂಸ್ಥಾನವನ್ನೊಪ್ಪಿಸುವೆವು, ಎಂಬದಾಗಿ ನಿರ್ಣಯಿಸಿದರು. ಇಬ್ಬರು ಶ್ರೀಗಳವರೂ ಇದಕ್ಕೆ ಒಪ್ಪಿಕೊಂಡದ್ದಾಯಿತು. ವಿಬುಧೇಂದ್ರರು ಮೊದಲು ತಾವೇ ಪ್ರಾರ್ಥನೆಗೆ ಕುಳಿತರು. ಎಷ್ಟು ಹೊತ್ತಾದರೂ ಪೆಟ್ಟಿಗೆಯು ಮೇಲಕ್ಕೆ ಬರಲಿಲ್ಲ. ಬಳಿಕ ವಿದ್ಯಾನಿಧಿಗಳು ಪ್ರಾರ್ಥನೆ ಮಾಡಿಕೊಳ್ಳಲು ಪೆಟ್ಟಿಗೆಯು ಕೂಡಲೆ ಮೇಲಕ್ಕೆ ಬಂತು. ಜನಗಳೆಲ್ಲರೂ ಈ ಆಶ್ಚರ್ಯವನ್ನು ನೋಡಿ ಶ್ರೀವಿದ್ಯಾನಿಧಿಗಳಿಗೇ ಸಂಸ್ಥಾನವನ್ನೊಪ್ಪಿಸಿದರು. ಆಗ ಶ್ರೀವಿಬುಧೇಂದ್ರರು ಸುಮ್ಮನೆ ಕೂಡದೆ ನಂಜನಗೂಡಿಗೆ ಹೋಗಿ ಅಲ್ಲಿ ತಮ್ಮದೊಂದು ಸ್ವತಂತ್ರ ಮಠವನ್ನು ಸ್ಥಾಪಿಸಿಕೊಂಡರು. ಇದು ಶಾಲಿವಾಹನ ಶಕ [illegible]ರಲ್ಲಿ ಆಯಿತು. ಇದೇ ಮಂತ್ರಾಲಯ ಮಠ

ಮುಂದೆ ಶ್ರೀರಾಘವೇಂದ್ರಸ್ವಾಮಿಗಳವರ ಅತ್ಯಂತ ಮಹಿಮಾ ವಿಶೇಷದಿಂದ ಇದಕ್ಕೆ ಮಂತ್ರಾಲಯದ ಮಠವೆಂದೂ ರಾಘವೇಂದ್ರಸ್ವಾಮಿಗಳ ಮಠವೆಂದೂ ಹೆಸರು ಬಿದ್ದು ಹೋಯಿತು

ಹೀಗೆ ಬರೆದಿರುವದಕ್ಕೆ ಆಧಾರವೇನಾದರೂ ಉಂಟೇ ಎಂಬದಾಗಿ ಅನೇಕ ವಾಚಕರು ಕುತೂಹಲದಿಂದ ನಮ್ಮನ್ನು ಕೇಳುತ್ತಿರುವರು. ಆದರಿಂದ ಎಲ್ಲರ ಅವಗಾಹನೆಗಾಗಿ 'ಗುರುಗಥಾ ಕಲ್ಪತರು'ವೆಂಬ ಗ್ರಂಥದಲ್ಲಿ ಹೇಳಿದ್ದನ್ನೇ ಕೆಳಗೆ ಉದಹರಿಸುವೆವು.

ತತಸ್ತು ರಾಮಚಂದ್ರಾಖ್ಯತೀರ್ಥಾರ್ಣವಾನ್ಪ್ರಾಪ್ಯಮಾಗತಂ ||
ಕೃತ್ವಾ ಮುದಾ ದದುಃ ಶ್ರೀಮದ್ವಿಬುಧೇಂದ್ರೇಭ್ಯ ಏವ ಚ ||೨೪||

ವ ರಕ್ಷ ರಾಮಪ್ರತಿಮಾಮೇಕಾಂ ಸಾಧಾರಣಾಂ ತಥಾ ||
ಜಯತೀರ್ಥಾಚಾರ್ಯದತ್ತಾಂ ಸಾಲಗ್ರಾಮಹಯಾಸ್ಯಕಂ ||೨೪||
ದತ್ತ್ವಾನುಜ್ಞಾಂ ತಥಾ ತೇಭ್ಯಃ ಸಂಚಾರಾರ್ಥಂ ಮಹೀತಲೇ |
ಪ್ರೇಷಯಾಮಾಸ ಅಥ ತೇ ಪ್ರಸಂಗಂ ಚಕ್ರಿರೆ ಪರೈಃ ||೨೫||
ಜಿತ್ವಾ ಮಾಯಿಗಣಾನಗ್ರ್ಯಾನ್ ನ ದ್ವೈವಜಯಕಾಂಕ್ಷಿಣಃ |
ಗುರುಭಿರ್ಬಹುಧಾಹೂತಾ ಅಪಿ ನೈವ ಗತಾಃ ಪುನಃ ||೨೬||
ತೇಷಾಂ ಮಾರ್ಗಂ ಪರೀಕ್ಷ್ಯಾರ್ಥ ರಾಮಚಂದ್ರಯತೀಶ್ವರಾಃ |
ವಿದ್ಯಾನಿಧಿಮುನಿಭ್ಯಸ್ತೇ ಸನ್ಯಾಸಂ ದದುರಾದರಾತ್ ||೨೭||
ನಿರ್ಯಾಣಸಮಯೇ ಪ್ರಾಪ್ತೇ ರಾಮಚಂದ್ರಮುನೀಶ್ವರಾಃ |
ಯರಗೋಲಮುಪಾಗತ್ಯ ತತ್ರಸ್ಥಾನಿದಮಬ್ರುವನ್ ||೨೯||
ಭೋ ಧರ್ಮಿಣೋ ಮುಖ್ಯಾಃ ಸರ್ವೇ ಶ್ರೂಯತಾಮಸ್ಮದಾಶಯಃ |
ವಿಬುಧೇಂದ್ರಾ ಮಹಾಂತೋಽಸ್ಮನ್ಮಠೇ ಮುಖ್ಯಾಭಿಮಾನಿನಃ ||೩೦||
ಏವಂ ವಿಧಾಯ ಮರ್ಯಾದಾಂ ಯರಗೋಲೇ ಗುರೂತ್ತಮಾಃ |
ಕುಲಕರ್ಣ್ಯುಪನಾಮೇತಿಖ್ಯಾತಧರ್ಮಿಣ್ಣಮಂದಿರೆ ||೩೫||
ನಿಕ್ಷಿಪ್ಯ ದೇವಮಂಜೂಷಾಂ ನಿಧಾಯೋಪಸ್ಕರಾನಪಿ |
ನಲಸಂವತ್ಸರೇರಾದ್ಯಶುಕ್ಲೇ ಷಷ್ಠ್ಯಾಂ ಗುರೂತ್ತಮಾಃ ||೩೬||
ತತಃ ಪಕ್ಷೋನ ಷಣ್ಮಾಸೇ ಗತೇ ಧರ್ಮಿಣ್ಣಪೂರ್ವಕಾಃ |
ವಿದ್ಯಾನಿಧೀನುಪಾಗತ್ಯ ಪ್ರೋಚುರ್ವಿನಯಪೂರ್ವಕಂ ||೩೭||
ತತ್ರಾದೌ ವಿಬುಧೇಂದ್ರಸ್ತಂ ಪ್ರಾರ್ಥಯನ್ ದಿವಸತ್ರಯಂ|
ಉಪವಾಸೇನ ಪಶ್ಚಾತ್ತು ವಿದ್ಯಾನಿಧಿಮುನೀಶ್ವರಾಃ ||೬೦||
ಶ್ರೀಮದ್ಭಾಗವತಪ್ರೋಕ್ತೈಃ ಪಂಚಮಸ್ಕಂಧಸಂಸ್ಥಿತೈಃ |
ಗದ್ಯಪದ್ಯಾದಿಭಿಃ ಸ್ತೋತ್ರಂ ಚಕ್ರಿರೆ ತದ್ಗಮಾನಸಾಃ ||೬೧||
ಯದೃಚ್ಛಯಾಭವತ್ತತ್ರ ಭುವಿ ದಾರಣಮದ್ಭುತಂ |
ದೃಷ್ಟ್ವಾ ವಿದಾರಿತಾಂ ಭೂಮಿಂ ಸರ್ವೇ ತೇ ವಿಸ್ಮಿತಾಸ್ತದಾ ||೬೨||
ತತೋ ಗೃಹೀತ್ವಾ ರಘುಪಂ ವಿದ್ಯಾನಿಧಿಮುನೀಶ್ವರಾಃ |
ಸ್ನಾತ್ವಾ ದೇವಾರ್ಚನಂ ಚಕ್ರುಃ ಶಿಷ್ಯಜನಸಂಸದಿ ||೬೩||

( ಸಪ್ತಮಃ ಶಾಖಾ ಸರ್ಗಃ )

# ಪರಿಶಿಷ್ಟ [ಡ]



## ಶ್ರೀ ಮೂಲರಾಮದೇವರ ವೃತ್ತಾಂತ.



ಈಗ ಸದ್ಯಕ್ಕೆ ಶ್ರೀಮದುತ್ತರಾದಿ ಮಠೀಯ ಶಿಷ್ಯರೂ, ಮಂತ್ರಾಲಯ ಮಠೀಯ ಶಿಷ್ಯರೂ ಇಬ್ಬರಿಗೂ ಅಭಿಮಾನದಿಂದ ಶ್ರೀಮೂಲರಾಮದೇವರು ತಮ್ಮ ತಮ್ಮ ಮಠದಲ್ಲಿದೆಯೆಂದು ಹೇಳುತ್ತಿರುವರು; ಆದರೆ ಅವರವರ ಹೇಳಿಕೆಯಲ್ಲಿ ಯಾವುದು ಯುಕ್ತವೆಂಬದನ್ನು ತುಸು ಮಟ್ಟಿಗೆ ವಿಚಾರ ಮಾಡೋಣ.

ಈ ಮೂಲ ರಾಮಸೀತಾ ಪ್ರತಿಮೆಗಳ ಕಥೆಯು—

"ಮಾರ್ಕಂಡೇಯ ಪುರಾಣೇತೂತ್ತರಕಾಂಡೇತ್ವೈವಚ ||
ಅಧ್ಯಾಯೆಷಣ್ಣವತಿಕೆ ಗ್ರಂಥೆ ಪುಷ್ಕರ ಸಂಜ್ಞಕೆ||
ರಾಮಾಯಣೇತು ವಾಸಿಷ್ಠೆ ಜಾನಕೀ ಮೂಲರಾಮಯೋಃ ||
ಮಹಿಮಾತ್ಮಾನುಪೂರ್ವೇಣ ವರ್ಣಿತೋಸ್ತಿ ಮಯೋದಿತಃ"||

(ಗುರುಕಥಾಕಲ್ಪತರು)

ಎಂಬಂತೆ—

ಮಾರ್ಕಂಡೇಯ ಪುರಾಣದ ಉತ್ತರಕಾಂಡದ ೯೬ನೆಯ ಅಧ್ಯಾಯದಲ್ಲಿಯೂ-ವಾಸಿಷ್ಠರಾಮಾಯಣದ ೧೧ರಿಂದ ೧೫ ಅಧ್ಯಾಯಗಳಲ್ಲಿಯೂ ವಿಸ್ತಾರವಾಗಿ ಹೇಳಲ್ಪಟ್ಟದೆ. ಅಲ್ಲದೆ ಪುರಂದರಾದಿ ದಾಸರುಗಳೂ ತಮ್ಮ ಪದ್ಯದಲ್ಲಿ ಸೂಚಿಸಿರುವರು.

ಸೀತಾರಾಮ ಪ್ರತಿಮೆಗಳು ಮೊದಲು ವಿಶ್ವಕರ್ಮನಿಂದ ನಿರ್ಮಿತವಾಗಲು ಬ್ರಹ್ಮದೇವರು ಎಷ್ಟೋ ದಿವಸ ಪೂಜೆಮಾಡಿ ವಿವಸ್ವಾನ್ ಎಂಬವನಿಗೆ ಕೊಟ್ಟರು. ಆತನು ತನ್ನ ಮಗನಾದ ಮನುವಿಗೆ ಕೊಟ್ಟನು. ಮನುವು ಇಕ್ಷ್ವಾಕು ವಂಶದ ರಾಜರಿಗೆ ಕೊಟ್ಟನು. ಈ ಅರಸರ ಕಾಲದಿಂದ ಅವು ರಾಜಗೃಹದಲ್ಲಿ ಕುಲದೇವತೆಯಾಗಿ ಪೂಜಿತ ಪ್ರತಿಮೆಗಳಾಗಿದ್ದವು. ಮುಂದೆ ಸೀತಾದೇವಿಯ ಪ್ರಾರ್ಥನಾನುಸಾರ ಶ್ರೀರಾಮಚಂದ್ರನು

ಆಕೆಗೆ ಪೂಜಾರ್ಥವಾಗಿ ಕೊಟ್ಟನು. ಅನಂತರ ಲಕ್ಷ್ಮಣನ ಗೃಹಕ್ಕೆ ಬಂದು ಸೇರಿದವು. ಅಲ್ಲಿಂದ ಅಯೋಧ್ಯಾನಗರದ ಒಬ್ಬ ಬ್ರಾಹ್ಮಣನ ಮನೆಗೆ ಬಂದವು ಹೇಗೆಂದರೆ—ಆತನು ಶ್ರೀರಾಮಸಂದರ್ಶನವಿಲ್ಲದೆ ಭೋಜನ ಮಾಡುವದಿಲ್ಲವೆಂಬ ವ್ರತವನ್ನು ಹಿಡಿದಿದ್ದನು. ಒಂದಾನೊಂದು ಸಮಯದಲ್ಲಿ ಶ್ರೀ ರಾಮಚಂದ್ರದೇವರು ಕಾರಣಾಂತರದಿಂದ ಎಂಟು ದಿವಸ ಸಭೆಗೆ ಬಾರದೆ ಹೋದರು. ಬ್ರಾಹ್ಮಣನು ರಾಮದರ್ಶನವಿಲ್ಲದೆ ನಿರಾಹಾರಿಯಾಗಿ ಒಂಬತ್ತನೇ ದಿವಸ ಬಹಳ ಶ್ರಾಂತನಾಗಿ ಸಭೆಗೆ ಬಂದು ರಾಮನ ಸನ್ನಿಧಾನದಲ್ಲಿ ಬಿದ್ದನು. ಆಗ ರಾಮನು ವಿಚಾರಿಸಿ ಕೂಡಲೆ ಲಕ್ಷ್ಮಣನಲ್ಲಿದ್ದ ಸೀತಾರಾಮ ಪ್ರತಿಮೆಗಳನ್ನು ಆ ಬ್ರಾಹ್ಮಣನಿಗೆ ಕೊಡಿಸಿ ಬಿಟ್ಟನಂತೆ! ಅನಂತರ ಬ್ರಾಹ್ಮಣನು ಎಷ್ಟೋ ದಿವಸ ಪೂಜೆ ಮಾಡಿ ನಿರ್ಯಾಣ ಕಾಲದಲ್ಲಿ ಶ್ರೀ ಹನುಮಂತದೇವರಿಗೆ ಅರ್ಪಿಸಿದನು. ಹನುಮಂತನು ಸೌಗಂಧಿಕ ಪುಷ್ಪದಬಳಿಯಿಂದ ಬಂದ ಭೀಮಸೇನನಿಗೆ ಕೊಡಲು ಪಾಂಡವರ ವಂಶದಲ್ಲಿ ಕ್ಷೇಮಕಾಂತರಾಜನ ಪರ್ಯಂತರವೂ ಪೂಜಿತಗಳಾಗಿ ರಾಜಗೃಹದಲ್ಲಿಯೇ ಇದ್ದು, ಮುಂದೆ ಯಾವ ಕಾರಣದಿಂದಲೋ ಗಜಪತಿರಾಜನ ಭಂಡಾರದಲ್ಲಿ ನಿಕ್ಷಿಪ್ತವಾಗಿದ್ದವು. ಇಂಥಾ ಪ್ರತಿಮಾಗಳನ್ನು ಶ್ರೀಮದಾಚಾರ್ಯರು ತಮ್ಮ ಶಿಷ್ಯರಾದ ನರಹರಿತೀರ್ಥರದ್ವಾರಾ ತರಿಸಿಕೊಂಡು ಸ್ವಲ್ಪ ದಿವಸ ಪೂಜೆ ಮಾಡಿ ಪದ್ಮನಾಭತೀರ್ಥರಿಗೆ ಒಪ್ಪಿಸಿದರು. ಅವರಿಂದ ನರಹರಿತೀರ್ಥರೂ, ಮಾಧವತೀರ್ಥರೂ, ಅಕ್ಷೋಭ್ಯತೀರ್ಥರೂ, ಜಯತೀರ್ಥರೂ ಪೂಜಿಸುತ್ತ ರಾಮಚಂದ್ರತೀರ್ಥರವರೆಗೂ ಬಂದವು.

ಈ ವಿಷಯವನ್ನೆಲ್ಲ ಮಹಾತ್ಮರಾದ ಜಗನ್ನಾಥದಾಸರು ತಿಳಿಗನ್ನಡದ ಒಂದೇ ಒಂದು ಕೀರ್ತನೆಯಲ್ಲಿ ಹೇಗೆ ಕ್ರೋಡೀಕರಿಸಿರುವರೆಂಬುದನ್ನು ಇಲ್ಲಿ ಹೇಳದೆ ಇರಲಾರೆವು.

ರಾಗ | ಭೈರವಿ | ಆದಿತಾಳ.

ರಾಮನನೋಡಿದ್ಯೆ | ನಮ್ಮ ರಾಮನ | ಕಾಮಿತದೇಹಿಗ್ರೆ || ಪಲ್ಲವಿ ||
ತ್ರಿಭುವನದಸಕಲಸುರಾಸುರವಂದಿತ | ಶ್ರೀಕಮಲಾಧಾಮನ || ಅ.ಪ ||
ಧಾತನನಾಜ್ಞದಿ ದೇವತ್ವಷ್ಟ್ರ ನಿರ್ಮಿಸಿದ | ಅಜ ಪೂಜಿಸಿದ |
ಜ್ಯೋತಿರ್ಮಯಚಾರುವಿಮಾನಯುತವಾದ |

ಕಾಮಿತನೆರದ | ಭೂತಾಧಿಪನಭವನದೊಳಗರ್ಚನೆಗೊಂಡ |
ಧೃತಕೋದಂಡ | ಮಾತಂಗಾರಿವಿರೋಧಿಯಜನಕನಮೇಧಾ |
ಗಾರಕೆ ಪೋದ ॥ ೧ ॥
ಸೌಭರಿಮುನಿಪಗೆಸೌಖ್ಯವಕರುಣಿಸಿಕೊಟ್ಟ | ಜಗಕತಿಧಿಟ್ಟ |
ನಾಭಿಜನ್ಮನಿಹನಗರಸ್ಥಾನಕೆಬಂದಾ | ಶುಭಗುಣವೃಂದಾ |
ವೈಭವದಿಂದಅಯೋಧ್ಯಾನಗರದಿಮೆರೆದ | ಕಾಮಿತಗರೆದ ॥
ಸಾಭಿಮಾನದಲಿಸತಿಯೊಳಗಿತ್ತ ಸುವರವ | ದೇವರದೇವ ॥ ೨ ॥
ಜಾಂಬುವಂತನಿಗೆಜಾನಕಿರಮಣನುಇತ್ತ | ತನ್ನಯಧ್ಯಾತಾ |
ಸಂಭ್ರಮದಿಂದಲಿವೇದಗರ್ಭನೊಡನಾಷ್ಟ | ಮುಕ್ತಿಯನೀಡ್ದ |
ಕುಂಭೀಶ್ವರನಸುಕೋಶದಿಬಹುದಿನವಾಸ | ಮೆಸಗಿದನೀಶ |
ನಂಬಿತುತಿಸುತಿಹನರಹರಿಮುನಿಪಗೆಒಲಿದ | ಮೋದದಿನಲಿದ ॥೩॥
ಅಲವಬೋಧಮುನಿಅತಿಮೋದದಲರ್ಚಿಸಿದ | ಸಲೆಮೆಚ್ಚಿಸಿದ|
ಇಳೆಯೊಳುಬಹುಯತಿಗಳಕರಪೂಜಿತನಾದ | ಲೀಲವಿನೋದ |
ಬಲುನಂಬಿದಭಕುತರಕಲಿಮಲಗಳಕಳೆದ| ಮನದೊಳುಪೊಳೆದ|
ಸುಲಲಿತಗುಣನಿಧಿವಸುಧೇಂದ್ರಾರ್ಯರಪ್ರಿಯ |ಕವಿಜನಗೇಯ|೪|
ವಾರಿಧಿಬಂಧನವಾನರನಾಯಕರಾಳ್ವ | ದೈತ್ಯರಶೀಳ್ದ |
ನಾರದಮುಖಮುನಿನಮಿತಪದಾಂಬುಜನೀತ | ತ್ರಿಗುಣಾತೀತ |
ಆರಾಧಿಪರಿಗೆಅಖಿಳಾರ್ಥಗಳನುಕೊಡುವ | ದುರಿತವತಡೆವ |
ನೀರಜಾಕ್ಷಜಗನ್ನಾಥವಿಠಲನಿಶ್ಚಿಂತಾ | ಸೀತಾಕಾಂತ ॥ ೫ ॥

ರಾಮಚಂದ್ರತೀರ್ಥರ ಪರಿಯಂತರ ಸರ್ವ ಮಠೀಯರದೂ ಏಕಾಭಿಪ್ರಾಯವೇ ಸರಿ. ಇಲ್ಲಿಂದ ಮುಂದೆಯೇ ಏನಿರುವ ಗೊಂದಲವು. ಯಾಕೆಂದರೆ ಇವರ ತರುವಾಯವೇ ಮಂತ್ರಾಲಯಮಠದ ಸ್ಥಾಪನೆಯಾಯಿತು. ಇದೇ ವಾದವಿವಾದಕ್ಕೆ ಕಾರಣವು. ಹಾಗಾದರೆ ಉಭಯ ಮಠೀಯ ಶಿಷ್ಯರು ಈ ವಿಷಯದಲ್ಲಿರುವ ಯಾವ ಆಧಾರಗಳನ್ನು ತೋರಿಸುತ್ತಾರೋ ಅವುಗಳನ್ನು ವಿಮರ್ಶೆ ಮಾಡೋಣ.

ಮಂತ್ರಾಲಯಮಠದವರು ತೋರಿಸುವ ಪ್ರಮಾಣಗಳೇನಂದರೆ—

೧ ರಾಘವೇಂದ್ರತಂತ್ರವೆಂಬ ಗ್ರಂಥದಲ್ಲಿಯ ಹೇಳಿಕೆ.

೨ 'ಶ್ರೀಮದ್ರಾಘವೇಂದ್ರ ಮಠಗತಾಚಾರ್ಯಕ್ರಮಃ' ಎಂಬ

ಗ್ರಂಥದಲ್ಲಿಯ ಹೇಳಿಕೆ.

೩ ಜಗನ್ನಾಥದಾಸರಾಯರೇ ಮೊದಲಾದ ಅಪರೋಕ್ಷಜ್ಞಾನಿಗಳ ಹೇಳಿಕೆ.

೪ ಉಭಯ ಮಠಗಳ ಮುದ್ರಿಕೆಯ ಲಕ್ಷಣ

೫ ಪ್ರತಿಮಾಗಳ ಲಕ್ಷಣ

ಇವುಗಳಲ್ಲಿ ಒಂದೊಂದನ್ನೇ ವಿವರಿಸುವೆವು.

೧ ರಾಘವೇಂದ್ರತಂತ್ರದ ೩ನೇ ಪಟಲದ ೧೫-೧೬ನೇ ಶ್ಲೋಕಗಳಲ್ಲಿ

ಪುನಶ್ಚ ಸತ್ಯಸಂಧಃ ಪ್ರೋಕ್ತೋ ಮಂತ್ರಾಲಯನಿವಾಸಿನೀ |
ಅನರ್ಚಿತಾ ಚ ಸೀತಾಯಾಃ ಪ್ರತಿಮಾಮರ್ಚಯದ್ಯತಿಃ ||
ವಿಷ್ವಕ್ಸೇನಾ ಹೀಶಪುತ್ರಾವತಾರಾಃ ಷಡಿಮೇ ಮತಾಃ |
ತಸ್ಯ ಶ್ರೀರಾಘವೇಂದ್ರಾರ್ಯಗುರೋಃ ಕಾಮ್ಯಾರ್ಥದಾಯಿನಃ ||

(ಮೂಲ ಸೀತಾಪ್ರತಿಮೆಯನ್ನು ಪೂಜಿಸಲಿಲ್ಲವಲ್ಲಾ ಎಂಬ ವಾಸನಾ ವಿಶೇಷದಿಂದಲೇ ಶ್ರೀರಾಘವೇಂದ್ರಸ್ವಾಮಿಗಳು ಪುನಃ ಉತ್ತರಾದಿಮಠದಲ್ಲಿ ಶ್ರೀಸತ್ಯಸಂಧರೆಂಬ ಹೆಸರಿನಿಂದ ಅವತರಿಸಿದರು.)

ಹೀಗೆ ಹೇಳಿದೆ. ಇದರ ಮೇಲಿಂದ ಮೂಲ ರಾಮಪ್ರತಿಮೆಯು ಮಂತ್ರಾಲಯಮಠದಲ್ಲಿಯೂ ಮೂಲ ಸೀತಾಪ್ರತಿಮೆಯು ಉತ್ತರಾದಿ ಮಠದಲ್ಲಿಯೂ ಇರುವವೆಂದು ಹೇಳಿದ ಹಾಗಾಯಿತು ಹೀಗೆ ಮಂತ್ರಾಲಯ ಮಠದವರು ಅನ್ನುವರು.

ಇದಕ್ಕೆ ಉತ್ತರಾದಿಮಠದವರ ಹೇಳಿಕೆ ಏನೆಂದರೆ:—

ಶ್ರೀರಾಘವೇಂದ್ರಸ್ವಾಮಿಗಳವರು ಮೂಲ ಸೀತಾಪ್ರತಿಮೆಯನ್ನು ಪೂಜಿಸಲಿಲ್ಲವೆಂದು ಹೇಳಿಲ್ಲ. ಮೂಲ ರಾಮನನ್ನು ಪೂಜಿಸಿದೆವೆಂದೂ ಹೇಳಿಲ್ಲ. 'ಸೀತಾಪ್ರತಿಮೆಯನ್ನು ಪೂಜಿಸಲಿಲ್ಲವಲ್ಲಾ' ಎಂಬುದಿಷ್ಟೇ ವಾಸನಾವಿಶೇಷವು ನಿಜವಾಗಿ ನೋಡಿದರೆ ಆ ಮಠದಲ್ಲಿ ಸೀತಾಪ್ರತಿಮೆಯು ಅದ್ಯಾಪಿ ಇರುವದೇ ಇಲ್ಲ ಎಂದಮೇಲೆ ಅವರು ಹಾಗೆ ಅಂದದ್ದು ಸ್ವಾಭಾವಿಕವಾಗಿದೆ.

ಇದರ ಮೇಲಿಂದ — ಮಂತ್ರಾಲಯ ಮಠದಲ್ಲಿ ಸೀತಾ ಪ್ರತಿಮೆಯು ಇಲ್ಲವೆಂಬ ಮಾತೊಂದನ್ನೆ ಮಾತ್ರ ಹೇಳಿದಂತಾಯಿತೇ ಹೊರತು ಮೂಲ ಸೀತಾಪ್ರತಿಮೆ ಇಲ್ಲವೆಂಬ ಮಾತು ಕೂಡುವದಲ್ಲ. ಹಾಗಿದ್ದ ಪಕ್ಷದಲ್ಲಿ

ಇನ್ನೊಂದು ಸೀತಾಪ್ರತಿಮೆ ಯಾದರೂ ಮಂತ್ರಾಲಯಮಠದಲ್ಲಿ ಇರಬಹು ದಾಗಿತ್ತು ಹಾಗಿಲ್ಲ

ಇಷ್ಟೇ ಅಲ್ಲ—ಹಿಂದಕ್ಕೆ ಇವರೇ ವ್ಯಾಸರಾಯರಾಗಿ ಅವತರಿಸಿ ದಾಗ ಸ್ವಪ್ನವಾಗಿ - "ಈ ಜನ್ಮದಲ್ಲಿ ನಿಮಗೆ ಮೂಲರಾಮದೇವರ ಪೂಜೆ ಮಾಡುವ ಅಧಿಕಾರವಿಲ್ಲ. ಮುಂದೆ ಸತ್ಯಸಂಧರಾಗಿ ಹುಟ್ಟಿ ಪೂಜೆಮಾಡು ವಿರಿ' ಎಂದು ಹೇಳಿದಂತಾಯಿ ತಂತೆ ಅಂದ ಮೇಲೆ ರಾಘವೇಂದ್ರತಂತ್ರ ದಲ್ಲಿ ಹೇಳಿದ ಮಾತು ನಿಮಗೆ ಬಲಕೊಡುವದಿಲ್ಲವೆಂದು ಉತ್ತರಾದಿಮಠ ದವರ ಅಭಿಪ್ರಾಯವು

೨ ಇನ್ನು—ಮಠಸೀತಾಚರ್ಯಗತಿಕ್ರಮಃ - ಎಂಬ ಗ್ರಂಥದಲ್ಲಿ ಹೇಳಿ ರುವದೇನಂದರೆ—

ಆಚಾರ್ಯಚರಣಾದೇಶಾತ್ಪದ್ಮನಾಭಪುರೋಗಮಾಃ |
ಯತಯಃ ಪೂಜಯಾಮಾಸುರ್ಚಾಸ್ತಾ ನಿಖಿಲಾ ಅಪಿ ||
ಪಾದಮೂಲೇ ಶಿಲಾಶ್ಚಕ್ರ ಸುದರ್ಶನಶಿಲಾಂಚಿತಾ |
ದಶಾವತಾರಪ್ರತಿಮಾರ್ಚಾ ರಾಮವ್ಯಾಖ್ಯಾತಪ್ರಸ್ತು ರಾಜಿತಾ ||
ಆಚಾರ್ಯಪೂಜಿತಾಮೇತಾಂ ಗುರುರ್ವ್ಯಾಸೋಪಲಬ್ಧಯಂ|
ವಿಬುಧೇಂದ್ರಾಯ ದತ್ವಾ ತಂ ಪ್ರಾಹಿಣೋದುತ್ತರಾಂ ದಿಶಂ ||
ಏತಸ್ಮಿನ್ನಂತರೇ ಕಶ್ಚಿದ್ವಿದ್ಯಾನಿಧಿ ಶ್ರುತಃ |
ಯತಿರಾಗತ್ಯ ತತ್ಸರ್ವಂ ಜಹಾರಾರ್ಚಾದ್ಯುಪಾಯವಿತ್ ||
ತತೋ ವಿದಿತವೃತ್ತಾಂತೋ ವಿಬುಧೇಂದ್ರಃ ಸಮಾಗತಃ |
ಪ್ರತ್ಯಾಖ್ಯಾತೋಭವದ್ವಿದ್ಯಾನಿಧಿನಾ ಬಲಶಾಲಿನಾ ||
ಅನ್ಯೈರಪಹೃತಾಮರ್ಚಾಂ ರಾಮಸ್ಯ ರಘುನಂದನಃ ||
ಅಜಹಾರಪುನಃ ಪೌಷ್ಕಲ್ಯಾತ್ ಶ್ರೀಸುರೇಂದ್ರಗುರೋರ್ಗುರುಃ ||

ಅಂದರೆ—

ಆಚಾರ್ಯರಿಂದ ಪೂಜಿತವಾದ ಮೂಲರಾಮ ಪ್ರತಿಮೆಯನ್ನು ರಾಮಚಂದ್ರತೀರ್ಥರೇ ವಿಬುಧೇಂದ್ರತೀರ್ಥರಿಗೆ ಕೊಟ್ಟರೆಂತಲೂ ಆ ಮೇಲೆ ಉತ್ತರಾದಿಮಠಕ್ಕೆ ಬಂದ ವಿದ್ಯಾನಿಧಿಗಳೆಂಬವರು ಅದನ್ನಪಹರಿಸಿಕೊಂಡು ಹೋದರೆಂತಲೂ ಮುಂದೆ ಮಂತ್ರಾಲಯಮಠದ ರಘುನಂದನತೀರ್ಥರು ಪುನಃ ನಪೌಷ್ಕಲ್ಯಕೊಟ್ಟು ತರಿಸಿಕೊಂಡರೆಂತಲೂ ಹೇಳಿದೆ.

ಹೀಗೆ ಮಂತ್ರಾಲಯಮಠದವರು ಸ್ಥಾಪಿಸಿದರೆ—ಈ ಸಂಗತಿಗಳು ಸಂಬತಕ್ಕವುಗಳಲ್ಲವೆಂದು ಉತ್ತರಾದಿಮಠದವರು ಹೀಗೆ ಹೇಳುವರು:—

ರಾಮಚಂದ್ರತೀರ್ಥರು ಮೊದಲು ವಿಬುಧೇಂದ್ರರಿಗೆ ಆಶ್ರಮಕೊಟ್ಟು ಸಾಧಾರಣ ಒಂದು ರಾಮಪ್ರತಿಮಾ-ಕೆಲವು ಸಾಲಿಗ್ರಾಮ ಮಾತ್ರ ಕೊಟ್ಟು ಸಂಚಾರಕ್ಕೆ ಕಳಿಸಿದರು ಮುಂದೆ ಅವಸಾನ ಕಾಲಕ್ಕೆ ಇವರು ಬರಲಿಲ್ಲವಾದ್ದರಿಂದ ತಮ್ಮಲ್ಲಿ ವಿದ್ಯಾಶಿಷ್ಯರಾಗಿದ್ದ ಉಡುಪಿಯ ಪೇಜಾವರ ಮಠದ ತುಳ-ವ ಬ್ರಹ್ಮಚಾರಿಗೆ ಆಶ್ರಮಕೊಟ್ಟು (ಇವರೇ ವಿದ್ಯಾನಿಧಿಗಳು) ಸಂಪೂರ್ಣ ಸಂಸ್ಥಾನವನ್ನೊಪ್ಪಿಸಿದರು. ಹೀಗಿದ್ದು—ರಾಮಚಂದ್ರತೀರ್ಥರು ಇನ್ನೂ ಪೂಜಾಮಾಡಲಿಕ್ಕೆ ಶಕ್ತರಾಗಿದ್ದಾಗಲೇ ಮಠ ಪ್ರಸಾರಾರ್ಥವಾಗಿ ಆಶ್ರಮಕೊಟ್ಟ ವಿಬುಧೇಂದ್ರರಿಗೆ ತಮ್ಮಲ್ಲಿರುವ ಮುಖ್ಯ ದೇವರುಗಳನ್ನೆಲ್ಲ ಕೊಟ್ಟುಬಿಟ್ಟರೆಂದು ಹೇಳುವದು ಎಷ್ಟು ಮಾತ್ರಕ್ಕೂ ಸಂಗತವಾಗಿ ತೋರುವದಿಲ್ಲ.

ಈ ವಿಷಯವಾಗಿ 'ಗುರುಕಥಾಕಲ್ಪತರು'ವೆಂಬ ಗ್ರಂಥದಲ್ಲಿ ಸ್ಪಷ್ಟವಾಗಿ ಹೀಗೆ ಹೇಳಿದೆ:—

ತತಸ್ತುರಾಮಚಂದ್ರಾಖ್ಯತೀರ್ಥಾಸಾಮ್ರಾಜ್ಯಮಾಗತಂ ||
ಕೃತ್ವಾಮುದಾಂದದುಃ ಶ್ರೀಮದ್ವಿಬುಧೇಂದ್ರೇಭ್ಯಏವಚ || ೨೩ ||
ಮಠಸ್ಥರಾಮಪ್ರತಿಮಾಮೇಕಾಂಸಾಧಾರಣಾಂತಥಾ ||
ಜಯತೀರ್ಥಾಚಾರ್ಯದತ್ತಂಸಾಲಗ್ರಾಮಮಹಯಾಸ್ಯಕಂ || ೨೪ ||
ದತ್ವಾನುಜ್ಞಾಂತಥಾತೇಭ್ಯಃಸಂಚಾರಾರ್ಥಂಮಹೀತಲೇ ||
ಪ್ರೇಷಯಾಮಾಸುರಥತತ್ಪ್ರಸಂಗಂಚಕ್ರಿರೇವರ್ಷೈಃ || ೨೫ ||
ಜಿತ್ವಾಮಾಯಿಗಣಾನ್‌ಗ್ರಾಮ್ಯಾನ್ ಸದ್ವೈಷ್ಣವಜಯಕಾಂಕ್ಷಿಣಃ ||
ಗುರುಭಿರ್ಬಹುಧಾಹೂತಾಅಪಿನೈವಗತಾಃಪುನಃ || ೨೬ ||
ತೇಷಾಂಮಾರ್ಗಂಪರೀಕ್ಷ್ಯಾರ್ಥರಾಮಚಂದ್ರಯತೀಶ್ವರಾಃ ||
ವಿದ್ಯಾನಿಧಿಮುನಿಭ್ಯಸ್ತುಸನ್ಯಾಸಂದದುರಾದರಾತ್ || ೨೭ ||

(ಸಪ್ತಮಃ ಶಾಖಾ ಸರ್ಗಃ)

ಇಷ್ಟೇ ಅಲ್ಲ, ಇದೇ ಗ್ರಂಥದ ಮುಂದಿನ ಅಷ್ಟಮಃಶಾಖಾಸರ್ಗದಲ್ಲಿ ಹೇಳಿರುವದೇನಂದರೆ:—

ತತಸ್ತುವಿಬುಧೇಂದ್ರಾಸ್ತೈರ್ಲಬ್ಧಂಪದಮವೇಕ್ಷ್ಯತೆ ॥
ಮೇನಿರೆತೈರಪಾಲ್ಯಂತದಸ್ಮಲ್ಲಭ್ಯಂಭವೇಧ್ರುವಂ ॥
ಇತಿನಿಶ್ಚಿತ್ಯಮನಸಾದತ್ತಂಸ್ವಗುರುಭಿಃಪುರಾ ॥
ಜಯತೀರ್ಥಾಚಾರ್ಯದತ್ತಂಸಾಲಿಗ್ರಾಮಂಪುರಾತನಂ ॥
ಹಯಗ್ರೀವಾಭಿಧಂತತ್ರಪೂರ್ಣಪ್ರಜ್ಞಸುರಾರ್ಚನೆ ॥
ವಿದ್ಯಾನಿಧಿಸಮೀಪಂತುನಿಧಾಯನಿಖಿಲೇಚ್ಛಯಾ ॥
ಏತೈರಪಾಲ್ಯಸಂಸ್ಥಾನಂವಯಮೇವೇತಿನಿಶ್ಚಿತಾಃ ॥
ಯಸ್ಮಾದ್ದೇಶಾತ್ಪರಾಯಾತಾಸ್ತಂದೇಶಂತೇಪುನರ್ಯಯುಃ ॥
(ಅಷ್ಟಮಃ ಶಾಖಾಸರ್ಗಃ)

ಸಂಸ್ಥಾನವು ಹ್ಯಾಗಾದರೂ ಕಡೆಗೆ ನಮ್ಮ ಪಾಲಿನದೇ ಇರುವದು. (ವಿದ್ಯಾನಿಧಿಗಳಿಗೆಸಂಸ್ಥಾನವನ್ನಾಳುವ ಯೋಗ್ಯತೆಯಿಲ್ಲವೆಂಬಽಭಿಪ್ರಾಯ) ಎಂಬದಾಗಿ ಮನಸ್ಸಿನಲ್ಲಿ ನಿಶ್ಚಯ ಮಾಡಿಕೊಂಡು ಗುರುಗಳು ಕೊಟ್ಟ ದೇವರನ್ನು ಅಂದರೆ ಹಯಗ್ರೀವ ಸಾಲಿಗ್ರಾಮವನ್ನು ವಿದ್ಯಾನಿಧಿಗಳ ಮುಂದೆ ತಂದಿಟ್ಟು ಯಾವ ದೇಶದಿಂದ ಬಂದಿದ್ದರೋ ಅಲ್ಲಿಗೇ ಹೊರಟು ಹೋದರು.

(ಇದರಲ್ಲಿ ಮೂಲ ರಾಮದೇವರ ಸುದ್ದಿಯೇ ಇರುವದಿಲ್ಲ.)

ಇದರ ಮುಂದೆ ಹೇಳಿರುವದನ್ನಿಷ್ಟು ಕೇಳಿರಿ:-

ಗತೇಷುತೇಷುಪಶ್ಚಾತ್ತುವಿದ್ಯಾನಿಧಿಮುನೀಶ್ವರಾಃ ॥
ಇತಸ್ತತಃಸಂಚರಂತೋಬಿದರೀಕೋಟಮಾಯಯುಃ ॥
ತಸ್ಮಿನ್‌ಪುರವರೇತೇಪಿವಿಬುಧೇಂದ್ರಮುನೀಶ್ವರಾಃ ॥
ಆಗತ್ಯಕಲಹಂಚಕ್ರುರ್ದೇವತಾರ್ಚನಕಾಂಕ್ಷಯಾ ॥
ರಾಜವೀಥ್ಯಾಂದ್ವಯೋರಾಸೀತ್‌ಕರಗ್ರಹಣಪೂರ್ವಕಃ ॥
ಕಲಹೋಭೂತದಾಕಸ್ಮಾತ್ಪುರೇಶೋಪಿಸಹಾನುಗಃ ॥.

.... .... .... .... .... .... .... ....

ಪರಸ್ಪರಂಲೇಖಯಿತ್ವಾಪತ್ರಂಕಲಹಶಾಂತಯೆ ॥
ವಿದ್ಯಾನಿಧಿಮುನೇರೇವಸಂಸ್ಥಾನಂಚೇತ್ಯಘೋಷಯತ್ ॥
ಉಭಾವಪಿಸಮಾಧಾಯಪಂಕ್ತಿಭೋಜನಪೂರ್ವಕೈಃ ॥
ದದೌತಾಭ್ಯಾಮನುಜ್ಞಾಂಚಮ್ಲೇಂಛರಾಜೋಪಿಧರ್ಮವಿತ್ ॥

ತತಸ್ತೌವಿಬುಧೇಂದ್ರಾಸ್ತೌಸಿರಾಶಾಜನಸಂಸದಿ ||
ಶ್ಲೋಕೈರೇವತಿರಶ್ಚಕ್ರುರ್ವಿದ್ಯಾನಿಧಿವ ಎನೀಶ್ವರಾನ್ ||
ರಾವಣೋಭಿಕ್ಷುರೂಪೇಣಜಹಾರಜನಕಾತ್ಮಜಾಂ ||
ವಿದ್ಯಾನಿಧಿಯತೀಂದ್ರೋಸೌಜಹಾರರಘುಪುಂಗವಂ ||

ಹಿಂದಾನೊಂದು ಸಮಯದಲ್ಲಿ ಬಿದಿರುಕೋಟೆಯೆಂಬ ತುರುಷ್ಕ ರಾಜನ ರಾಜಧಾನಿಯ ಬೀದಿಯಲ್ಲಿ ವಿದ್ಯಾನಿಧಿಗಳೂ-ವಿಬುಧೇಂದ್ರತೀರ್ಥರೂ ಕೂಡಲು ದೇವರ ಸಂಬಂಧವಾಗಿ ವಾಗ್ವಾದ ಮಾಡುತ್ತ ಹೊಡೆದಾಟಕ್ಕೆ ನಿಂತುಕೊಂಡರಂತೆ! ಆಗ ತುರುಷ್ಕರಾಜನು ಇದನ್ನು ಕಂಡು ಈ ಫಕೀರರು ಯಾಕೆ ಹೊಡೆದಾಡುತ್ತಾರೆಂದು ಕೇಳಲು ಬ್ರಾಹ್ಮಣಮಂತ್ರಿಯು ಪಂಥೀರು ತಾಮ್ರಕ್ಕೆ ಬಡದಾಡುತ್ತಿರುವರೆಂದು ಹೇಳಿದ್ದರಿಂದ (ದೇವರ ಹೆಸರು ಹೇಳಬಾರದೆಂದು ಹೀಗೆ ಹೇಳಿದನು.) ಇಷ್ಟಕ್ಕೇಕೆ ಬಡದಾಡುವಿರಿ? ಅದಕ್ಕೆ ನಾಲ್ಕುಪಟ್ಟು ತಾಮ್ರವನ್ನು ನಾನು ಕೊಡುತ್ತೇನೆಂದುಹೇಳಿ ಇಬ್ಬರನ್ನೂ ಸಮಾಧಾನ ಪಡಿಸಿ ಉಭಯತರಿಂದಲೂ ಲೇಖನಗಳನ್ನು ಬರೆಯಿಸಿಕೊಂಡು ಹಿಂದೇ ಪಂಕ್ತಿಯಲ್ಲಿ ಭೋಜನ ಮಾಡಿಸಿ ಕಳಿಸಿಕೊಟ್ಟನಂತೆ. ಅದರಿಂದ ವಿಬುಧೇಂದ್ರರು ವಿದ್ಯಾನಿಧಿಗಳನ್ನು ತಿರಸ್ಕಾರಮಾಡುವ ಉದ್ದಿಶ್ಯವಾಗಿ 'ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋದಂತೆ ವಿದ್ಯಾನಿಧಿಯೆಂಬ ರಾವಣಸಂನ್ಯಾಸಿಯು ಮೂಲ ದಿಗ್ವಿಜಯ ರಾಮನನ್ನು ಅಪಹರಿಸಿಕೊಂಡು ಹೋದನು.' ಎಂಬದಾಗಿ ಹೇಳಿಕೊಳ್ಳುತ್ತ—

ಬದ್ಧ್ವೈವಮಾದಿಶ್ಲೋಕಾಂಸ್ತೌಪ್ರೋಚುರ್ನೃಜನಸಂಸದಿ ||
ತಾಮ್ರಪುತ್ತಲಿಕಾಚೇಯಂಮೋಕ್ಷಂದಾಸ್ಯತಿಕಿಂಮಮ ||
ಹೃತ್ಪದ್ಮಸಂಸ್ಥಿತೋಲಕ್ಷ್ಮೀರಮಣಃಕರುಣಾನಿಧಿಃ ||
ಸಏವಮೋಕ್ಷ ವೇ ದದ್ಯಾದಿತ್ಯುಕ್ತ್ವಾನಿರ್ಗತಾಃಪುರಾತ್ ||

ನಮ್ಮ ಹೃದಯಕಮಲ ವಾಸಿಯಾದ ಶ್ರೀಮಲ್ಲಕ್ಷ್ಮೀರಮಣನೇ ಮುಕ್ತಿಯನ್ನು ಕೊಡುವ ಭಾವ ಧರ್ಮವುಳ್ಳವನಲ್ಲದೆ ಈ ತಾಮ್ರಪುತ್ಥಲಿಕೆ (ಗೊಂಬೆ) ಗಳೇನು ಕೊಡಬಲ್ಲವು? ಹೀಗೆಂದು ಹೇಳಿಕೊಂಡು ಹೊರಟುಹೋದರಂತೆ!

ಇದರಮೇಲಿಂದ ರಾಮಚಂದ್ರತೀರ್ಥರು ವಿಬುಧೇಂದ್ರರಿಗೆ ಮೂಲ ರಾಮದೇವರನ್ನು ಕೊಟ್ಟಿದ್ದರೆಂಬ ಮಾತೇ ಸುಳ್ಳಾಗುವದು. ಅಂದಮೇಲೆ

ಅನ್ಯೈರುಪಹೃತಾಮರ್ಚಾಂರಾಮಸ್ಯರಘುನಂದನಃ ||

ಆಜಹಾರ ಪುನರ್ವರ್ಾಲ್ಯಾತ್ ಶ್ರೀಸುರೇಂದ್ರಗುರೋರ್ಗುರುಃ ||
(ಉತ್ತರಾದಿ ಮಠದ ವಿದ್ಯಾನಿಧಿಗಳು ರಾಮದೇವರನ್ನು ಅಪಹರಿಸಿ ಕೊಂಡು ಹೋಗಿದ್ದರು ಅದನ್ನು ನಮ್ಮ ಮಠದ ರಘುನಂದನರು ಮೌಲ್ಯ ಕೊಟ್ಟು ತರಿಸಿಕೊಂಡರು.) ಎಂದು ಹೇಳುವ ಮಂತ್ರಾಲಯ ಮಠದವರ ಮಾತನ್ನು ಎಂತಹವನೂ ನಂಬಲಾರನು.

ಇನ್ನು—ವಿದ್ಯಾನಿಧಿಗಳೇ ಅಪಹರಿಸಿದರೆಂದು ಕಲ್ಪಿಸೋಣ. ಹಾಗಾದರೆ—ಯಾವ ದೇವರ ದಸೆಯಿಂದ ಅವರು ಇಷ್ಟು ಹೊಡೆದಾಟ ಮಾಡಿದರೊ ಅಂತಹ ದೇವರನ್ನೇ ಅವರ ಮುಂದಿನ ಸ್ವಾಮಿಗಳು ಕ್ರಯಕ್ಕೆ ಕೊಟ್ಟು ಬಿಡೋಣವೆಂದರೆ, ಎಷ್ಟು ಹಾಸ್ಯಾಸ್ಪದವಾದ ಮಾತು!

ಆದರಲ್ಲಿಯೂ ಸೀತಾಪ್ರತಿಮೆಯನ್ನು ಬಿಟ್ಟು (ದಂಪತಿಗಳನ್ನಗಲಿಸಿ) ರಾಮಪ್ರತಿಮೆಯೊಂದನ್ನೇ ಉತ್ತರಾದಿಮಠದವರು ಏಕೆ ಮಾರಿಕೊಂಡರೊ, ಮಂತ್ರಾಲಯಮಠದವರು ಅದೊಂದನ್ನೇ ಏಕೆ ತಕ್ಕೊಂಡರೋ, ಇದನ್ನು ಹೇಗೆ ನಂಬಬೇಕೋ ವಾಚಕರೇ ವಿಚಾರಿಸಲಿ

ಇದೊತ್ತಟ್ಟಿಗಿರಲಿ. ಸಾಕ್ಷಾತ್ ನಾರದಾಂಶರೆನಿಸಿದ ಶ್ರೀಪುರಂದರ ದಾಸರು:—ತಾವು ಕಣ್ಣಾರೆ ಕಂಡ ಸಂಗತಿಯನ್ನು ಅಂದರೆ—ಉತ್ತರಾದಿ ಮಠದ ರಘುನಾಥತೀರ್ಥರ ಕಾಲದಲ್ಲಿ ಮಠದಲ್ಲಿ ಯಾವ ಯಾವ ಪ್ರತಿಮೆ ಗಳಿದ್ದವೆಂಬದನ್ನು ಸ್ಪಷ್ಟವಾಗಿ ಹೀಗೆ ಹೇಳಿದ್ದಾರೆ:—.

ರಾಗ | ಕಾಂಬೋಧಿ | ಝಂಪೆ

ಮಧ್ವರಾಯರ ದೇವತಾರ್ಚನೆಯಾ || ಪ || ಪ್ರಸಿದ್ಧ ರಘುನಾಥರು ಪೂಜಿಸುವ ಸೊಬಗುವಿನಾ || ಅ. ಪ ||

ಮೂಲ ರಘುಪತಿವಂದು ಮುದ್ದು ಜಾನಕಿವಂದು| ಲೀಲದಿಗ್ವಿಜಯ ರಾಮಮೂರ್ತಿವಂದು || ಸಾಲಿಗ್ರಾಮಹಯಗ್ರೀವ ಮೊದಲಾದುವು ನಾಲ್ಕು | ಚೆಲುವ ಸುದರ್ಶನಗಳೆರಡು ಚಕ್ರಾಂಕಿತಗಳೈದು || ೧ ||

ಅಭಿಷೇಕಶಂಖವೊಂದು ಅಕ್ಷಯ ಪಾತ್ರೆಯು ಒಂದು | ಶುಭ ನಿಧಿಯ ಬಲಮುರಿಯ ಶಂಖವೊಂದು || ವುಭಯ ಪಕ್ಷಿಮಧೇನುವೊಂದು ಉತ್ತಮವಾದ ಮುದ್ರೆಯೊಂದು ಚಕ್ರಾಂಕಿತಗಳೆರಡು ಬಾಣವೆರಡು|| ೨ ||

ವೇದವ್ಯಾಸಮೂರ್ತಿನಾಲ್ಕು ಕ್ಷೀರದಲೋಲ್ಯಾಡುವ ಕೂರ್ಮ ವೊಂದು ಸ್ಮರಿಸಿ ಇಪ್ಪತ್ತೆಂಟು ಮೂರುತಿಗಳನು|| ಪುರಂದರವಿಠಲನ ಪೂರ್ಣ

ಭಕ್ತರೆಂಬ ಈ ರಘುನಾಥತೀರ್ಥರು ಎಷ್ಟು ಪುಣ್ಯವಂತರೋ ॥ ೩ ॥

ಇದರ ಮೇಲಿಂದ ರಘುನಾಥತೀರ್ಥರ ಕಾಲದಲ್ಲಿ ಶ್ರೀಮೂಲರಾಮ ದೇವರು ಉತ್ತರಾದಿಮಠಪಲ್ಲಿತ್ತೆಂದು ಒಪ್ಪಬೇಕಾಗುವದಲ್ಲವೆ? ಇವರು ಸಂಸ್ಥಾನವಾಳಿದ್ದು ಶಕ ೧೩೬೬-೧೪೨೪ವರೆಗೆ. ವಿಬುಧೇಂದ್ರರು ಶಕ ೧೩೫೮-೧೪೦೮ವರೆಗೆ. ಜಿತಾಮಿತ್ರರು ೧೪೦೮-೧೪೨೦ವರೆಗೆ. ರಘುನಂದನರು ೧೪೨೦-೧೪೩೫ವರೆಗೆ. ಅಂದಮೇಲೆ ಉತ್ತರಾದಿಮಠದ ರಘುನಾಥತೀರ್ಥರು ದೇಹವಿಟ್ಟನಂತರ ರಘುವರ್ಯತೀರ್ಥರ ಕಾಲದಲ್ಲಿ (೧೪೨೪-೧೪೭೯)ಯೇ ಮಂತ್ರಾಲಯಮಠದ ರಘುನಂದತೀರ್ಥರು ಮೌಲ್ಯ ಕೊಟ್ಟು ತರಿಸಿಕೊಂಡರೆಂದು ಒಂದುವೇಳೆ ಹೇಳಬಹುದು; ಆದರೆ ಅದೇ 'ಗುರುಕಥಾಕಲ್ಪತರು' ವಿನಲ್ಲಿ ರಘುವರ್ಯತೀರ್ಥರ ವಿಷಯಕ್ಕೆ ಏನು ಹೇಳಿರುವದೋ ನೋಡಿರಿ.

ತತಃ ಸಂಸ್ಥಾನಸಂಯುಕ್ತಾ ರಘುವರ್ಯಮುನೀಶ್ವರಾಃ ।
ಚಾತುರ್ಮಾಸ್ಯಪ್ರವೇಶಾರ್ಥಂ ಮುದಾ ಮಣಿಪುರಂ ಯಯುಃ ॥
ತದಾ ಪಾಷಾಣಗ್ರಾಮಸ್ಥಮ್ಲೇಂಛರಾಜೋ ಯದೃಚ್ಛಯಾ ।
ತತ್ರಾಕಸ್ಮಾದಾಜಗಾಮ ತತ್ಪುರಂ ಪರಿವೇಷ್ಟಿತುಂ
ದೃಷ್ಟ್ವಾ ತತ್ಸೈನ್ಯಸಂಭಾರಂ ರಘುವರ್ಯಮುನೀಶ್ವರಾಃ ।
ಮ್ಲೇಂಛಭೀತ್ಯಾ ಪುರಂ ತ್ಯಕ್ತ್ವಾ ಶೀಘ್ರಂ ಭೀಮರಥೀಂ ಯಯುಃ॥
ಅಗ್ರೇ ಭೀಮರಥೀಪೂರ್ಣೇ ಪೃಷ್ಠೇ ಸೈನ್ಯಂ ಸಮಾಗತಂ।
ಉಭಯೋದ್ವಿಗ್ನಮನಸೋ ನದೀಂ ತಾಂ ವಿವಿಶುರ್ದ್ರುತಂ॥
ಜ್ಞಾತ್ವಾ ತದಾ ಭೀಮರಥೀ ಮೂಲರಾಮಂ ಸಮಾಗತಂ।
ಭಕ್ತ್ಯಾಮಾರ್ಗಂ ದದೌ ತೇ ಭ್ಯಃಪದ್ಭ್ಯಾಂತೀರ್ತ್ವಾ ತಟಂಯಯುಃ

(ಏಕಾದಶಃ ಶಾಖಾಸರ್ಗಃ)

(ರಘುವರ್ಯತೀರ್ಥರು ಒಮ್ಮೆ ಚಾತುರ್ಮಾಸ್ಯಕ್ಕೆ ಕೂಡಬೇಕೆಂದು ಭೀಮಾನದೀತೀರದಲ್ಲಿರುವ ಮಣಿಪುರವೆಂಬ ಪಟ್ಟಣಕ್ಕೆ ಹೋದರು. ಅಲ್ಲಿಯ ಮ್ಲೇಂಛರಾಜನು ಇವರನ್ನು ಸುಲಿಯಬೇಕೆಂದು ಇದೇ ಹೊತ್ತನ್ನು ಸಾಧಿಸಿ ಪಟ್ಟಣದ ಮೂರು ಭಾಗದಲ್ಲೂ ದಂಡನ್ನು ಕೂಡ್ರಿಸಿದನು. ಈ ಸುದ್ದಿಯು ಶ್ರೀಗಳವರಿಗೆ ತಿಳಿಯಲು ಅವರು ಎಲ್ಲವನ್ನೂ ಕಟ್ಟಿಕೊಂಡು ಭೀಮಾನದಿಯ ದಿಕ್ಕಿಗೆ ಹೋದರು. ಅಲ್ಲಿಯಾದರೋ ನದಿಯು ಮಹಾ

ಪೂರ ಬಂದಿತ್ತು. ಉಳಿದೆಡೆಯಲ್ಲಿಲ್ಲ ತುರುಷ್ಕರಾಜನ ದಂಡು. ಹೀಗಾಗಿ ರಘುವರ್ಯತೀರ್ಥರು ಉಪಾಯಗಾಣದೆ ಶ್ರೀಮೂಲರಾಮದೇವರ ಪೆಟ್ಟಿಗೆಯನ್ನು ಹೆಗಲಿಗೆ ಹಾಕಿಕೊಂಡು-ಪ್ರಭು ರಾಮನೊಂದಿಗೆ ನೊಡನೆ ನದಿಯಲ್ಲಿ ಮುಳುಗಿ ಹೋಗಲಿ ಇಲ್ಲವೆ ಆತನ ಪ್ರಭಾವದಿಂದ ಪಾರಾಗಲಿ ಎಂದಂದುಕೊಂಡು ಏಕದಾ ನದಿಯಲ್ಲಿ ಧುಮುಕಿದರು. ಹೀಗೆ ಅತ್ಯಂತಭಕ್ತಿಭಾವದಿಂದ ಬಂದ ಶ್ರೀಗಳವರನ್ನು ನೋಡಿ ಭೀಮರಥಿಯು ಕಾಲಿನಿಂದಲೇ ದಾಟುವಂತೆ ಮಾರ್ಗಮಾಡಿ ಕೊಟ್ಟುಬಿಟ್ಟಳು')

ಅಂದಮೇಲೆ ಶ್ರೀರಘುವರ್ಯತೀರ್ಥ ಕಾಲದಲ್ಲಿಯೂ ಮೂಲರಾಮದೇವರು ಅವರಲ್ಲಿಯೇ (ಉತ್ತರಾದಿಮಠದಲ್ಲಿ) ಇತ್ತೆಂದು ಗೊತ್ತಾಗುವದಿಲ್ಲವೇ?

ಈ ವಿಷಯದಲ್ಲಿ ಇನ್ನೊಂದು ಐತಿಹ್ಯವೇನಂದರೆ:—

ಶ್ರೀವ್ಯಾಸರಾಯಸ್ವಾಮಿಗಳವರು ಹಮ್ಮೆ ಆನೆಗೊಂದಿಯರಾಜನ ಸಹಾಯದಿಂದ ಉತ್ತರಾದಿಮಠದ ಶ್ರೀರಘುವರ್ಯತೀರ್ಥರನ್ನು ನಿರ್ಬಂಧಪಡಿಸಿ:—ಮೂಲ ರಾಮದೇವರ ಪೂಜೆಮಾಡಬೇಕೆಂದ ಪೆಟ್ಟಿಗೆಗಳನ್ನು ಬಿಚ್ಚಲು ಘಟಸರ್ಪಗಳು ಹೊರಟವಂತೆ! ಅದರಿಂದ ಪೆಟ್ಟಿಗೆಯನ್ನುಮುಚ್ಚಿ ಹಾಗೇ ಮಂಗಳಾರತಿ ಮಾಡಿದರಂತೆ. ಆಗ ಶ್ರೀವ್ಯಾಸರಾಯರು:—

'ಎನಬಿಂಬಮೂರುತಿಯ ಪೂಜಿಪೆನು ನಾನು' ||

ಎಂಬದಾಗಿ ಕೀರ್ತನ ಮಾಡಿದ್ದಾರೆ

ಮರುದಿವಸ ಸ್ವಪ್ನದಲ್ಲಿ—'ನಿಮಗೆ ಈ ಜನ್ಮದಲ್ಲಿ ಮೂಲರಾಮದೇವರ ಪೂಜೆಮಾಡುವ ಅಧಿಕಾರವಿಲ್ಲ. ಮುಂದೆ ಸತ್ಯಸಂಧರಾಗಿ ಹುಟ್ಟಿ ಪೂಜೆಮಾಡುವಿರಿ' ಎಂದು ಹೇಳಿದಂತಾಯಿತು.

ಇವರಮೇಲಿಂದ ಶ್ರೀರಘುವರ್ಯತೀರ್ಥರ ಹಾಗೂ ಸತ್ಯಸಂಧರ ಕಾಲದಲ್ಲಿ ಮೂಲರಾಮದೇವರು ಉತ್ತರಾದಿ ಮಠದಲ್ಲಿಯೇ ಇತ್ತೆಂದು ಸ್ಪಷ್ಟವಾಗುವದು.

ಇದೂ ಹಾಗಿರಲಿ,— ಸಾಕ್ಷಾತ್ ಶ್ರೀಮದ್ರಾಘವೇಂದ್ರಗುರುಗಳವರೇ ಉತ್ತರಾದಿ ಮಠದ ಶ್ರೀವೇದನಿಧಿಗಳೆಂಬ ಸ್ವಾಮಿಗಳವರಿಗೆ ಬರಕೊಟ್ಟ ಪತ್ರವೊಂದನ್ನು ಇಲ್ಲಿ ನಿವೇದಿಸುವೆವು ಶ್ರೀ ರಾಘವೇಂದ್ರರಕಾಲ (ಶಕ ೧೫೧೬-೧೫೯೩)ವೇದನಿಧಿಗಳಕಾಲ(ಶಕ ೧೫೫೩-೧೫೬೭) ಇವರು

ಶ್ರೀವಿದ್ಯಾಧೀಶತೀರ್ಥರ ತರುವಾಯ ಬಂದವರು.

ತಾಂವಾತರ್ಾಂಸ್ವಜನ್ಯೈಃಶ್ರುತ್ವಾರಾಘವೇಂದ್ರಮುನೀಶ್ವರಾಃ ||
ವೇದನಿಧ್ಯಾಖ್ಯತೀರ್ಥಾನಾಂದರ್ಶನಾರ್ಥಂಸಮಾಗತಾಃ ||
ಬಾಲಗುಂಡಾಪುರಪ್ರಾಂತ ವಾಪ.......ಕಾದ್ರಿವರ್ತ್ಮನಿ ||
ಆರಾಮೇಭೂದ್ವಯೋಸ್ತತ್ರದರ್ಶನಂ ಚಪರಸ್ಪರಂ ||
ಅಥಾಗತಾನ್‌ರಾಘವೇಂದ್ರಾನ್‌ಮಾನಯಿತ್ವಾಸಭಾತಲೆ ||
ಏವಂ ಪಂಕ್ತೌ ಭೋಜನಾಂತ್ಯೇಃ ಸಾಕಂ ಚಕ್ರುರ್ಗುರೂತ್ತಮಾಃ|
ಅಥೋಪವಿಷ್ಟಾಃ ಸದಸಿ ರಾಘವೇಂದ್ರಮುನೀಶ್ವರಾಃ ||
ಶ್ರೀವೇದನಿಧಿತೀರ್ಥೇಭ್ಯಃ ಸ್ವಹಸ್ತಾಕ್ಷರಪತ್ರಿಕಾಂ ||
ಲಿಖಿತ್ವಾ ಪುರತಸ್ತೇಷಾಂ ಸ್ಥಾಪಯಿತ್ವಾತಿನಿಸ್ಪೃಹಾಃ ||
ಪಶ್ಯತಾಮಿತಿ ತಾನೂಚುರ್ಮುದಾ ಕಪಟವರ್ಜಿತಾಃ ||
(ಪಂಚದಶಃ ಶಾಖಾಸರ್ಗಃ)

ಈ ಪ್ರಕಾರ ರಾಘವೇಂದ್ರತೀರ್ಥರೂ-ವೇದನಿಧಿಗಳೂ ಬಾಲಗುಂಡಪು ಪ್ರಾಂತದ ತೋಟದಲ್ಲಿ ಹಿಬ್ಬರಿಗೊಬ್ಬರು ಭೇಟಿಯಾದಾಗ ಪ್ರೀತಿಯಿಂದ ಏಕಪಂಕ್ತಿಭೋಜನಮಾಡಿಕೊಂಡು ಕುಳಿತರೆಂತಲೂ, ಆಗ ಶ್ರೀರಾಘವೇಂದ್ರರು ಸ್ವಹಸ್ತಾಕ್ಷರಪತ್ರಿಕೆಯೊಂದನ್ನು ವೇದನಿಧಿಗಳಿಗೆ ಬರೆದು ಕೊಟ್ಟರೆಂತಲೂ ಹೇಳಿದೆ. ಆ ಪತ್ರಿಕಾಭಿಪ್ರಾಯವು ಹೀಗಿರುವದು:—

ಪುರಾ ರಾಚೂರದೇಶೇಭೂನ್ನಾರಾಯಣಯತಿಸ್ತದಾ ||
ವೇದವ್ಯಾಸಮುನಿಶ್ರೇಷ್ಠೈಃ ಸಂನ್ಯಾಸಂ ಸಂಗೃಹೀತವಾನ್ ||
ಲಂಕಾಪುರಂ ಸಮಾಗತ್ಯ ಪೂಜನಾರ್ಥಂ ಸದಾತ್ಮನಾ ||
ಶಿಲ್ಪಿನಾ ಕಾರಯಾಮಾಸ ರಾಮಮೂರ್ತಿಮನೋಹರೆ ||
ತೇ ಸ ಚಕ್ರೇ ತಾಮ್ರಮುಕ್ತಾಃ ಬುಧ್ವಾ ವರ್ತುಲಪೀಠಗೆ ||
ಪ್ರತಿಷ್ಠಾಪ್ಯ ಸ ತತ್ರೈಕಾಂ ಸ್ವಮೈತ್ರಾಯ ದದೌ ಮುದಾ ||
ಮಾಳಿಗೀತಿಮರ್ಲಾಖ್ಯಾನಭಟ್ಟಾಯೈಕಾಂ ಸಮರ್ಪ್ಯತಾಂ ||
ದ್ವಿತೀಯಂ ಪರಯಾ ಭಕ್ತ್ಯಾ ಸ್ವಯಮೇವ ನಿರಂತರಂ ||
.... .... ....
ತಾಂ ಪತ್ರಿಕಾಂ ಸಭಾಮಧ್ಯೇ ಮುರಾರಾಚಾರ್ಯನಾಮಕಃ ||
ವಾಚಯಿತ್ವಾ ಜಹಿಷ್ಯಾಕಂ ಚಕ್ರೇ ಸಂನ್ಯಾಸಿನೆ ತದಾ ||

ಸ ನಾರಾಯಣಸಂನ್ಯಾಸೀ ತಸ್ಮಾದ್ಗುರುಬಹಿಷ್ಕೃತಃ ||
ಗತ್ವಾ ಸುಧೀಂದ್ರಸ್ವಾಮಿಭ್ಯಃ ತೇಷಾಂ ಶಿಷ್ಯೋ ಬಭೂವ ಹಿ ||

....           ....           ....

ಗೃಹೀತ್ವಾ ಮೂಲರಾಮಸ್ಯ ಪ್ರತಿಮಾಲೋಕಸನ್ನಿಧೌ ||
ಮದಾಮೋಕ್ಷತ್ವಯಾಪ್ಯೇವಂ ವಕ್ತವ್ಯಂ ಲೋಕಸನ್ನಿಧೌ ||

....           ....           ....

ತಾಂ ಗೃಹೀತ್ವಾಥ ಹಸ್ತಾಭ್ಯಾಂ ರಂಗವಲ್ಯಾದಿಸಾಧನೈಃ ||
ಘರ್ಷಯಿತ್ವಾ ಬಹುದಿನಂ ಕೃತ್ವಾ ಮೂರ್ತಿಪುರಾತನಾಂ ||
ಪೂಜನಾರ್ಥಂ ಸ್ಥಾಪಯಿತ್ವಾ ಬಧ್ವಾ ಶ್ಲೋಕಂ ಸ್ವಸಾಧಕಂ ||

....           ....           ....

ಅನ್ಯೈರಪಹೃತಾಮೂಲಮೂರ್ತಿಂ ಶ್ರೀರಘುನಂದನಂ ||
ಆಜಹಾರ ಪುನರ್ಮೌಲ್ಯಾತ್ ಶ್ರೀಸುಧೀಂದ್ರಗುರೋರ್ಗುರುಃ ||
ಇತ್ಥಂ ಶ್ಲೋಕಂ ಕಲ್ಪಯಿತ್ವಾ ಕೃತ್ರಿಮಾಂ ಪ್ರತಿಮಾಂ ನಿಜಾಂ ||
ವಿಶ್ವಕರ್ಮಕೃತೋ ಮುಕ್ತ್ವಾ ದೇವದ್ರೋಹಂ ಪ್ರಚಕ್ರಿರೆ ||
ತತೋ ನಾರಾಯಣಾಖ್ಯಸ್ಯ ತಸ್ಯ ಸಂನ್ಯಾಸಿನೋಖಿಲಂ ||
ಶರೀರಂ ಕುಷ್ಠರೋಗೇಣ ವಿವರ್ಣಂ ಮಲನೀಕೃತಂ ||

....           ....           ....

ಕೃಪಯಾ ತೇ ತತಸ್ತಸ್ಮೈ ಹಸ್ತಶೌಚಸ್ಯ ಮೃತ್ತಿಕಾಂ ||
ಲೇಪಯಸ್ವ ಸದೇತ್ಯಾಜ್ಞಾಂ ದದುಃ ಪ್ರೀತಿಪುರಃಸರಂ ||

....           ....           ....

ತತ್ಪತ್ರಂ ಚಾಸ್ತಿ ಭವತಾಂ ಮಠೇದ್ಯಾಪಿ ಪುರಾತನಂ ||
(ಪಂಚದಶಃ ಶಾಖಾಸರ್ಗಃ)

[ಶ್ರೀವೇದವ್ಯಾಸತೀರ್ಥರಿಂದ ಆಶ್ರಮ ಪಡೆದ ನಾರಾಯಣಯತಿಗಳೆಂಬ ಬಿಡಿ ಸಂನ್ಯಾಸಿಗಳು ಬಂಕಾಪುರ ಪ್ರಾಂತದಲ್ಲಿ ಸಂಚರಿಸುತ್ತಿದ್ದಾಗ ಒಬ್ಬ ಬುದ್ಧಿವಂತ ಶಿಲ್ಪಿಯಲ್ಲಿ ಎರಡು ರಾಮಪ್ರತಿಮಾ ಮಾಡಿಸಿಕೊಂಡು ವಿಜಾಪುರದಲ್ಲಿದ್ದ ತಮ್ಮ ಆಪ್ತರಾದ ಮಳಿಗೀ ತಿಮ್ಮಣ್ಣಭಟ್ಟರಿಗೆ ಒಂದನ್ನು ಕೊಟ್ಟು ಇನ್ನೊಂದನ್ನು ತಾವು ಇಟ್ಟುಕೊಂಡಿದ್ದರು. ಮುಂದೆ ಇವರು ದಾಯಚೂರಿನಲ್ಲಿದ್ದಾಗ ಉತ್ತರಾದಿಮಠಾಧಿಪತಿಗಳಂತೆ ನಟಿಸಿ,

ಸ್ವಲ್ಪ ಔದ್ಧತ್ಯವನ್ನು ತೋರಿಸಲು, ಮುರಾರಾಚಾರ್ಯರೆಂಬ ಪ್ರಮುಖರು ವೇದವ್ಯಾಸತೀರ್ಥರಿಂದ ಇವರಿಗೆ ಬಹಿಷ್ಕಾರ ಹಾಕಿಸಿದರು. ಕೂಡಲೆ ನಾರಾಯಣಯತಿಗಳು ಸಿಟ್ಟಿನಿಂದ ಮಂತ್ರಾಲಯಮಠದ ಸುಧೀಂದ್ರರಲ್ಲಿ (ಶಕ ೧೫೫೭-೧೫೬೫) ಹೋದರು. ಸುಧೀಂದ್ರರು ಇವರ ಹತ್ತಿರಿದ್ದ ರಾಮಪ್ರತಿಮಾ ಇಸಕೊಂಡು ಅದನ್ನು ರಂಗವಲ್ಲಿನಿಂದ ತಿಕ್ಕಿ ಇದೇ ಮೂಲರಾಮದೇವರೆಂದು ಹೇಳಿಕೊಳ್ಳಹತ್ತಿದರು; ಮತ್ತು ನಾರಾಯಣ ಯತಿಗಳಿಗೂ ಹೀಗೆಯೇ ಹೇಳಿರೆಂದು ಒತ್ತಾಯಪಡಿಸಿದ್ದರಿಂದ ಅವರೂ ಹೀಗೆಯೇ ಹೇಳಹತ್ತಿದರು. ಅದರಿಂದ ಅವರಿಗೆ ಕುಷ್ಠರೋಗವು ಪ್ರಾಪ್ತವಾಯಿತು ಆಗ ತಿರುಪತಿಯಲ್ಲಿ ಸೇವೆಮಾಡಲು—ನೀನು ಗುರುದ್ರೋಹ ಮಾಡಿರುವಿ. ವೇದವ್ಯಾಸತೀರ್ಥರ ಅನುಗ್ರಹ ಪಡೆದು, ಬಂದಲ್ಲಿ ಗುಣವಾಗುವದೆಂದು ಸ್ವಪ್ನವಾಯಿತು. ಅದರಂತೆ ಅವರು ಗುರ್ವನುಗ್ರಹ ಪಡೆಕೊಂಡು ಗುಣಹೊಂದಿದರು ]

ಈ ಪತ್ರವು ಅದ್ಯಾಪಿ ಉತ್ತರಾದಿಮಠದಲ್ಲಿರುವದು.

ಇಷ್ಟೇ ಅಲ್ಲ. ಮುಂದೆ ಕೆಲವು ದಿವಸದಮೇಲೆ ನಾರೋಶಂಕರ, ನಾರೋಭಾಸ್ಕರರೆಂಬ ಪ್ರಮುಖರು ಉತ್ತರಾದಿ ಮಠದೊಳಗಿರುವ ಕ್ಷೀರಾ ಭಿಷೇಕದಿಂದ ತಿರುಗುವ ಕೂರ್ಮವನ್ನು ನೋಡಿ ಆಶ್ಚರ್ಯಬಟ್ಟರೆಂತಲೂ ಸೀತಾಸಮೇತ ಶ್ರೀಮೂಲ ರಾಮದೇವರ ಪೂಜೆಯನ್ನು ನೋಡಿ ಆನಂದ ಬಟ್ಟರೆಂತಲೂ ಹೇಳಿದೆ.

ತಸ್ಮಿನ್ ದಿನೇಸಠಾತ್ಕೂರ್ಮೋಬಭ್ರಾಮನಿತರಾಂತದಾ ||
ನಾರೋಶಂಕರಮುಖ್ಯಾಸ್ತು ದೃಷ್ಟ್ವಾಶ್ಚರ್ಯಸಮನ್ವಿತಾಃ ||
ತತಃಸೀತಾಸಮೇತಸ್ಯಮೂಲರಾಮಸ್ಯಪೂಜನಂ ||
ದೃಷ್ಟ್ವಾಮೂರ್ತೇರ್ಲಕ್ಷಣಾನಿಬಭೂವುರ್ಭಕ್ತಿಸಂಯುತಾಃ ||

(ಏಕವಿಂಶಃಶಾಖಾಸರ್ಗಃ)

ಮತ್ತೊಂದು ಸಮಯದಲ್ಲಿ ವಿಜಯನಗರದ ವೆಂಕಟಪತಿರಾಯರು ೧೫೮೬-೧೬೧೪)ಮೂರೂಮಠದ ಯತಿಗಳನ್ನು ಕೂಡಿಸಿ ವಿಚಾರಿಸಲು ಆಗ ಎಲ್ಲರೂ ಜ್ಞಾನವೃದ್ಧರೂ-ವಯೋವೃದ್ಧರೂ ಆದ ಶ್ರೀವಾದಿರಾಜ ಸ್ವಾಮಿಗಳವರ ಕಡೆಗೆ ಹವಾಲಿಯನ್ನು ಹಾಕಿದರು. ಅವರು ಯಥಾರ್ಥ ವಾದವನ್ನು ಅಂದರೆ ಮೂಲ ರಾಮದೇವರು ಉತ್ತರಾದಿ ಮಠದಲ್ಲಿಯೇ

ಇರುವದೆಂದೂ ವಿಜಯನಗರದ ಅರಸರಲ್ಲಿರುವ ಕಾಗದಪತ್ರಗಳಲ್ಲಿಪ್ರತಿಮಾ ಲಕ್ಷಣಗಳೆಲ್ಲ ಹೇಳಲ್ಪಟ್ಟಿರುವದರಿಂದ ಅದರಂತೆ ಪರೀಕ್ಷಿಸಿಕೊಳ್ಳಬಹುದೆಂದೂ ಕಾಗದವನ್ನು ಬರೆದು ಕಳಿಸಿದರು. ಅದರಿಂದ ಸುಧೀಂದ್ರರು ವಾದಿರಾಜರ ಮೇಲೆ ಕೋಪಗೊಂಡರೆಂತಲೂ ಅದಕ್ಕೆ ವಾದಿರಾಜರು—

'ಕಳ್ಳು ಮನವೇ ವಿಭವವಿದ್ಯಾಮದಗಳೇ' |

ಎಂಬ ಗಾಯನವನ್ನು ರಚಿಸಿದರೆಂತಲೂ—ಇದೇ ಕಾರಣದಿಂದ ವಾದಿರಾಜರ ಪದಗಳನ್ನು ಮಂತ್ರಾಲಯ ಮಠದಲ್ಲಿ ಈಗ್ಯೂ ಹೇಳಿಸುವದಿಲ್ಲವೆಂತಲೂ ಅನ್ನುವರು.

ಇನ್ನೊಂದು ಚಮತ್ಕಾರವೇನೆಂದರೆ—ಗುರುಕಥಾ ಕಲ್ಪತರುವೆಂಬ ಗ್ರಂಥದಲ್ಲಿ ಬಂದ ಮೇಲಿನ ಕಥೆಯನ್ನೆಲ್ಲ ಮಂತ್ರಾಲಯ ಮಠದ ವಿಬುಧೇಂದ್ರತೀರ್ಥರೇ ಉತ್ತರಾದಿಮಠದ ರಘುನಾಥತೀರ್ಥರ ಎದುರಿಗೆ ಹೇಳಿ ಬರೆಯಿಸಿದರಂತೆ.

ಪುರಾತನಾಂಚಭಗವತ್ಪಾದಾನಾರಭ್ಯಚಾಗತಾಂ ||
ಲೇಖಯಿತ್ವಾ ಸಂಗ್ರಹೀತಾಂ ಸಂಸ್ಥಾನಸ್ಥೈಃ ಪುರಾತನೈಃ ||
ಸ್ವಾಧೀನಾಂ ಕತಯಾಮಾಸುರ್ವಿಬುಧೇಂದ್ರಮುನಿಶ್ವರಾಃ ||
ಶ್ರುತ್ವಾ ಕಥಾಂ ತೈಃ ಕಥಿತಾಂ ತದಾ ಪ್ರಾಕೃತಭಾಷಯಾ ||
ಲೇಖಯಿತ್ವಾ ಸ್ವಶಿಷ್ಯೈಸ್ತಾಂ ರಘುನಾಥಮುನೀಶ್ವರಾಃ ||
ವಿಬುಧೇಂದ್ರೈರನುಜ್ಞಪ್ತಾ ಜಗ್ಮುಸ್ತಸ್ಮಾದ್ವಿನಿರ್ಗತಾಃ ||

(ನವಮಃ ಶಾಖಾಸರ್ಗಃ)

ಇದನ್ನೇ ಕಲ್ಪತರುವಿನ ಗ್ರಂಥಕರ್ತನು(ಬಿದರಹಳ್ಳಿ ಶ್ರೀನಿವಾಸತೀರ್ಥರ ಮಕ್ಕಳು ವೆಂಕಟಾಚಾರ್ಯರ ಶಿಷ್ಯ ಪರಂಪರೆಯಲ್ಲೊಬ್ಬರು ಸತ್ಯಬೋಧ ಸ್ವಾಮಿಗಳ ಅನುಜ್ಞೆಯಿಂದ ಮಠದೊಳಗಿನ ಕಾಗದ-ಪತ್ರಗಳನ್ನೆಲ್ಲ ಶೋಧಿಸಿ ಬರೆದಿರುವರು.)ಗ್ರಂಥಾರಂಭದಲ್ಲಿ ಹೀಗೆ ಹೇಳಿಕೊಂಡಿದ್ದಾನೆ:—

ಪೂರ್ವಂ ಕೊಪ್ಪಾಭಿಧೇ ಕ್ಷೇತ್ರೇ ವಿಬುಧೇಂದ್ರಮುನೀಶ್ವರೈಃ||
ರಘುನಾಥಮುನಿಭ್ಯೋ ಯಾ ಪ್ರೋಕ್ತಾ ಗುರ್ವನ್ವಯೋದ್ಭವಾ||
ಕಥಾಸಾ ಲೇಖಯಿತ್ವಾತ್ವೈರ್ಬಧ್ವಾ ದರ್ಶನೆ ಪುಸ್ತಕೆ ||
ಸ್ಥಾಪಿತಾ ತದುಪರ್ಯನ್ಯಾ ಲಿಖಿತ್ವಾ ಸಾ ಮಠೇ ಸ್ಥಿತಾ ||

ತಾಂ ಸತ್ಯಬೋಧಶಿ ಷ್ಯಾದಾನುಜ್ಞ್ಯಯಾಸೀಯು ಸರ್ವಶಃ ||
ವಿಲೋಕ್ಯಾಹಂ ಗ್ರಂಥರೂಪಾಂ ಕುರ್ವೆಪೂರ್ವಾರ್ಥಂ ಸತಾಂ ಮುದೆ||

ಇವೆಲ್ಲವುಗಳಮೇಲಿಂದ---ರಘುವರ್ಯತೀರ್ಥರು (ಶಕ. ೧೪೩೪-೧೪೭೯) ವೇದವ್ಯಾಸತೀರ್ಥರು (ಶಕ. ೧೫೧೮-೧೫೪೧) ವೇದನಿಧಿತೀರ್ಥರು (ಶಕ ೧೫೫೩-೧೫೭೭) ಇವರುಗಳ ಕಾಲದಲ್ಲಿ ಮೂಲ ರಾಮದೇವರು ಉತ್ತರಾದಿಮಠಪಲ್ಲಿಯೇ ಇತ್ತೆಂದು ಸಿದ್ಧವಾದಂತಾಗುವದು

ಇದರಂತೆ (ಶಕ ೧೫೯೭-೧೬೨೮) ರ ವರೆಗೆ ಸಂಸ್ಥಾನವಾಳಿದ ಶ್ರೀಸತ್ಯಾಭಿನವತೀರ್ಥರ ಕಾಲದಲ್ಲಿಯೂ ಮೂಲ ರಾಮದೇವರು ಇದೇ ಮಠದಲ್ಲಿತ್ತೆಂದು ತಿಳಿದುಬರುವದು. ಈ ಸಂಗತಿಯು—ಸತ್ಯನಾಥವಿಜಯ ವೆಂಬ ಗ್ರಂಥದಲ್ಲಿ ಹೀಗೆ ವರ್ಣಿತವಾಗಿದೆ:—

"ಸತ್ಯಾಭಿನವತೀರ್ಥರು ಹಿಮ್ಮೆ ಕೃಷ್ಣಾತೀರದಲ್ಲಿರುವ ಯಾವದೋ ಹಿಂದು ಗ್ರಾಮದಲ್ಲಿ ವಾಸವಾಗಿರಲು ಅಲ್ಲಿಯ ನಬಾಬನಾದ ಬುಲ್ಲೀಖಾನ ನೆಂಬವನು ಮಠವನ್ನು ಸುಲಿಯಬೇಕೆಂದು ಸುತ್ತಲೂ ದಂಡನ್ನಿಟ್ಟನು. ಆಗ ಈ ಸಂಗತಿಯನ್ನು ತಿಳಿದು ಶ್ರೀಗಳವರು ಮೂಲ ರಾಮದೇವರ ಪೆಟ್ಟಗಯನ್ನು ಹೆಗಲಿಗೆ ಹಾಕಿಕೊಂಡು ರಘುವರ್ಯತೀರ್ಥರಂತೆ ಕೃಷ್ಣಾ ನದಿಯಲ್ಲಿ ಪ್ರವೇಶಮಾಡಿಬಿಟ್ಟರು ಆಗ್ಗೆ ಕೃಷ್ಣವೇಣಿಯು ಹಿಂದಕ್ಕೆ ವಸು ದೇವನಿಗೆ ಯಮುನೆಯು ಮಾರ್ಗವನ್ನು ಕೊಟ್ಟಂತೆ ಶ್ರೀಗಳವರಿಗೆ ಮಾರ್ಗ ವನ್ನು ಕೊಟ್ಟುಬಿಟ್ಟಳು. ಉಳಿದ ಪರಿವಾರವೆಲ್ಲವೂ ಹೊರಸಿನ ಕಾಲಿಗೆ ಕೊಡಗಳನ್ನು ಕಟ್ಟಿ ತೆಪ್ಪದಂತೆ ಮಾಡಿ ಅದರ ಮೇಲಿಂದ ಸಾಮಾನುವೆಲ್ಲ ವನ್ನೂ ದಾಟಸಿಕೊಂಡು ಬಂದರಂತೆ!

ಇದೇ ಮೇರೆಗೆ—ವ್ಯಾಸರಾಜ ವಿದ್ಯಾಸಿಂಹಾಸನ ಮಠದ ಯತಿ ಗಳಾದ ವಿದ್ಯಾನಾಥ ತೀರ್ಥರೆಂಬವರು(ಶಾ. ಶಕ ೧೪೬೧ರಲ್ಲಿ ವೃಂದಾ ವನಸ್ಥರಾದ ಶ್ರೀವ್ಯಾಸರಾಯರಿಂದ ಇವರು ೧೩ನೆಯವರು) ಶ್ರೀಮೂಲ ರಾಮದೇವರ ವಿಷಯದಲ್ಲಿ ಹೀಗೆ ಹೇಳಿದ್ದಾರೆ:—

'ಶ್ರೀಮಧ್ವಾರ್ಚಿತ ರಾಮಮೂರ್ತಿರಮಲಾ ಹ್ಯಾರ್ಯಮಠೇ ವರ್ತತೆ|
ಶ್ರೀವ್ಯಾಸಾರ್ಚಿತ ಕೃಷ್ಣಮೂರ್ತಿರಮಲಾ ಕುಂದಾಪುರೇವರ್ತತೆ |
ವಿದ್ಯಾನಾಥಮಠೇ ನ ವಾ ರಘುಪತಿರ್ನೃವಾಯದೂನಾಂಪತಿಃ|
ಸರ್ವಾಃಕೃತ್ರಿಮಮೂರ್ತಯೋಹ್ಯನುದಿನಂಕುರ್ವಂತುವೋಮಂಗಳಂ'||

ಅಂದರೆ—ಮೂಲರಾಮದೇವರು ಉತ್ತರಾದಿಮಠದಲ್ಲಿದ್ದಾರೆ. ವ್ಯಾಸಮುನಿವರದ ರುಕ್ಮಿಣೀಸತ್ಯಭಾಮಾಸಮೇತ ಮೂಲವೇಣೂ ಗೋಪಾಲ ಕೃಷ್ಣದೇವರು ಕುಂದಾಪುರ ವ್ಯಾಸರಾಜ ಮಠದಲ್ಲಿದ್ದಾರೆ. ನಮ್ಮಲ್ಲಿ ಎರಡೂ ಇಲ್ಲ.

ಹೀಗೆ ನಿರ್ಮಾತ್ಸರ್ಯದಿಂದ ಒಪ್ಪಿಕೊಂಡಿರುವರು.

ಇವರು ಮೊದಲು ಉತ್ತರಾದಿಮಠದ ಶಿಷ್ಯರಾಗಿದ್ದು, ಮುಂದೆ ಈ ಮಠಕ್ಕೆ ಚುನಾಯಿಸಲ್ಪಟ್ಟರು. ಆದರಿಂದ ಎಲ್ಲ ಮಠಗಳ ನಿಜ ಸ್ಥಿತಿ ಯನ್ನೂ ಬಲ್ಲವರಾಗಿದ್ದರು.

ಅಂದಮೇಲೆ—ಮಂತ್ರಾಲಯಮಠದ ರಘುನಂದನತೀರ್ಥರು (ಶಾ-ಶಕ ೧೫೨೦-೧೫೫೫) ಮೂಲರಾಮದೇವರನ್ನು ಮೌಲ್ಯ ಕೊಟ್ಟು ತರಿಸಿ ಕೊಂಡರೆಂದೂ ಅದು ಇಂದಿನ ವರೆಗೂ ನಮ್ಮ ಮಠದಲ್ಲಿಯೇ ಇರುತ್ತ ದೆಂದೂ-ಮಂತ್ರಾಲಯ ಮಠದವರು ಹೇಳಿಕೊಳ್ಳುವದು ಸರಿಯಾಗಿಲ್ಲ ವೆಂದೂ ಉತ್ತರಾದಿಮಠದವರು ಸ್ಥಾಪಿಸುವರು.

೩ ಇನ್ನು-ಮಂತ್ರಾಲಯಮಠದವರು-ಜಗನ್ನಾಥದಾಸರು-ಗೋಪಾಲ ದಾಸರು ಮೊದಲಾದವರ ಹೇಳಿಕೆಗಳನ್ನು ಪ್ರಮಾಣವಾಗಿ ತೋರಿ ಸುವರು. ಅಂದರೆ—

ಮೂಲರಾಮನಕೀಲಾಲಜಮಧುಪಾ ।
ರಾಘವೇಂದ್ರ ನಿಮ್ಮ ಚಾರುಚರಣವ ಸಾರಿದೆ ॥

ಎಂಬದಾಗಿ ಹೇಳಿದ್ದಾರೆ. ಇದರಂತೆ 'ರಾಮಾ ಸದ್ಗುಣಧಾಮಾ' ಎಂಬ ಪದದಲ್ಲಿಯೂ 'ಭುವನೇಂದ್ರ ಮುನಿಪಯನ್ನಾ' 'ರಾಮನನೋಡಿರ್ಪೆ' ಎಂಬ ಪದಗಳಲ್ಲಿಯೂ ಹೀಗೆವೇ ಹೇಳಿದ್ದಾರೆ. ಅಂದಮೇಲೆ—ನಮ್ಮ ಮಠದಲ್ಲಿಯೇ ಮೂಲ ರಾಮದೇವರಿರುವದೆಂದು ಮಂತ್ರಾಲಯ ಮಠದ ವರ ಅಭಿಪ್ರಾಯವು.

ಇದಕ್ಕೆ ಉತ್ತರಾದಿ ಮಠದವರು ಹೀಗೆನ್ನುವರು:—

ಜಗನ್ನಾಥದಾಸರೇ ಮೊದಲಾದವರು ಹೇಗೆ ಹೇಳಿರುವರೋ ಅದ ರಂತೆಯೇ ಕದರಮಂಡಲಗಿಯ ದಾಸರೆಂದು ಪ್ರಖ್ಯಾತರಾದ ಮಾಂಡವ್ಯ ಋಷಿಗಳ ಅಂಶಭೂತರಾದ ಹಿರೀ ಆಚಾರ್ಯರು ಶ್ರೀಸತ್ಯಬೋಧಸ್ವಾಮಿ ಗಳವರ ಎದುರಿನಲ್ಲಿ ಶ್ರೀರಾಮದೇವರ ಮೇಲೆ ಹಾಡಿದ ಜೋಗುಳ ಪದ

ವನ್ನು ಕೇಳಿರಿ.

ರಾಗ | ತಾಳ |

ಜೋ ಜೋ ಜೋ ಜೋ ಜೋ ಕೃಷ್ಣ ಪರಮಾ |
ನಂದಗೋಪಿಯ ಕಂದ ಮುಕುಂದ ಜೋ ಜೋ || ಪ ||
ಪೆಟ್ಟಿಗಿಯೊಳಗಿದ್ದ ಪರಿಪೂರ್ಣಕಾಮಾ |
ಮುಟ್ಟಿ ಭಜಿಸೊ ಮಹಾಯತಿಗಳ ಪ್ರೇಮಾ ||
ತೊಟ್ಟಿಲದೊಳಗೆ ಮಲಗಿದ ಮೂಲರಾಮಾ |
ಘಟ್ಟ್ಯಾಗಿ ತೂಗಿರಿ ಯತಿಗಳ ಪ್ರೇಮಾ || ೧ ||

---

ಅಂದಮೇಲೆ ಜಗನ್ನಾಥದಾಸರು ತಮ್ಮ ಕೀರ್ತನದಲ್ಲಿ ಹೇಳಿದ್ದು ರೂಢಿಯಿಂದ ಅಲ್ಲಿಯ ವರೆಗೂ ಹೇಳುತ್ತ ಬಂದ ನಾಮನಿರ್ದೇಶವೇ ಹೊರತು ಬೇರೆಯಲ್ಲ. ಅಂದರೆ—ಹಿಂದಣವರೆಲ್ಲರೂ ತಮ್ಮಲ್ಲಿದ್ದುದಕ್ಕೇ ಮೂಲರಾಮನೆಂದು ಹೆಸರಿಟ್ಟಿದ್ದರಿಂದ ಆ ಹೆಸರನ್ನೇ ಇವರಾದರೂ ಹೇಳಿ ಕೊಂಡಿರುವರಲ್ಲದೆ ತಮ್ಮ ಅಪರೋಕ್ಷ ಜ್ಞಾನದಿಂದ ಇದೇ ಮೂಲರಾಮ ನೆಂದು ನಿರ್ಣಯಮಾಡಿ ಹೇಳಿದ ಮಾತಲ್ಲ. ಅಥವಾ— ಈ ದಾಸವ ರ್ಯರು ಮಹಾ ಭಗವದ್ಭಕ್ತರಾದ್ದರಿಂದ ಅವರಿಗೆ ಯಾವ ರಾಮನಾದ ರೇನು? ಎಲ್ಲವೂ ಮೂಲರಾಮನಂತೆಯೇ ಕಾಣುವದು ಸ್ವಾಭಾವಿಕವಾ ಗಿದೆ. ಮಹಾಭಕ್ತಶಿಖಾಮಣಿಯಾದ ಹನುಮಂತನಿಗೆ ಯಾವ ಅವತಾರ ದಲ್ಲಾದರೇನು? ರಾಮರೂಪವೇ ತೋರುತ್ತಿರಲಿಲ್ಲವೇ? ಇದೂ ಹಾಗೆಯೇ 'ಅರ್ಚಕಸ್ಯ ತಪೋಬಲಾತ್' ಎಂಬಂತೆ ಈ ಮಹಾನುಭಾವರಿಗೆ ಹಾಗೆ ತೋರಿದುದೇನು ಆಶ್ಚರ್ಯವಲ್ಲ. ಈ ಮಾತಿಗೆ ಬಲಕೊಡುವ ಇನ್ನೊಂದು ಐತಿಹ್ಯವು ಹೀಗಿರುವದು:—

ಒಮ್ಮೆ ಒಬ್ಬ ಬ್ರಾಹ್ಮಣನು ಶ್ರೀರಾಘವೇಂದ್ರಸ್ವಾಮಿಗಳಲ್ಲಿ ಸೇವೆ ಮಾಡಿ ನಿಜವಾದ ಮೂಲರಾಮದೇವರು ಯಾವ ಮಠದಲ್ಲಿದ್ದಾರೆಂಬದನ್ನು ದಯವಿಟ್ಟು ನನಗೆ ತಿಳಿಸಬೇಕೆಂದು ಬೇಡಿಕೊಂಡನಂತೆ. ಆಗ ರಾಯರು:- **ಅದೂ ಮೂಲ, ಇದೂ ಮೂಲ; ನೀನು ಮಾತ್ರ ನಿರ್ಮೂಲ ಎಂದು ಹೇಳಿದರಂತೆ! ಅದರಂತೆ ಆ ಬ್ರಾಹ್ಮಣನು ನಿರ್ಮೂಲನಾದನೆಂಬ ಐತಿಹ್ಯವು ಉಭಯ ಮಠಗಳಲ್ಲಿಯೂ ಜನಜನಿತವಾಗಿದೆ.** ಈ ಪ್ರಕಾರ ಹೇಳಿದ ರಾಯರ ಅಭಿ

ಪ್ರಾಯವೂ ದಾಸರ ಅಭಿಪ್ರಾಯವೂ ಒಂದೇ ಇರಲಿಕ್ಕೇ ಬೇಕು.

ರಘುನಂದನರ ಕಾಲದಲ್ಲಿ (ಮಂತ್ರಾಲಯ ಮಠದವರು) ಬಾಡದ ಮನೆತನದ ಒಬ್ಬ ಬ್ರಾಹ್ಮಣನಿಂದ ಮೂಲರಾಮದೇವರನ್ನು ಕದಿಸಿ ತರಿಸಿ ಕೊಂಡರೆಂತಲೂ ಇದಕ್ಕೋಸ್ಕರ ಆ ಬ್ರಾಹ್ಮಣನಿಗೆ ವಂಶಪಾರಂಪರ್ಯ ವಾಗಿ ಇನಾಮುಗ್ರಾಮವೊಂದನ್ನು ಕೊಟ್ಟಿದ್ದಾರೆಂತಲೂ ಅಂದಿನಾರಭ್ಯ--

ವರ್ಣತಃ ಕರ್ಣತಶ್ಚೈವ ಪೀಠತಃ ಪರಿಮಾಣತಃ ||
ಪರಸ್ಥಸೀತಾಸದೃಶಃ ಮೂಲರಾಮಸ್ತು ಮನ್ಮಠೆ ||

ಹೀಗೆ ಹೇಳಿಕೊಳ್ಳುತ್ತಾರೆಂತಲೂ ಒಂದು ಪ್ರತೀತಿಯದೆ.

ಈ ಪ್ರಕಾರ—ಮಹಾನುಭಾವರಾದ ಮಂತ್ರಾಲಯಮಠದವರು ಕದಿಸಿ ತರಿಸಿಕೊಂಡರೆಂದು ಹೇಳುವದೂ ಅಥವಾ ಉತ್ತರಾದಿಮಠದವರು ಅದರಲ್ಲಿಯೂ ಹಿಂದಿನ ಕಾಲದವರು ಮೇಲಾಗಿ ಮಹಾ ಮಹಿಮರಾದ ಸ್ವಾಮಿಗಳು ದೇವರನ್ನು ಮಾರಲಿಕ್ಕೆ ಕೊಟ್ಟರೆಂದು ಹೇಳುವದೂ ಇವೆರಡೂ ಸಂಗತಿಗಳು ಅಸಂಗತವಾದವುಗಳೇ ಸರಿ

೪ ಮಂತ್ರಾಲಯ ಮಠದವರು ಇನ್ನೊಂದು ಹೇಳುವರು ಅದೇನೆಂದರೆ:—ನಮ್ಮ ಮಠದ ಕಾಗದಪತ್ರಗಳಲ್ಲೆಲ್ಲ 'ಮೂಲರಾಮೋ ವಿಜಯತೆ' ಎಂಬ ಮುದ್ರಿಕೆಯಿದ್ದು ಉತ್ತರಾದಿಮಠದಲ್ಲಿ 'ದಿಗ್ವಿಜಯರಾಮೋ ವಿಜಯತೆ' ಎಂಬದಾಗಿದೆ. ಅಂದಮೇಲೆ ಮೂಲರಾಮದೇವರು ನಮ್ಮಲ್ಲಿದೆಯೆಂದು ಹೇಳಬೇಕಾಗುವದು.

ಇದಕ್ಕೆ ಉತ್ತರಾದಿಮಠದವರು ಅನ್ನುವದೇನಂದರೆ:—

ಆರಂಭದಲ್ಲಿ ಶ್ರೀಮದಾಚಾರ್ಯರು ತಾವೇ ನಿರ್ಮಿಸಿದ ದಿಗ್ವಿಜಯ ರಾಮದೇವರನ್ನೇ ಪೂಜಿಸುತ್ತಿದ್ದರಷ್ಟೆ? ಆ ಕಾಲದಲ್ಲಿ 'ದಿಗ್ವಿಜಯರಾಮೋ ವಿಜಯತೆ' ಎಂತ ಮುದ್ರಿಕೆ ಹಾಕಹತ್ತಿದರು. ಮುಂದೆ ಅವರ ಆಳಿಕೆಯ ಕಡೆಯ ಭಾಗದಲ್ಲಿ ನರಹರಿತೀರ್ಥರಿಂದ ಮೂಲರಾಮದೇವರು ಅವರ ವಶಕ್ಕೆ ಬಂದದ್ದು ಸರ್ವರಿಗೂ ವಿದಿತವಾದದ್ದು. ಆಗ ಮೊದಲಿನ ಮುದ್ರಿಕೆಯನ್ನು ತೆಗೆದು 'ಮೂಲರಾಮೋವಿಜಯತೆ' ಎಂದು ಬರೆಯಬಹುದಾಗಿತ್ತು; ಆದರೆ ಅದರಲ್ಲೇನೂ ಅಷ್ಟು ಮಹತ್ವವು ತೋರದೆ ಇದ್ದುದರಿಂದ ಬಿಟ್ಟುಬಿಟ್ಟರೇ ಹೊರತು ಅನ್ಯಕಾರಣವಿಲ್ಲ ಮುಂದಿನವರಾದರೂ ಹಿಂದಿನವರ ಪದ್ಧತಿಯನ್ನೇ ಅನುಸರಿಸಿದರು. ಇನ್ನು—

ಹಿಂದುವೇಳೆ ನಿಮ್ಮಂತೆಯೇ ಒಪ್ಪಿಕೊಂಡಲ್ಲಿ—ಶ್ರೀಮದಾಚಾರ್ಯರಿಂದ-ರಾಮಚಂದ್ರತೀರ್ಥರವರೆಗೂ ಬಂದ ಸ್ವಾಮಿಗಳಲ್ಲಿ ಸಹ ಮೂಲರಾಮದೇವರು ಇದ್ದಿಲ್ಲವೆಂದೇ ಹೇಳಬೇಕಾದೀತು! ಯಾಕಂದರೆ ಅವರೆಲ್ಲರೂ-'ದಿಗ್ವಿಜಯ ರಾಮೋ ವಿಜಯತೆ' ಎಂಬ ಮುದ್ರಿಕೆಯನ್ನೇ ಹಾಕುತ್ತಾ ಬಂದಿದ್ದಾರೆ. ಇದನ್ನು ಯಾರಾದರೂ ಒಪ್ಪಬಹುದೊ?

ಇದೂ ಹಾಗಿರಲಿ—ನಿಮ್ಮಲ್ಲಿಯಾದರೂ ಪ್ರಾಚೀನ ಕಾಗದ-ಪತ್ರಗಳಲ್ಲಿಲ್ಲ ಶ್ರೀರಾಮ ಎಂದಿಷ್ಟೇ ಮುದ್ರಿಕೆಯು ಇತ್ತಲ್ಲದೆ 'ಮೂಲ ರಾಮೋವಿಜಯತೆ' ಎಂಬದಾಗಿ ಇದ್ದಿಲ್ಲ. ಅದು ಇತ್ತೀತ್ತಲಾಗಿ ಸಾಧನೆ ಮಾಡಿದ್ದು.

ಈ ಮಂತ್ರಾಲಯಮಠದವರು ತೋರಿಸುವ ಕಡೆಯ ಪ್ರಮಾಣ ವೇನಂದರೆ—ಪ್ರತಿಮಾ ಲಕ್ಷಣ. ಅದೇನಂದರೆ:—

ಶ್ರೀರಾಮಚಂದ್ರನು ಹೆಂಡತಿಯಾದ ಸೀತಾದೇವಿಯ ಪ್ರಾರ್ಥನಾನುಸಾರ ಆಕೆಗೆ ಪ್ರತಿಮೆಗಳನ್ನು ಕೊಡುವಾಗ್ಗೆ ಹೀಗೆ ಹೇಳಿರುತ್ತಾನೆ.

ಸರ್ವಲಕ್ಷಣ ಸಂಪನ್ನಾಂ ಪಾದದ್ವಿರದ ಸಂಯುತಾಂ ||
ಮಮೇಯಂ ಪ್ರತಿಮಾ ದೇವಿ ಯಥಾಹಂ ನಾತ್ರಸಂಶಯಃ ||
ಸರ್ವಾಭೀಷ್ಟಪ್ರದಾದೇವಿ ಮಯಾದತ್ತಾತವಾನಘೆ ||
ಶುಭ್ರಾಂತಾಮ್ರಮಯೀಂಶಸ್ತಾಂಬ್ರಹ್ಮಣಾಚಿರಪೂಜಿತಾಂ||

(ವಾಸಿಷ್ಠರಾಮಾಯಣ-ಅಧ್ಯಾಯ ೧೧)

ಈ ಪ್ರಕಾರ ತಾಮ್ರಮಯವಾದ ಶ್ರೀರಾಮಮೂರ್ತಿಯು ನಮ್ಮಲ್ಲಿ ಮಾತ್ರ ಇದೆಯೆಂದೂಇದಕ್ಕೆ ಅನುಗುಣವಾಗಿ ತಾಮ್ರದ ಸೀತಾಪ್ರತಿಮೆಯು ನಿಮ್ಮಲ್ಲಿರುವದೆಂದೂ ಮಂತ್ರಾಲಯ ಮಠದವರ ಅಭಿಪ್ರಾಯವು.

ಇದಕ್ಕೆ ಉತ್ತರಾದಿಮಠದವರು ಹೇಳುವದೇನಂದರೆ:—

ನಮ್ಮಲ್ಲಿಯೂ ಇಂತಹ ಮೂರ್ತಿಯೇ ಇದ್ದು—ಅದು ಸವೆದು ಸೂಕ್ಷ್ಮವಾದಷ್ಟು ನಿಮ್ಮಲ್ಲಿಯ ಮೂರ್ತಿಯು ಆಗಿರುವದಿಲ್ಲ. ಅಂದಮೇಲೆ ನಮ್ಮ ಮಠದ್ದೇ ಪೂರ್ವದ್ದು-ಮತ್ತು ನಿಜವಾದದ್ದು.

ಅಲ್ಲದೆ ವಿಜಯನಗರದ ಅರಸರೇ ಮೊದಲಾದವರಲ್ಲಿರುವ ಕಾಗದ-ಪತ್ರಗಳಲ್ಲಿದ್ದಂತೆ ಮೂರ್ತಿಯ ಲಕ್ಷಣವು ನಮ್ಮಲ್ಲಿರುವದು.

ಸಾರಾಂಶ—ಹೀಗೆ ಒಂದಕ್ಕೊಂದು ಭಿನ್ನಾಭಿಪ್ರಾಯವುಳ್ಳ ಲೇಖ

ಗಳೂ ಐತಿಹ್ಯಗಳೂ ಅನೇಕವಾಗಿ ದೊರೆಯುತ್ತಿರುವದರಿಂದ ಯಾವ ಮಠದವರೇ ಆಗಲಿ ತಮ್ಮದನ್ನೇ ಶ್ರೇಷ್ಠಮಾಡಿ ಇದಮಿತ್ಥಂ ಎಂದು ಹೇಳುವ ಹಾಗಿಲ್ಲ. ಇಷ್ಟಾಗಿ ಎರಡೂ ಮಠಗಳಿಗೆ ಶ್ರೀಮದಾಚಾರ್ಯರೇ ಮೂಲಪಾದ್ದರಿಂದ ಅಣ್ಣ-ತಮ್ಮಂದಿರಂತಿರುವ ಶಿಷ್ಯರು ನಾವು ಎರಡನ್ನೂ ಸಮವಾಗಿಯೇ ಭಾವಿಸಿ ಭಕ್ತಿಭಾವದಿಂದ ನಡೆದುಕೊಳ್ಳಬೇಕೇ ಹೊರತು, ಇಲ್ಲದ ವೈಷಮ್ಯ ಕಲಾಪಗಳನ್ನು ಬೆಳಿಸಿ ನಮ್ಮನ್ನು ನಾವೇ ದೂರಿಕೊಳ್ಳುವದು ಯೋಗ್ಯವಾಗಿರುವದಿಲ್ಲ ಉಭಯ ಮಠಗಳೂ ಶಿರಸಾಮಾನ್ಯವಲ್ಲದೆ ಒಂದು ಹೆಚ್ಚು, ಒಂದು ಕಡಿಮೆಯೆಂದು ಹೇಳುವ ಹಾಗಿಲ್ಲ.

ಶ್ರೀವ್ಯಾಸರಾಯರೇ ಸಾಕ್ಷಾತ್ತಾಗಿ ರಾಘವೇಂದ್ರರಾಗಿಯೂ ಅವರೇ ಮುಂದೆ ಸತ್ಯಸಂಧರಾಗಿಯೂ ಅವತರಿಸಿ ಆಯಾ ಮಠಗಳಲ್ಲಿ ಪೂಜೆಮಾಡಲಿಲ್ಲವೆ? ಹೀಗಿರಲು ಕೇವಲ ಮಂದಮತಿಗಳಾದ ನಾವು ಯಾವದನ್ನೂ ತಿಳಿಯದೆ ಬಡಿದಾಡುವದು ಶ್ರೇಯಸ್ಕರವಲ್ಲ.

ಹಿಟ್ಟನ ಮೇಲೆ ದೇವಮೂಲ, ಋಷಿಮೂಲ, ನದೀಮೂಲಗಳನ್ನು ಎಣಿಸಬಾರದೆಂದು ಹೇಳುವ ಹಿರಿಯರ ವಚನದಂತೆ ನಾವೀಗ ಯಾವುದೊಂದನ್ನೂ ಕೆಳಗೂ ಮೇಲೆಂದೆಣಿಸದೆ ಉಭಯತ್ರದಲ್ಲಿಯೂ ನಿಕಟವಾದ ಭಕ್ತಿಯನ್ನಿಟ್ಟು ನಡಕೊಳ್ಳುವದೇ ಮೇಲಾದದ್ದು.



# ಪರಿಶಿಷ್ಟ

## ಶ್ರೀ ರಾಘವೇಂದ್ರತೀರ್ಥಶ್ರೀಪಾದಂಗಳವರ

| ಸಂಖ್ಯೆ | ಆಶ್ರಮನಾಮಧೇಯ | ಪೂರ್ವಾಶ್ರಮ ನಾಮಧೇಯ | ಸಂಸ್ಥಾನ ಆಳಿದ್ದು ವ. | ಮಾ. | ದಿ. | ವೃಂದಾ ಶಕೆ. |
|---|---|---|---|---|---|---|
| ೧ | ಶ್ರೀಮಧ್ವಾಚಾರ್ಯರು. | ವಾಸುದೇವಾಚಾರ್ಯರು | ೬೩ | ೧೦ | ೯ | ೧೨೩೯ |
| ೨ | ಶ್ರೀಪದ್ಮನಾಭತೀರ್ಥರು. | ಅನಂದಭಟ್ಟರು (ಶೋಭನಭಟ್ಟರು) | ೬ | ೯ | ೨೦ | ೧೨೪೬ |
| ೩ | ಶ್ರೀನರಹರಿತೀರ್ಥರು. | ಶಾಮಶಾಸ್ತ್ರಿಗಳು | ೯ | ೧ | ೨೩ | ೧೨೫೫ |
| ೪ | ಶ್ರೀಮಾಧವ ತೀ. | ವಿಷ್ಣುಶಾಸ್ತ್ರಿಗಳು | ೧೬ | ೮ | ೮ | ೧೨೭೨ |
| ೫ | ಶ್ರೀಅಕ್ಷೋಭ್ಯ ತೀ. | ಗೋವಿಂದಶಾಸ್ತ್ರಿಗಳು | ೧೫ | ೨ | ೨೦ | ೧೨೮೭ |
| ೬ | ಶ್ರೀಜಯ ತೀ. (ಟೀಕಾಚಾರ್ಯರು.) | ಧೋಂಡೋ ರಘುನಾಥ | ೨೨ | ೭ | ೦ | ೧೩೧೦ |
| ೭ | ಶ್ರೀವಿದ್ಯಾಧಿರಾಜರು. | ಕೃಷ್ಣಭಟ್ಟರು | ೩ | ೯ | ೧೩ | ೧೩೧೪ |
| ೮ | ಶ್ರೀಕವೀಂದ್ರ ತೀ. | ವಾಸುದೇವಶಾಸ್ತ್ರಿಗಳು | ೬ | ೧೧ | ೬ | ೧೩೨೧ |
| ೯ | ಶ್ರೀವಾಗೀಶ ತೀ. | ರಘುನಾಥಾಚಾರ್ಯರು | ೮ | ೦ | ೯ | ೧೩೨೯ |
| ೧೦ | ಶ್ರೀರಾಮಚಂದ್ರತೀ. | ಮಾಧವಶಾಸ್ತ್ರಿಗಳು | ೨೯ | ೦ | ೧೯ | ೧೩೫೮ |
| ೧೧ | ಶ್ರೀವಿಬುಧೇಂದ್ರ ತೀ. | ರಘುನಾಥಭಟ್ಟರು | ೫೦ | ೭ | ೪ | ೧೪೦೮ |
| ೧೨ | ಶ್ರೀಜಿತಾಮಿತ್ರ ತೀ. | ಅನಂತಪ್ಪನವರು (ಜಿತ್ತಪ್ಪ) | ೧೨ | ೦ | ೨೦ | ೧೪೨೦ |
| ೧೩ | ಶ್ರೀರಘುನಂದನತೀ. | ರಾಮಚಂದ್ರಾಚಾರ್ಯರು | ೩೬ | ೧೧ | ೧೩ | ೧೪೫೫ |
| ೧೪ | ಶ್ರೀಸುರೇಂದ್ರ ತೀ. | ವೆಂಕಟಕೃಷ್ಣಾಚಾರ್ಯರು | ೧೨ | ೬ | ೨೬ | ೧೪೬೧ |
| ೧೫ | ಶ್ರೀವಿಜಯೀಂದ್ರ ತೀ. | ವಿಠಲಾಚಾರ್ಯರು | ೫೬ | ೫ | ೧೬ | ೧೫೧೭ |
| ೧೬ | ಶ್ರೀಸುಧೀಂದ್ರ ತೀ. | ನಾರಾಯಣಾಚಾರ್ಯರು | ೨೮ | ೮ | ೨೦ | ೧೫೪೫ |

